



# ಬಹುಮುಖ ಕಲಾವಿದ ವಿ. ಗೋಪಾಲ್

**ವ**ರ್ಣಚಿತ್ರ, ವ್ಯಂಗ್ಯಚಿತ್ರ, ಛಾಯಾಚಿತ್ರ, ಮಣ್ಣಿನ ಮೂರ್ತಿ ತಯಾರಿಕೆ... ಹೀಗೆ ಕಲೆಯ ವಿವಿಧ ಪ್ರಕಾರಗಳಲ್ಲಿ ತಮ್ಮ ಕೈಚಳಕ ತೋರಿಸುತ್ತಿರುವವರು ಹಿರಿಯ ಕಲಾಪ್ರತಿಭೆ ವಿ. ಗೋಪಾಲ್. ಕೋಲಾರ ಜಿಲ್ಲೆಯ ಮಾಲೂರು ಇವರ ಹುಟ್ಟೂರು. ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯ ಉದ್ಯೋಗಿಯಾಗಿ ದುಡಿದು ನಿವೃತ್ತರಾಗಿದ್ದಾರೆ.

ಹಿರಿಯ ಕಲಾವಿದ ಎಂ. ಟಿ. ವಿ. ಆಚಾರ್ಯ ಅವರ ಆಪ್ತ ಶಿಷ್ಯರಾಗಿ, ಅವರಿಂದ ವರ್ಣಚಿತ್ರ ತರಬೇತಿ ಪಡೆದರು. ವ್ಯಂಗ್ಯಚಿತ್ರ ಕಲೆಯನ್ನು ಸ್ವತಂತ್ರವಾಗಿ ಮೈಗೂಡಿಸಿಕೊಂಡರು. ಜೊತೆಗೆ ಫೋಟೋಗ್ರಫಿಯನ್ನು ಒಂದು ಹವ್ಯಾಸವಾಗಿಸಿಕೊಂಡು ಬೆಳೆಸಿಕೊಂಡರು.

ಮೈಸೂರು ದಸರಾ ಕಲಾ ಪ್ರದರ್ಶನ, ಅಖಿಲ ಭಾರತ ಕಲಾ ಪ್ರದರ್ಶನ, ಕನ್ನಡ ಸಾಹಿತ್ಯ ಪರಿಷತ್ ಸುವರ್ಣ ಮಹೋತ್ಸವದಲ್ಲಿ ಕಲಾ ಪ್ರದರ್ಶನ, ವೆಂಕಟಪ್ಪ ಆರ್ಟ್ ಗ್ಯಾಲರಿಯಲ್ಲಿ ಹಾಗೂ ೨೦೦೮ರ ಜುಲೈ ಎರಡನೇ ವಾರ ಬೆಂಗಳೂರಿನ ಇಂಡಿಯನ್ ಕಾರ್ಟೂನ್ ಗ್ಯಾಲರಿಯಲ್ಲಿ ಇವರ ಕೃತಿಗಳ ಪ್ರದರ್ಶನ ಜರುಗಿವೆ.

'ನಗೆ ಚಿತ್ರಗಳು' ಎಂಬ ಇವರ ಮೊದಲ ವ್ಯಂಗ್ಯಚಿತ್ರ ಸಂಕಲನವು ೧೯೮೨ರಲ್ಲಿ ಪ್ರಕಟವಾಗಿದೆ. ೨೦೦೮ರಲ್ಲಿ ಎರಡನೇ ವ್ಯಂಗ್ಯಚಿತ್ರ ಸಂಕಲನ ಪ್ರಕಟವಾಗಿದೆ. ಈವರೆಗೆ ಇವರ ೫ ಸಾವಿರಕ್ಕೂ ಹೆಚ್ಚು ವ್ಯಂಗ್ಯಚಿತ್ರಗಳು ನಾಡಿನ ಹಲವಾರು ಪತ್ರಿಕೆಗಳಲ್ಲಿ ಪ್ರಕಟವಾಗಿವೆ.




ಚಿತ್ರ-ಬರಹ : ಜಿ. ಅರ್ಚನಾ ಬೊಮ್ನಳ್ಳಿ , ಬೊಮ್ನಳ್ಳಿ , ಶಿರಸಿ ತಾ॥ (ಉತ್ತರ ಕನ್ನಡ) - ೫೮೧ ೪೦೨





# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...


ಅಸಂಘಟಿತ ಕಾರ್ಮಿಕರ ಹಿತರಕ್ಷಣೆಗೆ ಅಗತ್ಯವಿರುವ ಕ್ರಮಗಳು
ಅರ್ಜುನ್ ಸೇನ್‌ಗುಪ್ತ ವರದಿ ... ೧೧
ಸಾರ್ವಜನಿಕ ಸಂಪತ್ತಿನ ಹರಾಜು — ಡಾ|| ಸಿದ್ದನಗೌಡ ಪಾಟೀಲ ... ೧೦
ಡಾ|| ರಾ. ಚಿಂ. ಢೇರೆಯವರ ಜೊತೆ ಸಂದರ್ಶನ — ಡಾ|| ರಹಮತ್ ತರೀಕೆರೆ ... ೨೭

ಅದೊಂದು ಸಂಸ್ಕೃತಿ — ಅಬ್ಬೂರಿ ಛಾಯಾದೇವಿ ... ೧೭
ಪಲ್ಲಟ — ನಾ. ದಿವಾಕರ ... ೨೦
ಅದ್ದುವಿನ ಅವಸ್ಥೆ (ಪಡ್ನೂರಿನ ಪಾಠಗಳು) — ಎಸ್. ಆರ್. ವಿಜಯಶಂಕರ ... ೧೪
ಕೋಟಿಗೆ ಕಾದುಕೂತ ಶ್ರೀ ಬಂಡೇಶ್ವರ — ಬೀರಣ್ಣ ... ೪೩
ಹೊಸ್ತಿಲು — ಇವಾನ್ ಟರ್ಗೆನೆವ್ ... ೨೯
ಕಾವ್ಯಧಾರೆ — ೧೮, ೨೪, ೨೬, ೩೪, ೬೦, ೬೨

ಧಾರ್ಮಿಕ ಸಂಘರ್ಷ ನಿಲ್ಲಲಿ ! — ಬಿ. ವಿ. ಕಕ್ಕಿಲ್ಲಾಯ ... ೫೦
ಬಾಬಾಬುಡನ್‌ಗಿರಿ – ಸವಾಲೆಸೆದಿರುವ ಕೋರ್ಟ್ ಆದೇಶ — ಶಿವಸುಂದರ್ ... ೫೧

ಹನ್ನೊಂದನೆಯ ಪಂಚವಾರ್ಷಿಕ ಯೋಜನೆಯ ಗುರಿ ಮತ್ತು ಕಠಿಣ ಸವಾಲುಗಳು
ಎಂ. ಬಿ. ನಾಯ್ಕ್ ... ೨೫

ಸಮೂಹ ಮಾಧ್ಯಮಗಳು ಮತ್ತು ಯುವಜನತೆ
ಡಾ|| ಸತೀಶ್ ಕುಮಾರ್ ಅಂಡಿಂಜೆ ... ೫೩
ಮರೆಯಲಾರದ ಕಾರ್ಮಿಕ ಮುಷ್ಕರದ ನೆನಪಿನಲ್ಲಿ — ಸಿ. ಯತಿರಾಜು ... ೫೫
ಲಿಪಿಗೆ ಭಾಷೆಯನ್ನು ಹೊಂದಿಸುವುದಕ್ಕಿಂತ ಭಾಷೆಗೆ ಲಿಪಿಯನ್ನು ಹೊಂದಿಸುವುದೇ ಸರಿ
ಜಿ. ವೀರಭದ್ರಗೌಡ ... ೫೯

ಹುಡುಕುವ ಹಾದಿಯಲ್ಲಿ ('ಗುಲಾಬಿ ಟಾಕೀಸ್' ಕುರಿತ ಅನಿಸಿಕೆ) — ಬಿ. ಸುರೇಶ ... ೩೧
ಜಾಗತೀಕರಣ : ಬಲಪಂಥೀಯರ ಸುಳ್ಳು — ಕು. ಸ. ಮಧುಸೂದನ ... ೩೫

ಉತ್ತರ ಕರ್ನಾಟಕದಲ್ಲಿಯ ಎಳ್ಳಅಮವಾಸೆ ಹಬ್ಬದ ವೈಶಿಷ್ಟ್ಯ
ಎಚ್. ಬಿ. ನಡುವಿನಕೇರಿ ... ೩೭

ಬಸವಣ್ಣ ಮತ್ತು ಲೋಹಿಯಾ — ಡಾ|| ದಸ್ತಗೀರ್‌ಸಾಬ್ ದಿನ್ನಿ ... ೩೯
ಸಮೃದ್ಧವಾದ ಫಸಲನ್ನು ಹೊತ್ತ ಗಟ್ಟಿ ಪಿಂಗಾರ, 'ತುಳು ಸಾಹಿತ್ಯ ಚರಿತ್ರೆ'
ಡಾ|| ಕವಿತಾ ರೈ ... ೫೭

ವೃದ್ಧಾಪ್ಯದ ವಿಚಾರಗಳು — ಡಾ|| ಡಿ. ಕೆ. ಮಹಾಬಲರಾಜು ... ೪೧
ಸಾಮ್ರಾಜ್ಯಶಾಹಿ ಧೋರಣೆಗಳಾಗಿ ಪಠ್ಯ ಮತ್ತು ಪಾಠಾಂತರಗಳು
ಡಾ|| ವೀರೇಶ ಬಡಿಗೇರ ... ೪೫

ನ್ಯೂಕ್ಲಿಯರ್ ಒಪ್ಪಂದ ಮುಂದಿನ ಹೆಜ್ಜೆ — ಅಡ್ಯನಡ್ಕ ಕೃಷ್ಣಭಟ್ ... ೪೭

೧೨೩ ಒಪ್ಪಂದ ಎಂದಿದ್ದರೂ ಭಾರತಕ್ಕೆ ಅಪಾಯ — ಸೀಯಾರ್ಕೆ ... ೪೯

ಹೊಸ ಓದು — ಡಾ|| ಸುಜಾತ ಲಕ್ಷ್ಮೀಪುರ ... ೪೮
ಆಕಾಶಗಂಗೆಯ ಪರಿಚಯ — ಡಾ|| ಬಿ. ಎಸ್. ಶೈಲಜಾ ... ೩೬
ಚಿಂತೆಯ ಜಾಡ್ಯವ ಕೊಡವಿ ಎದ್ದು ನಿಲ್ಲಬೇಕು — ಡಾ|| ಸುಜಾತ ಲಕ್ಷ್ಮೀಪುರ ... ೬೧



ಚಿತ್ರಗಳು : ಆಚಾರ್ಯ, ವೆಂಕಟ್, ಶ್ರೀಹರಿ, ಜಿ. ಎಂ. ಬೊಮ್ನಳ್ಳಿ, ಬಿ. ವಿಲ್ಸನ್
ಮುಖಚಿತ್ರ : ಮಹಾತ್ಮ ಗಾಂಧಿ ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಕೋ**ಸಿ ನದಿಯ ಪ್ರವಾಹದಿಂದ ನೊಂದವರು ಚೇತರಿಸಿಕೊಳ್ಳುವ ಹಾದಿ ಇನ್ನೂ ದುರ್ಗಮವೇ ಆಗಿರುವಾಗ ನಮ್ಮ ರಾಜ್ಯದಲ್ಲಿ ಕ್ರೈಸ್ತ ಪಂಥದವರ ಕೋಸಿಯನ್ನು ಕಿತ್ತುಹಾಕುವ ಕ್ಷುದ್ರ ಕೆಲಸ ಹಿಂದೆಂದಿಗಿಂತಲೂ ಹೆಚ್ಚು ಹಿಂಸಾತ್ಮಕವಾಗಿ ಮತ್ತು ಖಂಡನೀಯವಾಗಿ ಬೆಳೆದಿದೆ. ಅದನ್ನು ನಗಣ್ಯವೆಂಬಂತೆ ಮಾಡುವ ಭೀಕರ ಹತ್ಯೆಗಳು ದೆಹಲಿಯ ಬಾಂಬ್ ಸ್ಫೋಟಗಳಿಂದ ನಡೆದಿದೆ. ಇನ್ನು ನಮ್ಮ ದೇಶದಲ್ಲಿ ನಿಸೂರಾಗಿ ಬಾಳುವ ದಿನಗಳು ಮತ್ತೆ ಬಂದಾವೇ ಎಂಬ ಆತಂಕ ಸುಳಿದಾಡುತ್ತಿದೆ. ಈ ಬರ್ಬರ ಕೃತ್ಯಗಳನ್ನು ಖಂಡಿಸದಿರುವವರು ಯಾರೂ ಇಲ್ಲ, ಆದರೆ ಅದಕ್ಕೂ ಮುಂದೆ ನಾವು ಮಾಡಬೇಕಾದ್ದೇನೆಂಬ ಚಿಂತೆ ಅಷ್ಟೇ ಗಟ್ಟಿಯಾಗಿ ನಮ್ಮನ್ನಾವರಿಸಿಲ್ಲ. ದೆಹಲಿಯ ಬಾಂಬ್ ಸ್ಫೋಟಗಳಿಗೆ ಕಾರಣರಾರೆಂಬುದು ಗೂಢವಾಗೇನೂ ಇಲ್ಲ. ಖಚಿತವಾಗಿ ಇಂಥವರೇ ಎಂದು ವ್ಯಕ್ತಿಗಳನ್ನು ಹಿಡಿಯಲಾಗದಿದ್ದರೂ ಯಾವ ಸಂಘಟನೆ ಅದನ್ನು ಮಾಡಿದೆ ಮತ್ತು ಮುಂದೆಯೂ ಮಾಡುವುದಾಗಿ ಘೋಷಿಸಿದೆ ಎಂಬುದು ಸಾರ್ವಜನಿಕ ತಿಳುವಳಿಕೆಯಾಗಿದೆ. ಪೋಟಾ ಕಾಯಿದೆ ಇದ್ದಿದ್ದರೆ ಅಂಥದನ್ನು ತಡೆಯಬಹುದಾಗಿತ್ತೆಂಬುದು ಕೇವಲ ಆಂತರಿಕ ರಾಜಕೀಯದಲ್ಲಿನ ಒಂದು ಕುಹಕ ಹೇಳಿಕೆ. ದೇಶದಲ್ಲಿ ಅನುಸರಿಸಲಾಗುತ್ತಿರುವ ನೀತಿಗಳು, ಪ್ರಸಾರ ಮಾಡಲಾಗುತ್ತಿರುವ ಭಾವನೆಗಳು ಮತ್ತು ದೇಶವು ಅಮೆರಿಕಾದೊಡನೆ ಬೆಳೆಸುತ್ತಿರುವ ಅಪಾಯಕಾರಿ ಬಾಂಧವ್ಯ ಇವೆಲ್ಲಾ ಬಾಂಬ್ ಸ್ಫೋಟಗಳನ್ನು ಮುಂದಿನ ದಿನಗಳಲ್ಲಿ ಇನ್ನೂ ಹೆಚ್ಚಾಗಿಸುವ ಸಾಧ್ಯತೆಗಳಿವೆ. ಅಂದರೆ, ಬಾಂಬ್ ಸ್ಫೋಟಿಸುವವರನ್ನು ಸಮರ್ಥಿಸಬೇಕೆಂದು ಇದರರ್ಥವಲ್ಲ. ಅವರನ್ನು ಗುರುತಿಸಲು ಸುಲಭವಲ್ಲದ ಮಟ್ಟಕ್ಕೆ ಅವರ ಜಾಲ ಹೆಚ್ಚಿಕೊಳ್ಳುತ್ತಿದೆಯೆಂದು ಇದರರ್ಥ. ಮಾನವ ಸಹಜವಾದ ಗುಣಗಳನ್ನು ಕಳೆದು ಕೊಂಡ ವಿಪತ್ಕಾರಿಗಳು ಇಂತಹ ದ್ರೋಹದ ಕೆಲಸ ಮಾಡುತ್ತಿದ್ದಾರೆಂಬುದು ನಿರ್ವಿವಾದ. ಅವರಿಗೆ ಯಾವ ಮತಧಾರ್ಮಿಕ, ನೈತಿಕ, ಕಟ್ಟುಪಾಡುಗಳೂ ಇಲ್ಲ ಮತ್ತು ಯಾರ ಬುದ್ಧಿವಾದಕ್ಕೂ ನಿಲುಕುವವರಲ್ಲ. ಬುದ್ಧಿ ಹೇಳಬಹುದಾದ ಕೆಲವು ಮುಲ್ಲಾಗಳು ಅವರನ್ನು ಅಪಾಮಾರ್ಗಕ್ಕೆಳೆಯುವ ಉಪದೇಶವನ್ನೇ ನೀಡುತ್ತಿದ್ದಾರೆಂಬ ವರದಿಗಳಿವೆ. ನಮ್ಮ ರಾಜಕೀಯ-ಸಾಂಸ್ಕೃತಿಕ ನೀತಿಗಳನ್ನು ಪುನರವಲೋಕನಕ್ಕೆ ಗುರಿಮಾಡುವುದು ಮತ್ತು ಹೀನ ಉಪದೇಶ ನೀಡುವ ಮತಧಾರ್ಮಿಕ ಮುತ್ಸದ್ದಿಗಳನ್ನು ಹದ್ದುಬಸ್ತಿನಲ್ಲಿ ಇಡುವುದು ತಕ್ಷಣದ ಕೆಲಸವಾಗಿದೆ. ಬುಷ್ ಬಂಧುಗಳ ಕೋಡಿಯು ಭಾರತಕ್ಕೆ ಹರಿಯುವುದು ಜಾಸ್ತಿಯಾದಾಗ ಈ ಭಯೋತ್ಪಾದಕರ ಸಂತತಿಯೂ ಇಮ್ಮಡಿಗೊಳ್ಳುತ್ತದಲ್ಲಾ ಎಂಬುದನ್ನು ನವದೆಹಲಿಯ ನಾಯಕಮಣಿಗಳು ಗಮನಿಸಿರುವಂತೆ ತೋರುವುದಿಲ್ಲ. ಬಂದೂಕಿನಿಂದ ಅವರನ್ನು ಹಿಮ್ಮೆಟ್ಟಿಸುವುದು ಸಾಕೆ? ಆಂತರಿಕವಾಗಿ ಅವರಿಗಿರುವ ನೆಲೆಗಳನ್ನು ಶೋಧಿಸುವುದು ಹೇಗೆ ಮತ್ತು ಅವನ್ನು ನಿಷ್ಕ್ರಿಯಗೊಳಿಸುವ ಮಾರ್ಗವೇನು ಎಂಬುದನ್ನು ಸಹ ಆಳವಾಗಿ ಅರಿಯಬೇಕಾಗಿದೆ.

ಈ ಭಯೋತ್ಪಾದಕರು ತಮ್ಮ ನಾಶ ಮತ್ತು ಹಿಂಸೆಯ ಕ್ರಿಯೆಗಳನ್ನು ಗುಟ್ಟಾಗಿ ಮಾಡುತ್ತಾರೆ, ಅವರು ಪತ್ತೆಯಾಗುವುದಿಲ್ಲ, ಅವರನ್ನು ಶಿಕ್ಷಿಸುವುದು ಅಷ್ಟು ಸುಲಭವಲ್ಲ. ಅವರ ಉದ್ದೇಶ ನಮ್ಮ ದೇಶದ ಸಮಾಜವನ್ನು ವಿಚ್ಛಿದ್ರಗೊಳಿಸುವುದು, ದ್ವೇಷವನ್ನು ಹರಡುವುದು ಮತ್ತು ಅರಾಜಕತೆಯನ್ನು ಹೆಚ್ಚಿಸುವುದು. ಇಂಥದೇ ಉದ್ದೇಶವನ್ನು ಪೂರೈಸುವ ಇನ್ನೊಂದು ಬಣವು ನಮ್ಮಲ್ಲಿ ಕಳೆದೆರಡು ದಶಕಗಳಿಂದ ಬೆಳೆದಿದೆ. ಅದೂ ಒಂದು ಮತಧರ್ಮದ ಪರವಾಗಿ, ಅದರ ಉದ್ಧಾರಕ್ಕಾಗಿ ಮತ್ತು ಅದಕ್ಕೆ ಒದಗಿಬಂದಿದೆಯೆಂಬ ಕುತ್ತಿನ 'ನಿವಾರಣೆ'ಗಾಗಿ ಕೆಲಸಮಾಡುವುದಾಗಿ ಬಹಿರಂಗವಾಗಿ ಘೋಷಿಸಿಕೊಳ್ಳುತ್ತದೆ. ಅದನ್ನು ಬಜರಂಗ ದಳವೆಂದು ಹೆಸರಿಸಲಾಗಿದೆ. ಆದರೆ ಅದರ ಬೇರುಗಳು ಇನ್ನೂ ಪುರಾತನವಾದವು, ೧೯೨೪ರ ಕಾಲದಿಂದ ಬೆಳೆಯುತ್ತಾ ಬಂದಿರುವವು. ಇತ್ತೀಚಿನ ಅವರ ಭಯೋತ್ಪಾದಕ ಚಟುವಟಿಕೆಗಳಲ್ಲಿ ಚರ್ಚುಗಳನ್ನು ಭಗ್ನಗೊಳಿಸುವುದು, ಕ್ರೈಸ್ತ ಮತಾವಲಂಬಿಗಳನ್ನು ಚಚ್ಚುವುದು, ಅವರ ಮನೆ-ಗುಡಿಸಲುಗಳನ್ನು ಸುಡುವುದು, ಎಲ್ಲಾ ಸೇರಿವೆ. ಇವರು ತಮ್ಮ ಕುಕಾರ್ಯಗಳನ್ನು ಬಹಿರಂಗವಾಗಿ ಮಾಡುತ್ತಾರೆ, ಅವರನ್ನು ಬೇಕಾದರೆ ಹಿಡಿಯಬಹುದು, ಶಿಕ್ಷಿಸಬಹುದು. ಆ ಬಣದ ನಾಯಕರು ಪತ್ರಿಕೆಗಳಿಗೆ ಹೇಳಿಕೆಗಳನ್ನು ನೀಡಿ ''ಕರ್ನಾಟಕದಲ್ಲಿ ಕಂಧಮಾಲ್ ಮಾಡುತ್ತೇವೆ'' ಎಂದು ಘೋಷಿಸುತ್ತಾರೆ. ದಾವಣಗೆರೆ, ಮಂಗಳೂರು, ಉಡುಪಿ, ಚಿಕ್ಕಮಗಳೂರು, ಬೆಂಗಳೂರು, ಮುಂತಾದೆಡೆಗಳಲ್ಲಿ ಅದನ್ನು ಮಾಡಿ ತೋರಿಸಿದ್ದಾರೆ. ಅವರ ಸರ್ಕಾರವಿಲ್ಲದಿದ್ದಾಗಲೇ ಅವರಿಗೆ ಪ್ರತಿಬಂಧಕಗಳನ್ನು ಪೊಲೀಸರು ಒಡ್ಡಲಿಲ್ಲ; ಈಗ ಬಜರಂಗ ಸರ್ಕಾರವಿರುವಾಗ ಪೊಲೀಸರಿಂದ ಏನು ನಿರೀಕ್ಷಿಸಬಹುದು? ಕ್ರೈಸ್ತಮತದ ಅನುಯಾಯಿ ಬುದ್ಧಿಜೀವಿಯೊಬ್ಬರು ತಮ್ಮ ಮತಬಾಂಧವರಿಗೆ ಕ್ರಿಸ್ತನ ವಾಣಿಯನ್ನು ಜ್ಞಾಪಿಸಿದ್ದಾರೆ: ''ಭಗವಂತ, ಈ ಅಪರಾಧಿಗಳನ್ನು ಕ್ಷಮಿಸು; ಅವರೇನು

(೮ನೇ ಪುಟಕ್ಕೆ)




ಸಂಪುಟ-೧೦ ಸಂಚಿಕೆ-೩ ಅಕ್ಟೋಬರ್ ೨೦೦೮

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@vsnl.com**
**website : www.navakarnataka.com**

# ಇದು ಗಾಂಧಿಯ ನಾಡು

## ಸಂಪಾದಕೀಯ

**ದೇ**ಶದಲ್ಲಿ ಕಳೆದ ಮೂರು ತಿಂಗಳ ವಿದ್ಯಮಾನಗಳು ಘೋರವಾಗಿದ್ದುವು. ಒಂದು ಕಡೆ ಪ್ರಕೃತಿಯ ವಿಕೋಪ, ಇನ್ನೊಂದು ಕಡೆ ದ್ವೇಷದ ವಾತಾವರಣ. ಮಳೆ, ಪ್ರವಾಹ, ಊರು - ಕೇರಿಗಳ ಮುಳುಗಡೆ, ಸಂತ್ರಸ್ತರ ಅಸಹಾಯಕತೆ, ಬೇರೆ ರಾಜ್ಯಗಳಿಂದ ದೊರೆಯುವ ಸಾಂತ್ವನ, ಇತ್ಯಾದಿಗಳಲ್ಲಿ ಮನುಷ್ಯನ ಪಾತ್ರ ಕಡಿಮೆ. ಕಟ್ಟೆ, ದಂಡೆ ಮುಂತಾದುವನ್ನು ಕಟ್ಟುವಾಗ ಗುಳುಂ - ಸಂಸ್ಕೃತಿಯ ಹೀನಾಯ ಪರಿಣಾಮ ಸ್ವಲ್ಪ ಇದ್ದಿರಬಹುದು; ಆದರೆ ಪ್ರಕೃತಿ ಮಾತೆಯ ಮುನಿಸಿಗೆ ಅದಷ್ಟೇ ಕಾರಣವಾಗುವುದಿಲ್ಲ. ನೀರಿಲ್ಲದೆ ಹಾಹಾಕಾರ ಉಂಟಾಗುವ ನಾಡಿನಲ್ಲಿ ಯಥೇಚ್ಛ ನೀರು ಸುರಿದರೂ ಅನಾಹುತವೇ. ಇದಕ್ಕೆ ಪ್ರತಿಯಾಗಿ, ಮನುಷ್ಯನೇ ಹಚ್ಚಿಕೊಳ್ಳುವ ಬೆಂಕಿ ಇನ್ನೊಂದೆಡೆ ದೇಶವನ್ನು ಸುಟ್ಟು ಕರುಕಲಾಗಿಸಿದೆ. ಮೊದಲಿಗೆ ಜಮ್ಮು-ಕಾಶ್ಮೀರ, ಆಮೇಲೆ ಒರಿಸ್ಸಾ, ಕರ್ನಾಟಕ, ಹೀಗೆ ಪಟ್ಟಿ ಬೆಳೆದಿದೆ. ಉಗ್ರಗಾಮಿಗಳ ಹಿಂಸೆಯನ್ನು ಖಂಡಿಸುವ ಜನರಿಗೆ ಈಗ ಅಲ್ಪಸಂಖ್ಯಾತರ ಮೇಲೆ ಹರಿಬಿಟ್ಟಿರುವ ಹಿಂಸೆ ಕಾಣುವುದಿಲ್ಲ. ಹಿಂದೆ ಮಸೀದಿಯನ್ನು ಉರುಳಿಸಲಾಯಿತು, ಈಗ ಚರ್ಚುಗಳನ್ನು ಧ್ವಂಸ ಮಾಡುವ ಇಲ್ಲವೆ ಸುಡುವ ''ಧಾರ್ಮಿಕ'' ಪ್ರಜ್ಞೆ ಜಾಗೃತವಾಗಿದೆ. ಪುಸ್ತಕದ ಮತ್ತು ಭಾವನಾತ್ಮಕವಾದ ಭಾರತೀಯ ಸಂಸ್ಕೃತಿಯ ಘನತೆಯನ್ನು ಸಾರುತ್ತಲೇ ನಿಜಜೀವನದಲ್ಲಿ ಅತ್ಯಂತ ಕುಸಂಸ್ಕೃತಿಯ ನಡತೆಯನ್ನು ತೋರ್ಪಡಿಸುವುದು ನಮ್ಮ ಸಂಪ್ರದಾಯವಾಗಿಬಿಟ್ಟಿದೆ. ಕೇಡು ಬಯಸುವವರಿಗೆ ಪ್ರತಿರೋಧ ಒಡ್ಡಬೇಡ, ಒಂದು ಕೆನ್ನೆಗೆ ಹೊಡೆದರೆ ಇನ್ನೊಂದು ಕೆನ್ನೆಯನ್ನು ತೋರಿಸು, ಎಂದ ಯೇಸುವಿನ ಹಿಂಬಾಲಕರೆನ್ನಲಾದವರು ಸಹ ಈ ಬಾರಿ ಒರಿಸ್ಸಾದಲ್ಲಿ ಕತ್ತಿಗಳನ್ನು ಝಳಪಿಸಿದರೆಂದು ವರದಿಯಾಗಿದೆ. ಮತಾಂತರದ ಪ್ರಶ್ನೆಯನ್ನು ದೊಡ್ಡದು ಮಾಡಿ ಸಾಮೂಹಿಕ ಮತಿಭ್ರಷ್ಟತೆಯತ್ತ ಸಾಗುತ್ತಿರುವುದು ಇಂದಿನ ದುರಂತ. ಯೇಸುಪೂರ್ವ ಕಾಲದ ''ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲು'' ಎಂಬ ನೀತಿಯನ್ನು ಎಲ್ಲ ಬಣಗಳವರೂ ಅನುಸರಿಸುತ್ತಾ, ನಾವೆಲ್ಲಾ ಒಂದು ಮತ್ತು ಒಂದಾಗಿಯೇ ಬಾಳಬೇಕಾಗಿದೆ ಎಂಬುದನ್ನು ಪಕ್ಕಕ್ಕೆ ಸರಿಸಿದ್ದೇವೆ. ಆದರೂ ಯಾಂತ್ರಿಕವಾಗಿ ಗಾಂಧೀಜಿಯ ಸ್ಮರಣೆ ಮಾಡುತ್ತೇವೆ, ಅವರ ಭಾವಚಿತ್ರಕ್ಕೆ ಹಾರ ಹಾಕಿ ಧನ್ಯರಾದಂತೆ ನಟಿಸುತ್ತೇವೆ. ''ಕರುಣಾಳು, ಬಾ ಬೆಳಕೆ'' ಎಂಬ ದೈನ್ಯಭಾವ ಮಾತ್ರ ಜಾಗೃತವಾಗುತ್ತಿಲ್ಲ.

ನಮ್ಮ ಸನ್ನಿವೇಶ ಹೇಗಿದೆಯೆಂದರೆ ಸಮಾಜದ ಒಂದು ವರ್ಗದವರು ಗಾಂಧೀಜಿಯ ಹೆಸರು ಹೇಳಲು ಸಹ ಹಿಂದೇಟು ಹಾಕುತ್ತಾರೆ. ಅವರ ''ಆಧುನಿಕತೆ''ಗೆ ಗಾಂಧೀಜಿ ಸರಿಹೊಂದುವುದಿಲ್ಲ. ಆ ಶ್ರೀಮಂತರ ಮಧ್ಯೆ ಹೊರಗಿನ ನಾವು ಸಹ ಗಾಂಧೀಜಿ ಹೆಸರು ಹೇಳಲಾಗದಂತಹ ವಾತಾವರಣ ನಿರ್ಮಿಸಲಾಗುತ್ತಿದೆ. ಜನಮಾನಸದಲ್ಲಿ ಇನ್ನೂ ಅವರು ಸ್ವಲ್ಪ ಜೀವಂತವಾಗಿ ಇರುವುದರಿಂದ ಅವರ ಹೆಸರನ್ನು ಬಳಸಿಕೊಳ್ಳುವುದು ಈ ಶ್ರೀಮಂತರಿಗೆ ಮತ್ತು ಅವರನ್ನು ಪ್ರತಿನಿಧಿಸುವ ಆಳುವ ವರ್ಗದ ಸರ್ಕಾರಕ್ಕೆ ಬೇಕಾಗಿದೆ. ''ಕಟ್ಟ ಕಡೆಯ ವ್ಯಕ್ತಿಯ ಆಶೋತ್ತರಗಳನ್ನು ಈಡೇರಿಸುವ ಆಶಯ'' ಗಾಂಧೀಜಿಯವರದು. ಮನಮೋಹನ ಸಿಂಗ್ ಸರ್ಕಾರಕ್ಕೆ ''ಕಟ್ಟಕಡೆಯವನು ಸ್ಮಶಾನಕ್ಕೆ ತೊಲಗಲಿ'' ಎಂಬ ನೀತಿ ರುಚಿಸಿದೆ. ಆದ್ದರಿಂದ ದೇಶದಲ್ಲಿ ಎಷ್ಟು ಮಂದಿ ಕೋಟ್ಯಾಧೀಶರು ಫೋರ್ಬ್ಸ್ ನಿಯತಕಾಲಿಕೆಯಲ್ಲಿ ದಾಖಲಾದರು ಎಂಬ ಮಾಹಿತಿಗೆ ಮಹತ್ವವಿದೆ ; ಅರ್ಜುನ್ ಸೇನ್‌ಗುಪ್ತ ವರದಿಯಲ್ಲಿ ನಮೂದಿಸಲಾಗಿರುವ ಅಂಕಿ-ಅಂಶಗಳಿಗೆ ಸುತಾರಂ ಬೆಲೆಯಿಲ್ಲ. ''ಮಹಾತ್ಮ'' ಎನಿಸಿಕೊಳ್ಳಲು ಗಾಂಧೀಜಿ ಅರ್ಹರೇ ಎಂಬ ಪ್ರಶ್ನೆಯನ್ನು ಸಹ ಆಗಾಗ್ಗೆ ಎತ್ತಲಾಗುತ್ತಿದೆ. ಭಗವದ್ಗೀತೆಯಲ್ಲಿ ಹೇಳಿರುವಂತೆ (೭.೧೯) ''ಅನೇಕ ಜನ್ಮಗಳ ಕೊನೆಯಲ್ಲಿ ಸರ್ವಸ್ವವೂ ವಾಸುದೇವನೆಂದು ಯಾರೋ ಜ್ಞಾನಿಯು ತಿಳಿದುಕೊಳ್ಳುತ್ತಾನೆ; ಅಂತಹ ಮಹಾತ್ಮರು ದುರ್ಲಭ.'' ಈ ಅರ್ಥದಲ್ಲಿ ಗಾಂಧೀಜಿ ಮಹಾತ್ಮರು ಹೌದೋ ಅಲ್ಲವೋ ಅದು ಗೌಣ. ಆದರೆ ಜನರ ಜೊತೆ ತಮ್ಮನ್ನು ಏಕೀಭವಿಸಿಕೊಂಡ ಮಹಾತ್ಮರು ಅವರೆಂಬ ಕಾರಣಕ್ಕೆ ರವೀಂದ್ರನಾಥ ಠಾಕೂರರು ಗಾಂಧೀಜಿಗೆ ಮಹಾತ್ಮನ ಪಟ್ಟ ಕಟ್ಟಿದ್ದರು. ''ಜನರ ಜೊತೆ ಏಕೀಭವಿಸಿಕೊಳ್ಳುವುದು'' ಎಂಬ ರಾಜಕೀಯವು ನಮ್ಮಲ್ಲಿ ಲುಪ್ತವಾಗುತ್ತಿದೆ; ಜನರನ್ನು ಒಡೆದು ನೋಡುವುದು, ನಡೆಸಿಕೊಳ್ಳುವುದು, ಹೆಚ್ಚಾಗುತ್ತಿದೆ. ಕಾಶ್ಮೀರ, ಅಸ್ಸಾಂ, ಮಣಿಪುರ, ಇತ್ಯಾದಿ ರಾಜ್ಯಗಳಲ್ಲಿ ಈ ಪ್ರವೃತ್ತಿಯು ಸೃಷ್ಟಿಸಿರುವ ಪ್ರಕ್ಷೋಭೆಯನ್ನು ಕಂಡೂ, ಅಂಥದೇ ಪ್ರವೃತ್ತಿಯನ್ನು ಬೇರೆ ರಾಜ್ಯಗಳಿಗೂ ವಿಸ್ತರಿಸುವ ಮೂರ್ಖತನ, ಅಹಂಕಾರ, ನಮ್ಮೆದುರಿಗೆ ಧುತ್ತನೆ ನಿಂತಿದೆ. ದೇಶದಲ್ಲಿ ಅನೈಕ್ಯತೆಯನ್ನು ದೂರಮಾಡಲು ಬಂದೂಕದ ಶಕ್ತಿ ಸಾಕೆಂಬ ದೃಷ್ಟಿಕೋನವನ್ನು ಪ್ರಚಾರ ಮಾಡಲಾಗುತ್ತಿದೆ. ಇರಾಕ್, ಆಫ್ಘಾನಿಸ್ತಾನಗಳಲ್ಲಿ ಲಕ್ಷಗಟ್ಟಲೆ ಜನರನ್ನು ಕೊಂದು ಜಾರ್ಜ್ ಬುಷ್ ''ಭಯೋತ್ಪಾದಕ''ರನ್ನು ಸದೆಬಡೆಯುತ್ತಾನೆ, ನಾವು ನಮ್ಮ ದೇಶದಲ್ಲಿ ಹಿಂಸೆ ಮತ್ತು ಅರಾಜಕತೆಗಳನ್ನು ಪುರಸ್ಕರಿಸಿ ಅನೈಕ್ಯತೆಯನ್ನು ಸೋಲಿಸುತ್ತೇವೆ ! ಈ ಮಾರ್ಗದಿಂದ ಬುಷ್ ವಿಜಯಿಯಾಗಿಲ್ಲ, ನಾವೂ ಆಗುವುದಿಲ್ಲ. ಗಾಂಧೀಜಿಯ ನಾಡಿನಲ್ಲಿ ಪರ್ಯಾಯ ಮಾರ್ಗವೂ ಲಭ್ಯವಿದೆಯೆಂದು ಹೇಳುವುದಷ್ಟೇ ಉಳಿದಿದೆ.

ಸ್ವತಃ ಗಾಂಧೀಜಿ ತಮ್ಮ ಕನಸಿನ ರಾಮರಾಜ್ಯದಲ್ಲಿ ರಾಜಕುಮಾರ ಮತ್ತು ಕಡುಬಡವ, ಹೀಗೆ ಇಬ್ಬರಿಗೂ ರಕ್ಷಣೆ ದೊರೆಯುವಂತಿರುತ್ತದೆಂದು ಹೇಳಿದ್ದರು. ಅಂತೂ ರಾಮರಾಜ್ಯದಲ್ಲಿಯೂ ಕಡುಬಡವರಿರಬೇಕು! ತಾವು ಬಯಸಿದ್ದ ಸಮಾಜವಾದಿ ವ್ಯವಸ್ಥೆಯನ್ನು ಧರ್ಮದರ್ಶಿಗಳ ಮೂಲಕ ಸಾಧಿಸಬಹುದೆಂದು ಗಾಂಧೀಜಿ ಘೋಷಿಸಿದ್ದರು. ಅಂದರೆ, ಸಂಪತ್ತನ್ನುಳ್ಳ ಬಂಡವಳಿಗರು ಅದನ್ನು ಸಾರ್ವಜನಿಕರ ಒಳಿತಿಗಾಗಿ ಬಳಸುವ ಆದರ್ಶವನ್ನು ಹೊತ್ತ ಧರ್ಮದರ್ಶಿಗಳಾಗಿರಬೇಕೆಂದು ಅವರ ಆಶಯವಾಗಿತ್ತು. ಅದೆಷ್ಟು ಪ್ರಾಯೋಗಿಕವೆಂದು ಸಮಕಾಲೀನ ಚರಿತ್ರೆಯು ಸ್ಪಷ್ಟಪಡಿಸಿದೆ; ಇನ್ನೂ ಅದೇ ಭ್ರಾಂತಿಯನ್ನು ಬೆಳೆಸಿಕೊಳ್ಳುವುದು ಅಪ್ರಸ್ತುತ. ಆದರೆ ಗಾಂಧೀಜಿಯವರು ಇನ್ನೊಮ್ಮೆ ಹೇಳಿದ್ದ ಮಾತುಗಳಿವೆ : ಮೊದಲಿಗೆ ರೈತರು ತೆರಿಗೆ ಸಲ್ಲಿಸುವುದನ್ನು ನಿಲ್ಲಿಸುತ್ತಾರೆ. ಅದು ಅವರಲ್ಲಿ ಹೊಸ ಚೈತನ್ಯ ಮೂಡಿಸುತ್ತದೆ ಮತ್ತು ಸ್ವತಂತ್ರ ಹೋರಾಟಗಳಲ್ಲಿ ತೊಡಗಿಕೊಳ್ಳಲು ಅವರು ಸಮರ್ಥರಾಗುತ್ತಾರೆ. ಅವರ ಮುಂದಿನ ಹೆಜ್ಜೆಯು ಭಾರಿ ಭೂಮಾಲಿಕರ ಜಮೀನನ್ನು ವಶಪಡಿಸಿಕೊಳ್ಳುವುದೇ ಆಗಿರುತ್ತದೆ.

ಗಾಂಧೀಜಿ ಜೀವನಚರಿತ್ರಕಾರ ಲೂಯಿ ಫಿಶರ್ ಈ ಮಾತುಗಳನ್ನು ಬಹುವಾಗಿ ಶ್ಲಾಘಿಸಿದ್ದರು. ಇಂದು ಕರನಿರಾಕರಣೆಯ ಚಳುವಳಿ ಇರಲಿ, ಮನಮೋಹನ ಸಿಂಗರ ವಿಶೇಷ ಆರ್ಥಿಕ ವಲಯಗಳ ಉಪಟಳವನ್ನು ಎದುರಿಸಿದರೆ ರೈತರಿಗೆ ಅದೇ ದೊಡ್ಡ ಸಾಧನೆಯಾಗುತ್ತದೆ. ಅಂದು ಭೂಮಾಲಿಕರ ಪರ ಬ್ರಿಟಿಷ್ ಸರ್ಕಾರವಿತ್ತು; ಇಂದು ಸ್ವತಂತ್ರ ಭಾರತ ಸರ್ಕಾರದ ಪ್ರಧಾನಿ ಮತ್ತು ಪೊಲೀಸರಿದ್ದಾರೆ. ಈ ಮಧ್ಯೆ ಗಾಂಧೀಜಿಗೆ ಸ್ಥಾನವೆಲ್ಲಿಯದು ಎಂಬಂತಾಗಿದೆ. ಆದಾಗ್ಯೂ ಅವರು ದೇಶದ ಜನತೆಗೆ ಬಹಳ

ಹರಿತವಾದ ಆಯುಧವೊಂದನ್ನು ನೀಡಿದ್ದಾರೆ. ಅದನ್ನು ''ಅಭೀಃ'' ಎಂದವರು ಕರೆದಿದ್ದರು. ಅಂದರೆ, ಭೀತಿರಹಿತವಾದ ಅಹಿಂಸಾ ಮಾರ್ಗದ ವ್ಯಾಪಕ ಹೋರಾಟ ಎಂದರ್ಥ. ಅದರಿಂದಲೇ ನಿಜವಾದ 'ಸರ್ವೋದಯ'ವೆಂಬುದು ಸಾಧ್ಯವಾಗುತ್ತದೆಂದು ಅವರ ಖಚಿತ ಅಭಿಪ್ರಾಯವಾಗಿತ್ತು. ಸದ್ಯದಲ್ಲಿ ಗಾಂಧೀಜಿಯವರ ಸರ್ವೋದಯವು ಜನವರಿ ಮೂವತ್ತರಂದು ಭಜನೆಗಳನ್ನು ಏರ್ಪಡಿಸುವುದಕ್ಕಷ್ಟೇ ಸೀಮಿತಗೊಂಡಿದೆ. ೧೯೯೦ರ ದಶಕದಲ್ಲಿ ''ರಾಚನಿಕ ಹೊಂದಾಣಿಕೆ''ಯ ಹೆಸರಿನಲ್ಲಿ ಆರ್ಥಿಕ - ಸಾಮಾಜಿಕ ನೀತಿಗಳನ್ನು ಬದಲಿಸಿ ಬಂಡವಳಿಗರಿಗೆ ಉದಾರ ಸಹಾಯಹಸ್ತ ನೀಡಲಾಯಿತು. ೨೧ನೆಯ ಶತಮಾನದ ಇಂದಿನ ಮೊದಲ ದಶಕದಲ್ಲಿ ''ರಾಚನಿಕ ಮರುಹೊಂದಾಣಿಕೆ'' ಜಾರಿಯಲ್ಲಿದೆ. ಅದು ವಿದೇಶಿ ಬಂಡವಾಳದ ಕೈಂಕರ್ಯಕ್ಕೆ ಭಾರತವನ್ನು ಸಜ್ಜುಗೊಳಿಸುತ್ತಿದೆ. ವಸಾಹತುಶಾಹಿ ದೌರ್ಜನ್ಯವನ್ನು ಮೆಟ್ಟಿನಿಂತ ಗಾಂಧೀಜಿಯವರ ಪರಂಪರೆಯಲ್ಲಿ ಮುನ್ನಡೆದು ನಾವಿಂದು ನವವಸಾಹತುಶಾಹಿಯ ದೈತ್ಯನನ್ನು ಹಿಮ್ಮೆಟ್ಟಿಸಬೇಕಾಗಿದೆ. ಅಂದು ಗಾಂಧೀಜಿ ಸ್ವೀಕರಿಸಿದ್ದ ಸ್ವದೇಶಿ, ಸ್ವಾವಲಂಬನೆಯ ಸವಾಲುಗಳನ್ನು ಮತ್ತೆ ನಾವು ಪರಾಮರ್ಶಿಸಿಕೊಳ್ಳಬೇಕಾಗಿದೆ. ಅದಕ್ಕಾಗಿ ದಿಟ್ಟತನದ ಹೋರಾಟ ನಡೆಸಬೇಕಾಗಿದೆ. ಸ್ವಾವಲಂಬನೆಯೆಂದರೆ ಬೇರೆ ದೇಶಗಳೊಂದಿಗೆ ವ್ಯಾಪಾರೀ ಸಂಬಂಧಗಳನ್ನು ಸರ್ವಥಾ ಇಟ್ಟುಕೊಳ್ಳಕೂಡದೆಂದು ಗಾಂಧೀಜಿ ಉದ್ದೇಶಿಸಿರಲಿಲ್ಲ. ಆದರೆ ನಮ್ಮ ದೇಶದ ಸಾರ್ವಭೌಮತ್ವವನ್ನು ಪರಮಾಣು ಒಪ್ಪಂದದ ಮುಸುಕಿನಲ್ಲಿ ಅಮೆರಿಕಾಕ್ಕೆ ಒತ್ತೆಯಿಡಬೇಕೆಂದೂ ಅವರು ನಿರೀಕ್ಷಿಸಿರಲಿಲ್ಲ. ಬೆಂಗಳೂರಿನ ರಸ್ತೆ ನಿರ್ಮಾಣಕ್ಕೆ ಇಂದು ವಿದೇಶಗಳ ಕಂಟ್ರಾಕ್ಟರುಗಳನ್ನು ಕರೆತರುವುದು ದೊಡ್ಡ ಸಾಹಸ ಎನಿಸಿಕೊಂಡಿದೆ. ಅದರಿಂದ ತಲೆತಗ್ಗಿಸಬೇಕೇ ವಿನಾ ಹೆಮ್ಮೆಯಿಂದ ಬೀಗಬೇಕಾಗಿಲ್ಲವೆಂಬುದು ಗಾಂಧೀಜಿ ಹಾದಿಯಾಗಿದೆ. ಆ ಹಾದಿಯನ್ನು ತೊರೆಯುವುದೆಂದರೆ ಎರಡು ಅಪಾಯಗಳನ್ನು ಆಹ್ವಾನಿಸಿಕೊಂಡಂತೆ : (ಅ) ಸಾಮ್ರಾಜ್ಯಶಾಹಿಯು ನಮ್ಮ ಸಾರ್ವಭೌಮ ರಾಜ್ಯವನ್ನು ನುಂಗಿಹಾಕುತ್ತದೆ; ಮತ್ತು (ಆ) ನಮ್ಮ ದೇಶದ ಪ್ರಭುತ್ವ ಶಕ್ತಿಯು ಪ್ರಜಾಶಕ್ತಿಯನ್ನು ಹೊಸಕಿಹಾಕುತ್ತದೆ, ಸಾರ್ವಜನಿಕ ಸಂಪತ್ತನ್ನು ಪರಭಾರೆ ಮಾಡುತ್ತದೆ, ಪ್ರಜಾಪ್ರಭುತ್ವವಾದಿ ಚಳುವಳಿಗಳನ್ನು ಹತ್ತಿಕ್ಕುತ್ತದೆ. ಇವೆರಡೂ ಕೆಡುಕುಗಳ ನಿವಾರಣೆಗಾಗಿ ಐಕ್ಯಹೋರಾಟವು ಗಾಂಧೀಜಿಯ ಸಂಪ್ರದಾಯದ ಮುಂದುವರಿಕೆಯಾಗುತ್ತದೆ.

ನಾವು ಗಾಂಧೀಜಿಯನ್ನು ಜೀವಂತವಾಗಿರಿಸಬೇಕಾದ್ದು, ಸನ್ಮಾನಿಸಬೇಕಾದ್ದು, ಈ ಹಾದಿಯಲ್ಲಿ ಕ್ರಮಿಸುವುದರಿಂದ ಮಾತ್ರ; ಪೊಳ್ಳು ಮತ್ತು ಕೃತ್ರಿಮ ಘೋಷಣೆಗಳಿಂದಲ್ಲ.

## ಪರ್ಯಾಯ ಸಂಯುಕ್ತ ರಂಗ

ಬರುವ ದಿನಗಳಲ್ಲಿ ಎಡಪಕ್ಷಗಳ ನಿಲುವು ಏನಾಗಿರಬೇಕು ಎನ್ನುವುದು ಇಂದಿನ ರಾಜಕೀಯ ಬೆಳವಣಿಗೆ ಯಾವ ದಿಕ್ಕಿನಲ್ಲಿ ಸಾಗುತ್ತದೆ ಎಂಬುದರಲ್ಲಿ ನಿರ್ಣಾಯಕವಾಗಬಹುದು. ಇಲ್ಲಿಯವರೆಗಿನ ಅವರ ಸಂಯುಕ್ತ ರಂಗ ಕುರಿತ ನೀತಿ ಒಂದು ರೀತಿಯಲ್ಲಿ ವಿಫಲವಾಗಿರುವುದು ವಾಸ್ತವ. ''ಬೂರ್ಷ್ವಾ ಪಕ್ಷಗಳು ನಮ್ಮನ್ನು ಬಳಸಿಕೊಂಡವು, ನಮಗೆ ಮೋಸ ಮಾಡಿದರು'' ಮುಂತಾದ ಪ್ರಲಾಪದಿಂದ ಏನೂ ಪ್ರಯೋಜನವಿಲ್ಲ. ನಿಜವಾಗಿ ಅದು ಆ ಬೂರ್ಷ್ವಾ ಪಕ್ಷಗಳ ರಾಜಕೀಯ ಅವಕಾಶವಾದಿತ್ವವಷ್ಟೆ. ಇದು ಎಡಪಕ್ಷದ ಸಿದ್ಧಾಂತಿಗಳಿಗೆ ತಿಳಿಯದ ವಿಷಯವೇನಲ್ಲ.

ಬೂರ್ಷ್ವಾ ಪ್ರಜಾಪ್ರಭುತ್ವದಲ್ಲಿ ತಮಗೆ ಬಹುಮತವಿಲ್ಲದಾಗ ಒಕ್ಕೂಟ ರಾಜಕೀಯ ಮಾರ್ಗವನ್ನು ಪ್ರತಿಪಾದಿಸಿದವರಲ್ಲಿ ಎಡಚಿಂತನೆಯವರೇ ಮೊದಲಿಗರು. ಒಕ್ಕೂಟ ರಾಜಕೀಯ ಮಾರ್ಗವನ್ನು ಒಂದು ಸಿದ್ಧಾಂತವಾಗಿ ಬಲಪಕ್ಷಗಳ ಸಿದ್ಧಾಂತಿಗಳು ಎಂದೂ ತಾವಾಗೇ ಪ್ರತಿಪಾದಿಸಲಿಲ್ಲ. ಜರ್ಮನಿಯಲ್ಲಿ ನಾಜಿ ಪಕ್ಷ ಚುನಾವಣೆಯ ಪ್ರಕ್ರಿಯೆಯನ್ನು ತಿರುಚಿ, ಅಧಿಕಾರಕ್ಕೆ ಬಂದ ಸಂದರ್ಭದಲ್ಲಿ, ಈ ಸಿದ್ಧಾಂತ ಉದಯವಾದದ್ದು. ನಾಜಿ ಪಕ್ಷ ಮತ್ತು ಅದರ ಸಿದ್ಧಾಂತವನ್ನು ಒಪ್ಪದೆ, ಅದರಿಂದ ಆತಂಕಗೊಂಡಿದ್ದ ದುರ್ಬಲ ಬೂರ್ಷ್ವಾ ಪ್ರಜಾಸತ್ತಾತ್ಮಕ ಪಕ್ಷಗಳಿಗೆ ಡಿಮಿಟ್ರೋವ್ ಪ್ರತಿಪಾದಿಸಿದ ಒಕ್ಕೂಟ ಸಿದ್ಧಾಂತ ಅಂದಿನ ಪರಿಸ್ಥಿತಿಯಲ್ಲಿ ತಮ್ಮ ತಮ್ಮ ಅಸ್ತಿತ್ವ ಉಳಿಸಿಕೊಳ್ಳಲು ಪಥ್ಯವಾಗಿ ಕಂಡಿದ್ದರಲ್ಲಿ ಆಶ್ಚರ್ಯವಿಲ್ಲ. ಹಾಗೆಂದ ಮಾತ್ರಕ್ಕೆ ಅವರು ಎಡ ಆರ್ಥಿಕ ಮತ್ತು ಸಾಮಾಜಿಕ ತತ್ವಗಳನ್ನು ಒಪ್ಪಿದರು ಎಂದೇನೂ ಅಲ್ಲ. ಅವರಲ್ಲಿ ಬಹಳಷ್ಟು ನವಿರಾದ ಕೋಮುವಾದಿ ಫ್ಯಾಸಿಸ್ಟರೂ ಇದ್ದರು. ಎಡಪಕ್ಷಗಳು, ತಮ್ಮ ಧೋರಣೆಗಳು ಬಹುಭಾಗ ಜನತೆಗೆ ಸ್ವೀಕಾರಾರ್ಹವಾದುವು, ಅದು ಜನತೆಗೆ ತಲುಪಿದಾಗ, ಇದೇ ಪ್ರಜಾಪ್ರಭುತ್ವದೊಳಗೆ ತಾವು ಬಹುಮತ ಸಾಧಿಸಲು, ಜನತೆಯನ್ನು ತಲುಪಲು, ತಾತ್ಕಾಲಿಕವಾಗಿ ಸಂಯುಕ್ತ ರಂಗ ಉಪಯೋಗಕ್ಕೆ ಬರುತ್ತದೆ ಎಂದೆಲ್ಲಾ ಭಾವಿಸಿದಂತಿತ್ತು. ಸಂಯುಕ್ತ ರಂಗದಲ್ಲಿ ಸೇರಿದ ಎಲ್ಲಾ ಪಕ್ಷಗಳೂ ಪ್ರತ್ಯೇಕವಾಗಿ ಬೆಳೆಯಲು ಸಾಧ್ಯವಾಗಬೇಕೆಂದೂ, ರಂಗದೊಳಗಿನ ಒಂದು ಪಕ್ಷ ಮತ್ತೊಂದು ಪಕ್ಷದ ಬೆಳವಣಿಗೆಗೆ ಅಡಚಣೆ ಉಂಟುಮಾಡಕೂಡದು, ದೊಡ್ಡಣ್ಣನ ವರ್ತನೆ ಸಲ್ಲ, ಎಂದೂ ಡಿಮಿಟ್ರೋವ್ ಬಯಸಿದ್ದ. ಒಂದು ವೇಳೆ ಕಮ್ಯುನಿಸ್ಟ್ ಪಕ್ಷ ಬೂರ್ಷ್ವಾ ಪ್ರಜಾಪ್ರಭುತ್ವದ ಚುನಾವಣೆಯಲ್ಲಿ ಬಹುಮತ ಗಳಿಸಿದರೆ, ಬೂರ್ಷ್ವಾಸ್ವರೂಪದ ಪ್ರಭುತ್ವವು ಅವರನ್ನು ಅಧಿಕಾರ ಹಿಡಿಯಲು ಬಿಡುತ್ತದೆಯೇ, ಬಿಡದಿದ್ದರೆ ಏನು ಮಾಡಬೇಕು ಎಂಬ ಪ್ರಶ್ನೆಯನ್ನು ಎತ್ತಿಕೊಂಡು, ಹಾಗೆ ಅವರಿಗೆ ಆಳಲು ಅವಕಾಶ ನೀಡದಿದ್ದರೆ ಏನು ಮಾಡಬೇಕು ಎಂದು ಆಯಾ ಕಾಲದ ಪಕ್ಷಕ್ಕೆ ಗೊತ್ತಿರುತ್ತದೆ ಎಂದು ಹೇಳುತ್ತಾರೆ. ಕೇರಳದಲ್ಲಿ ನಂಬೂದ್ರಿಪಾಡರ ಸರ್ಕಾರವನ್ನು ಆಳಲಾರದಂತೆ ಮಾಡಿದಾಗ ಏನು ಮಾಡಬೇಕೆಂದು ಸ್ಪಷ್ಟವಾಗಲಿಲ್ಲ. ಆದರೂ ಕೇರಳದಲ್ಲಿ ಎಡಪಕ್ಷಗಳ ಪ್ರಮುಖಪಾತ್ರವನ್ನೇನೂ ಅಳಿಸಿಹಾಕಲು ಬೂರ್ಷ್ವಾ ಪಕ್ಷಕ್ಕೆ ಇನ್ನೂ ಆಗಿಲ್ಲ. ಪಶ್ಚಿಮ ಬಂಗಾಳದಲ್ಲಿ ಈ ಅಳಿಸಿಹಾಕುವ ಪ್ರಯೋಗ ಸದ್ಯಕ್ಕೆ ನಡೆಯುತ್ತಿದೆ.

ಕೇರಳ ಮತ್ತು ಪಶ್ಚಿಮ ಬಂಗಾಳ ಎರಡೂ ಕಡೆ ಎಡಪಕ್ಷಗಳು ಎಡ ಸಿದ್ಧಾಂತಕ್ಕೆ ವಿರುದ್ಧವಾಗುವ ನೀತಿಗಳನ್ನು ಆಗಾಗ್ಗೆ ಅನುಸರಿಸುವಂತೆ ಕಂಡುಬಂದಿದ್ದರೆ ಅದನ್ನು ಈ ಮೇಲಿನ ಚರ್ಚೆಯ ಹಿನ್ನೆಲೆಯಲ್ಲಿ ಗ್ರಹಿಸಬೇಕು. ಪ್ರಭುತ್ವದ ಕೀಲಿ ಬೂರ್ಷ್ವಾ ವ್ಯವಸ್ಥೆಯ ಕೈಯಲ್ಲೇ ಇದ್ದಾಗ ಅದು ಅವಕಾಶ ನೀಡುವಷ್ಟು ಮಾತ್ರ ಜನಪರ ನೀತಿಗಳನ್ನು ಕೈಗೊಳ್ಳಲು ಸಾಧ್ಯವಾಗುತ್ತದೆಯೇ ವಿನಾ ರೂಢಮೂಲ ಬದಲಾವಣೆಯ ನೀತಿಗಳನ್ನು ಅನುಸರಿಸಲಾಗದ ಪರಿಸ್ಥಿತಿ ಇದು. ಅವರಿಗೆ ಬೆಂಬಲ ನೀಡಿದ ಜನತೆಗೆ ಇದರಿಂದ

(೭ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




'ಮೂರ್ತಿರಾವ್ ಅವರ ವೈಚಾರಿಕತೆ, ಒಂದು ಟಿಪ್ಪಣಿ' ಎಂಬ ಲೇಖನದಲ್ಲಿ ಡಾ॥ ಹಿ. ಶಿ. ರಾಮಚಂದ್ರೇಗೌಡರು ಮೂರ್ತಿರಾಯರು ತಮ್ಮ 'ದೇವರು' ಎಂಬ ಪ್ರಬಂಧದಲ್ಲಿ ಮಾಡಿರುವ ವೈಚಾರಿಕ ವ್ಯಾಖ್ಯಾನದಲ್ಲಿ ಹಲವು ನ್ಯೂನತೆಗಳನ್ನು ಪ್ರಸ್ತಾಪಿಸಿದ್ದಾರೆ. ಅನಾದಿ ಕಾಲದಿಂದ ಮಾನವನ ವ್ಯಕ್ತಿತ್ವವನ್ನು ಆವರಿಸಿಕೊಂಡಿರುವ ದೇವರ ಬಗ್ಗೆ ಸಾಕಷ್ಟು ವಿಮರ್ಶೆ, ಟೀಕೆ ಹಾಗೂ ವೈಚಾರಿಕ ಬರಹಗಳು ಹೊರಬಂದಿವೆ. ದೇವರು ಇಲ್ಲವೇ ಇಲ್ಲ ಎಂದು ಖಡಾಖಂಡಿತವಾಗಿ ಘೋಷಿಸುವ ಕಟ್ಟಾ ನಾಸ್ತಿಕವಾದಿಗಳ ಚಿಂತನೆ ಒಂದು ಮಟ್ಟದ್ದಾದರೆ ದೇವರ ಅಸ್ತಿತ್ವದ ಬಗ್ಗೆ ಸಂಶಯವಿರುವ ಲೇಖಕರ ವಿಚಾರಗಳು ಇನ್ನೊಂದು ಸ್ತರದಲ್ಲಿವೆ. ಮೂರ್ತಿರಾಯರು ಪಾಪದ ಅರಿವೇ ಇಲ್ಲದ ಮಕ್ಕಳನ್ನು ರೋಗರುಜಿನಗಳಿಂದ ನರಳುವಂತೆ ಮಾಡುವ, ಕ್ಷಾಮ ಮತ್ತು ಭೀಕರ ಸಾಂಕ್ರಾಮಿಕ ರೋಗಗಳನ್ನು ಸಮಾಜದಲ್ಲಿ ಉಂಟು ಮಾಡುವ ದೇವರನ್ನು ತಿರಸ್ಕರಿಸುತ್ತಾರೆ. ಮೂರ್ತಿರಾಯರು ಮೂಲಭೂತವಾಗಿ ದೇವರ ಕಾಲ್ಪನಿಕ ಅಸ್ತಿತ್ವಕ್ಕೆ ತಮ್ಮ ವಿರೋಧ ವ್ಯಕ್ತಪಡಿಸುವುದಿಲ್ಲ. ಸಮಾಜದ ಬಗ್ಗೆ ಅನುಕಂಪವಿರುವ ಮಾನವೀಯ ಸಂವೇದನೆಗಳಿಂದ ತುಂಬಿದ ದೇವರನ್ನು ಬಯಸುತ್ತಾರೆ; ಭಕ್ತರು ಸದಾ ಭಯದ ನೆರಳಿನಲ್ಲಿ ಬದುಕುವಂತೆ ನಿರೀಕ್ಷಿಸುವ ದೇವರನ್ನು ಖಂಡಿಸುತ್ತಾರೆ.

ದೇವರು ಎಂಬ ಕಲ್ಪನೆಗೆ ಮೂರ್ತಿರಾಯರ ವಿರೋಧವಿಲ್ಲ; ದೇವರು ಮತ್ತು ಮತಧರ್ಮಗಳು ಸಮಾಜದಲ್ಲಿ ಭದ್ರವಾಗಿ ನೆಲೆಯೂರಿ ಉಂಟು ಮಾಡುತ್ತಿರುವ ಮತೀಯ ಗಲಭೆಗಳು ಮತ್ತು ಸಾಮಾಜಿಕ ಅನಾಹುತಗಳನ್ನು ವಿರೋಧಿಸುತ್ತಾರೆ. ಆದರೆ ಮೂರ್ತಿರಾಯರ ವೈಚಾರಿಕತೆ ಯಾವುದೇ ಕ್ರಾಂತಿಕಾರಿ ರಾಜಕೀಯ ಸಿದ್ಧಾಂತದ ತಳಹದಿಯ ಮೇಲೆ ಮೂಡಿಬಂದಿಲ್ಲ.

ಡಾ॥ ರಾಮಚಂದ್ರೇಗೌಡರ ಆರೋಪವೆಂದರೆ ಮೂರ್ತಿರಾಯರ ವೈಚಾರಿಕತೆ ಸುಪ್ತ ಸ್ವಜಾತಿ ಪ್ರಜ್ಞೆಯನ್ನು ಮೀರಿ ಬೆಳೆದಿಲ್ಲ; ಆದ್ದರಿಂದ ಅವರ ವೈಚಾರಿಕತೆ ಗಟ್ಟಿಯಾಗಿಲ್ಲ, ಎಂಬುದು. ಉದಾಹರಣೆಗೆ, ಅವರು ಮಾಂಸಾಹಾರಿಗಳ ಪಕ್ಕ ಕುಳಿತು ಊಟ ಮಾಡಲು ಹಿಂಜರಿಯುವುದು ಹಾಗೂ ವೇದ ಮಂತ್ರಗಳ ನಾದಕ್ಕೆ ಮಾರುಹೋಗಿರುವುದು, ಇತ್ಯಾದಿ. ವೈಚಾರಿಕತೆಗೂ ಮತ್ತು ತೀರಾ ವೈಯಕ್ತಿಕ ಆಹಾರ ಪದ್ಧತಿ ಹಾಗೂ ಸಾಂಸ್ಕೃತಿಕ ಅಭಿರುಚಿಗೂ ನಂಟುಹಾಕುವುದು ಸೂಕ್ತವಲ್ಲ. ನನ್ನ ಅಭಿಪ್ರಾಯದಲ್ಲಿ ಅವರ ಜೀವನ ಶೈಲಿಯ ಹಲವು ಅಭ್ಯಾಸಗಳು ಅಷ್ಟು ಆಕ್ಷೇಪಣೀಯ ಎಂದು ಅನಿಸುವುದಿಲ್ಲ.

ದೇವರು ಮತ್ತು ಮತಧರ್ಮಗಳ ಬಗ್ಗೆ ಯಾವುದೇ ಟೀಕೆ, ವಿಮರ್ಶೆ ಮತ್ತು ವಿರೋಧಗಳಿಗೆ ತೀವ್ರವಾಗಿ ಪ್ರತಿಕ್ರಿಯಿಸುವ ಪ್ರಸ್ತುತ ಸಾಮಾಜಿಕ ಸನ್ನಿವೇಶದಲ್ಲಿ ಮೂರ್ತಿರಾಯರಂತಹ ಲೇಖಕರು ರಚಿಸಿರುವ ನವಿರಾದ ವ್ಯಾಖ್ಯಾನಗಳು ಕೆಲವರನ್ನಾದರೂ ದೇವರ ಬಗ್ಗೆ ವಿಶ್ಲೇಷಣಾತ್ಮಕ ದೃಷ್ಟಿಯನ್ನು ಬೆಳೆಸಿಕೊಳ್ಳಲು ಪ್ರಚೋದಿಸುತ್ತವೆ. ವೈಚಾರಿಕ ನೆಲೆಯಲ್ಲಿ ಇಂದು ದೇವರ ಬಗ್ಗೆ ಆರೋಗ್ಯಕರ ಚಿಂತನೆಯನ್ನು ಬೆಳೆಸಬೇಕಾಗಿದೆ; ಹಂತ ಹಂತವಾಗಿ ಅಪಾಯಕರ ಆಚರಣೆಗಳ ಚೌಕಟ್ಟಿನಿಂದ ಜನರನ್ನು ಆಚೆ ಸೆಳೆಯಲು ಯತ್ನಿಸ ಬೇಕಾಗುತ್ತದೆ. 'ದೇವರು ಮತ್ತು ಮತಧರ್ಮಗಳನ್ನು ಸಾರಾಸಗಟಾಗಿ ತಿರಸ್ಕರಿಸಿ' ಎಂದು ಕರೆ ನೀಡುವ ವೈಚಾರಿಕತೆ ಸಮಾಜದಲ್ಲಿ ಎಲ್ಲರಿಂದಲೂ ಸ್ವೀಕೃತವಾಗಲಾರದು. ಆದ್ದರಿಂದ ಮೂರ್ತಿರಾಯರಂತಹ ಲೇಖಕರ ವೈಚಾರಿಕತೆ ಮುಖ್ಯವಾಗುತ್ತದೆ.




ಪೆರಿಯಾರ್‌ರಂತಹ ವಿಚಾರವಾದಿಗಳು ದಕ್ಷಿಣ ಭಾರತದಲ್ಲಿ ಹುಟ್ಟುಹಾಕಿದ ಹಿಂದೂ ದೇವರು ಮತ್ತು ವೈದಿಕ ಪರಂಪರೆ ವಿರೋಧಿ ಚಳುವಳಿಗಳು ಗಟ್ಟಿಯಾಗಿ ನಿಲ್ಲದೆ ಕ್ಷೀಣಿಸಿದ್ದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಮಾನವನ ಚಿಂತನಾಕ್ರಮದ ಬೆಳವಣಿಗೆಯ ಪ್ರಾರಂಭದ ಹಂತದಿಂದಲೇ ಬೌದ್ಧಿಕ ಆವರಣದಲ್ಲಿ ಬಲವಾಗಿ ಬೇರೂರಿರುವ 'ದೇವರು' ಎಂಬ ಕಲ್ಪನೆ ವೈಚಾರಿಕತೆಗೆ ಒಂದು ದೊಡ್ಡ ಸವಾಲೇ ಆಗಿದೆ.

ಚಿಕ್ಕಲ್ಲಸಂದ್ರ, ಬೆಂಗಳೂರು **ಶಂಕರನಾರಾಯಣ**

**ಸದುತ್ತರ**

(ಜುಲೈ ಸಂಚಿಕೆಯಲ್ಲಿ ಶ್ರೀ ಕೆ. ಡಿ. ಮುತ್ತೂರ ಅವರ ಲೇಖನಕ್ಕೆ ಬೆಂಗಳೂರಿನ ಬಸವ ಸಮಿತಿಯು ಪ್ರತಿಕ್ರಿಯಿಸಿತ್ತು. ಅದಕ್ಕೆ ಶ್ರೀ ಮುತ್ತೂರ ಅವರು ವಿವರಣೆ ನೀಡಿದ್ದಾರೆ. ಅದರ ಸಂಕ್ಷಿಪ್ತ ರೂಪ ಇಲ್ಲಿದೆ. – ಸಂ.)

''ಶರಣ ಸಂಸ್ಕೃತಿಯಲ್ಲಿ ಬದುಕಿ ಶರಣ ಸಂಸ್ಕೃತಿಯನ್ನು ಉಳಿಸೋಣ, ಬೆಳೆಸೋಣ, ರಕ್ಷಿಸೋಣ'' ಎಂಬ ಧ್ಯೇಯ ವಾಕ್ಯದಂತೆ ನಾವು ಬದುಕಿದ್ದೇವೆಯೆ? ಶರಣ ಸಂಸ್ಕೃತಿಯನ್ನು ನಮ್ಮದನ್ನಾಗಿ ಮಾಡಿಕೊಂಡಿದ್ದೇವೆಯೆ? ಅದನ್ನು ಉಳಿಸುವ, ಬೆಳೆಸುವ, ರಕ್ಷಿಸುವ ಅರ್ಹತೆಯನ್ನು ಪಡೆದಿದ್ದೇವೆಯೆ? ಈ ಎಲ್ಲ ವಿಷಯಗಳನ್ನು ನಾವು ಪರಿಶೀಲಿಸಿದ್ದೇವೆಯೆ? ಶರಣರ ವಚನಗಳ ಬೋಧೆ ಏನಿದೆ ಎಂಬುದನ್ನು ಅರಿತುಕೊಂಡಿದ್ದೇವೆಯೆ? ಹಾಗೆ ಆಚರಿಸುತ್ತಾ ಬಂದಿದ್ದೇವೆಯೆ? ಹೀಗೆ ನೂರೆಂಟು ಪ್ರಶ್ನೆಗಳಿಗೆ ಉತ್ತರ ಕೊಡಬೇಕಾಗುತ್ತದೆ.

ವಚನ ಸಾಹಿತ್ಯವನ್ನು ಓದುವ ಮೊದಲು ಜಾತ್ಯತೀತನಾಗಿ, ಧರ್ಮನಿರಪೇಕ್ಷಿತನಾಗಿ ಪೂರ್ವಗ್ರಹದ ದೋಷಗಳನ್ನೆಲ್ಲ ನಿವಾರಿಸಿಕೊಂಡು ವಿಶ್ವಬಂಧುವಾಗಿ, ವಿಶ್ವ ಪ್ರೇಮಿಯಾಗಿ ಸಮಾನತೆಯ ಹರಿಕಾರನಾಗಿ ಎಲ್ಲ ಗುರು ಪರಂಪರೆ, ಮಠ ಪರಂಪರೆಗಳನ್ನು ತಿರಸ್ಕರಿಸಿ, ಆಚರಿಸಲು ಅಣಿಯಾಗಬೇಕು. ಆಗ ವಚನ ಸಾಹಿತ್ಯದ ಮಹತ್ವ, ಅಗಾಧತೆ ಮತ್ತು ಅವಶ್ಯಕತೆಯ ಅರಿವು ಮೂಡುತ್ತದೆ. ವಚನ ಸಾಹಿತ್ಯ ಅಂದು, ಇಂದು, ಮುಂದು ಎಂದೆಂದಿಗೂ ವಿಶ್ವದ ಯಾವತ್ತೂ ಜನರಿಗೆ ಅನ್ವಯಿಸುವ ಸಾಹಿತ್ಯವೆಂಬುದರ ಅರಿವಾಗುತ್ತದೆ. ಅಲ್ಲದೆ ವೈಯಕ್ತಿಕ ಬಾಳಿಗೆ ಬೆಳಕಾಗುತ್ತದೆ. ಸಮಾಜವನ್ನು ತಿದ್ದುವ ಕೆಲಸವನ್ನು ಹೇಗೆ ಮಾಡಬೇಕೆಂಬ ಜ್ಞಾನ ಪ್ರಾಪ್ತವಾಗುತ್ತದೆ. ಬಸವಣ್ಣನವರ ವ್ಯಕ್ತಿತ್ವವನ್ನು ಅರಿಯಬೇಕಾದರೆ ಅವರ ವಚನಗಳನ್ನು ಅಭ್ಯಾಸ ಮಾಡಿಯೇ ತಿಳಿಯಬೇಕು. ಸಂಪ್ರದಾಯವಾದಿಗಳ, ಪುರೋಹಿತರ ಬೋಧೆಯನ್ನು ಕೇಳಿ ಬಸವಣ್ಣನವರನ್ನು ಅರ್ಥೈಸಲು ಹೋಗಬಾರದು.

ಬಸವಣ್ಣ ಯಾವುದೇ ಜಾತಿ, ಧರ್ಮವನ್ನು ಅವಲಂಬಿಸಿದವನಲ್ಲ. ಯಾವುದೇ ಧರ್ಮವನ್ನು ಸ್ಥಾಪಿಸಬೇಕೆಂಬ ಹಂಬಲವುಳ್ಳವನೂ ಅಲ್ಲ. ಯಾವುದೇ ಅಧಿಕಾರ ಅಂತಸ್ತಿಗೆ ಜೋತುಬಿದ್ದವನಲ್ಲ. ಅಂದಿನ ಸಮಾಜದಲ್ಲಿದ್ದ ಸಾಮಾಜಿಕ ಅಸಮಾನತೆ, ಆರ್ಥಿಕ ಅಸಮಾನತೆ, ಧಾರ್ಮಿಕವಾಗಿ ಮೇಲು-ಕೀಳು ಎಂಬ ಭಾವನೆಗಳು, ಸ್ತ್ರೀಯರ ಹಾಗೂ ದಲಿತರ ಮೇಲಿನ ದೌರ್ಜನ್ಯಗಳು ಮತ್ತು ವ್ಯಕ್ತಿಯ ಕೀಳರಿಮೆ, ಇವುಗಳನ್ನು ಹೋಗಲಾಡಿಸಿ, ಆಚರಣೆಯಲ್ಲಿದ್ದ ಶ್ರೇಣೀಕೃತ ಸಮಾಜವನ್ನು ತೊಡೆದು ಹಾಕಿ, ಸರ್ವ ಸಮಾನತೆಯ ಸಮಾಜದ ಅಡಿಪಾಯವನ್ನು ಹಾಕಲು ಸಂಘಟನೆ ಮತ್ತು ಸಾಹಿತ್ಯದ ಕಡೆಗೆ ಒಲಿದು ಅಂದಿನ ಕಾಲದಲ್ಲಿ ಕಾರ್ಯಪ್ರವೃತ್ತನಾದ ಒಬ್ಬ ಧೀರೋದಾತ್ತ ಯುವಕ, ಜಗತ್ತಿನ ಮೊಟ್ಟಮೊದಲನೆಯ ಸಮಾಜವಾದ ಸಮಾಜ ರಚನೆಯ ಹರಿಕಾರ ಈ ಬಸವಣ್ಣ, ಇದು ಗೊತ್ತಿರಬೇಕು. ಬಸವಣ್ಣ ಹೇಳುವ ಹಾಗೆ ಸ್ಥಾವರ ಲಿಂಗವನ್ನು ಪೂಜಿಸಬಾರದೆಂಬ ಸೂಚನೆ ಅತಿಮುಖ್ಯ.

''ನನಗೆ ನಾನೇ ಗುರುವಾದೆನಯ್ಯಾ...'' ಎಂಬ ವಚನವೂ ಕೂಡ ಜಂಗಮ ಲಿಂಗವನ್ನು ಪೂಜಿಸಬೇಕು ಎಂದು ಹೇಳುತ್ತದೆಯೇ ಹೊರತು ಸ್ಥಾವರ ಲಿಂಗವನ್ನಲ್ಲ ಎಂದು ಬಹುರೂಪಿ ಚೌಡಯ್ಯನವರು ಪ್ರತಿಪಾದಿಸುತ್ತಾರೆ. ಇಂಥ ಇನ್ನೂ ಅನೇಕಾನೇಕ ವಚನಗಳನ್ನು ಉದಾಹರಿಸಬಹುದು.

ಬಸವಣ್ಣನವರ ಮತ್ತು ವಚನಕಾರರ ತತ್ವಗಳನ್ನು ಗಾಳಿಗೆ ತೂರಿ, ಅವರ ಭಾವಚಿತ್ರಕ್ಕೆ ಮತ್ತು ಮೂರ್ತಿಗೆ ಲಿಂಗವನ್ನು ತೊಡಿಸಿ ಪೂಜಿಸುವುದರಿಂದ, ಊರಿನ ನಡು ಬೀದಿಯಲ್ಲಿ ಮೂರ್ತಿಯನ್ನು ಸ್ಥಾಪಿಸುವುದರಿಂದ, ಯಾರಿಗೆ ಏನಾಗಬೇಕಿದೆ? ಬಸವಣ್ಣನವರಿಗೂ ಏನಾಗಬೇಕಿದೆ?

ಅವನ ಉದಾತ್ತ ತತ್ವಗಳನ್ನು ಅಂಗೀಕಾರ ಮಾಡಿಕೊಳ್ಳಬೇಕು ಮತ್ತು ಆಚರಣೆಗೆ ತರಬೇಕು.

ಬಸವಣ್ಣನ ಆಶಯದಂತೆ ಒಳ್ಳೆಯ ಮಾನವರಾಗಿ ಪರಿವರ್ತನೆ ಹೊಂದಬೇಕು ಮತ್ತು ಜಗತ್ತಿಗೆ ಕಲ್ಯಾಣ ಮಾಡುವ ಗುರಿಯಿಟ್ಟುಕೊಂಡು ಕೆಲಸ ಮಾಡಬೇಕು. ಈ ಬಸವಣ್ಣನ ಸತ್ತ ಕಾಯವನ್ನು ಅಥವಾ ಅವನ ಭಾವಚಿತ್ರವನ್ನು ಅಥವಾ ಸ್ಥಾವರ ಮೂರ್ತಿಯನ್ನು ಪೂಜಿಸುವುದು ಲಿಂಗಾಯತರ ಆಚರಣೆಯಾಗಬಾರದು. ಇದಕ್ಕೆ ಪ್ರತಿಯಾಗಿ ಅವನ ಚೇತನದ ಪ್ರತೀಕವಾದ ''ಕಳಬೇಡ ಕೊಲಬೇಡ'' ಎಂಬ ವಚನದ ಆಶಯದಂತೆ ನಾವು ಜಗತ್ ಕಲ್ಯಾಣಕಾರರಾದರೆ ಈ ಲಿಂಗಾಯತರು ನಿಜವಾಗಿಯೂ ಬಸವ ಸಮಿತಿಯ ಹೆಸರನ್ನು ಪಡೆದುಕೊಳ್ಳಲು ಅರ್ಹರಾಗುತ್ತಾರೆ. ಬಸವಣ್ಣನ ನಿಜವಾದ ವಾರಸುದಾರಿಕೆ ಅವರಿಗೆ ದಕ್ಕುತ್ತದೆ. ಆ ಶಕ್ತಿ ಅವರಲ್ಲಿ ಹರಿದಾಡುತ್ತದೆ. ಇಲ್ಲದಿದ್ದರೆ ಬಸವಣ್ಣನ ಯಾವ ತತ್ವವನ್ನೂ ಆಚರಿಸದೆ ಕೇವಲ ಅವನ ಹೆಣವನ್ನು ಪೂಜಿಸುವವರಾಗುತ್ತಾರೆ.

ಮಲ್ಲಮ್ಮ ನಗರ, ಮುಧೋಳ **ಕೆ. ಡಿ. ಮುತ್ತೂರ**

ಆಕರ್ಷಕ ಮುಖಪುಟ ಹೊತ್ತ ಸೆಪ್ಟೆಂಬರ್ ಸಂಚಿಕೆ ನಯನ ಮನೋಹರವಾಗಿದೆ. 'ಈ ತಿಂಗಳು' ಸಮಯೋಚಿತ ಹಾಗೂ ಅರ್ಥಪೂರ್ಣವಾಗಿದೆ. 'ಸ್ವಾತಂತ್ರ್ಯದ ದಿನ' ಸಂಪಾದಕೀಯವೂ ಸಹ ಸಮಯೋಚಿತ. 'ಕನ್ನಡಂ ಕತ್ತುರಿಯಲ್ತೆ' ವಿಚಾರ ಓದಿದಾಗ ನಮ್ಮ ಸುತ್ತಮುತ್ತ ಇರುವ ಜನರ ಪರಿಸ್ಥಿತಿ ನೋಡಿ ಬೇಸರವಾಗಿದೆ. ಕನ್ನಡಿಗರಾಗಿ ಕನ್ನಡವನ್ನೇ ಮಾತನಾಡದೆ ಬೇರೆ ಭಾಷೆಯತ್ತ ವಾಲುವುದು ನೋಡಿದಾಗ ಅಸಹ್ಯವಾಗುತ್ತದೆ. 'ತಿಳಿವು' ಸಹ ಬಹಳ ವಿಷಯ ಹೊತ್ತು ಬಂದಿದೆ. ಹತ್ತನೇ ವರ್ಷದಲ್ಲಿ ಮುನ್ನುಗ್ಗುತ್ತಾ ಬರುತ್ತಿರುವ 'ಹೊಸತು'ಗೆ ಶುಭಾಶಯ.

ವಿಠಲಾಪುರ **ಪಾಂಡವಪುರ ಮೃತ್ಯುಂಜಯ**

---

*ಸಂಪಾದಕೀಯ (೫ನೇ ಪುಟದಿಂದ)*

ನಿರಾಶೆಯಾಗುತ್ತದೆ. ಅದು ಚುನಾವಣೆಯಲ್ಲಿ ಎಡಪಕ್ಷಗಳಿಗೆ ಬೆಂಬಲವನ್ನು ಕಡಿಮೆ ಮಾಡುತ್ತದೆ. ಪಶ್ಚಿಮ ಬಂಗಾಳ, ಕೇರಳ ಮತ್ತು ಕರ್ನಾಟಕದಲ್ಲಿ, ಎಡಪಕ್ಷಗಳ ಪ್ರಭಾವದಿಂದ ಸ್ವಲ್ಪಮಟ್ಟಿಗೆ ಉತ್ತಮವಾದ ಭೂಸುಧಾರಣೆ ಆಗಿ, ಕೃಷಿ ಭೂಮಿ ಹಂಚಲ್ಪಟ್ಟಿತು. ಆದರೆ ಅದನ್ನು ಪಡೆದ ರೈತರೇ ಕ್ರಮೇಣ ಕಮ್ಯುನಿಸ್ಟರಿಗೆ ಬೆಂಬಲ ನೀಡುವುದರಿಂದ ಹಿಂದೆ ಸರಿದಿದ್ದಾರೆ. ವಿ. ಪಿ. ಸಿಂಗರ ಕಾಲದಿಂದ ಇಂದಿನವರೆಗೆ ಹಲವು ಸಂಯುಕ್ತ ರಂಗಗಳಲ್ಲಿ ನೇರವಾಗಿ ಭಾಗವಹಿಸಿ, ಹೊರಗಿಂದ ಬೆಂಬಲ ನೀಡಿ, ಎಡಪಕ್ಷಗಳಿಗೆ ಅನುಭವವಾಗಿದೆ. ಯುಪಿಎ ಜತೆಗಿನ ಇತ್ತೀಚಿನ ಅನುಭವ ಹಾಗೂ ಪಶ್ಚಿಮ ಬಂಗಾಳದಲ್ಲಿ ಮುಖ್ಯಮಂತ್ರಿಯ ವಿರುದ್ಧ ಕಾಂಗ್ರೆಸ್ ಪಕ್ಷವು ಪಿತೂರಿ ನಡೆಸುತ್ತಿರುವ ಸಂದರ್ಭದಲ್ಲಿ, ಮುಂಬರುವ ಚುನಾವಣೆಯಲ್ಲಿ ಮತ್ತು ಆ ನಂತರ ಎಡಪಕ್ಷಗಳು ತಳೆಯಬೇಕಾದ ಸಂಯುಕ್ತ ರಂಗ ನೀತಿಯ ನಿಲುವಿನಲ್ಲಿ ಏನಾದರೂ ಬದಲಾವಣೆಯಾಗಬೇಕೆ ?

ಪಶ್ಚಿಮ ಬಂಗಾಳದ ಮಟ್ಟಿಗೆ ಹೇಳುವುದಾದರೆ ಬುದ್ಧದೇವರು ಬೂರ್ಷ್ವಾಗಳಿಂದ ಎರವಲು ಪಡೆದ ವೇಷಭೂಷಣ ತೊಟ್ಟರೂ, ಬಂಡವಾಳದ ಮಾತನ್ನೇ ಆಡಿದರೂ, ಟಾಟಾ ಸ್ನೇಹ ಸಂಪಾದಿಸಿದರೂ, ಅದೇ ಬೂರ್ಷ್ವಾ ಪಕ್ಷಗಳು ಮಿಕ್ಕ ಪ್ರದೇಶಗಳಲ್ಲಿ ಅನುಸರಿಸುವ ನೀತಿಯನ್ನೇ ಅನುಸರಿಸುವುದಾಗಿ ಹೇಳಿದರೂ, ಬೂರ್ಷ್ವಾ ವ್ಯವಸ್ಥೆಯ ವಿಶ್ವಾಸ ಸಂಪಾದಿಸಲು ಸಾಧ್ಯವಾಗಿಲ್ಲ. ಎಡಚಿಂತನೆಯ ನೀತಿ ಪಶ್ಚಿಮ ಬಂಗಾಳದಲ್ಲಿ ೩೦ ವರ್ಷಗಳಿಂದ ಜನತೆಯ ಬಹುಮತವನ್ನು ತಂದುಕೊಟ್ಟಿತ್ತು. ಈ ಬಾರಿ ಚುನಾವಣೆಯಲ್ಲಿ ಏನಾಗುತ್ತದೋ ಹೇಳುವಂತಿಲ್ಲ. ಎಡಪಕ್ಷಗಳು, ರೂಢಿಯಲ್ಲಿರುವ ಬೂರ್ಷ್ವಾ ಮಾದರಿಗಿಂತ ಭಿನ್ನವಾದ ಜನಪರವಾದ ಬೇರೊಂದು ಮಾದರಿಯನ್ನು ಜನತೆಯ ಮುಂದೆ ಇಡಲು ಅಸಮರ್ಥವಾದರೆ ಜನತೆಗೆ ಅವರಿಂದ ಪ್ರಯೋಜನವಿಲ್ಲ. ರಾಜಕೀಯ ಅವಕಾಶವಾದವಾಗಿ ಬೂರ್ಷ್ವಾ ಮಾರ್ಗವನ್ನು ತಾತ್ಕಾಲಿಕವಾಗಿಯೇ ಆದರೂ ಅನುಕರಿಸಲು ಮುಂದಾದರೆ, ಈ ಮಾದರಿಯಲ್ಲಿ ಇತರ ಪಕ್ಷಗಳು ಇವರಿಗಿಂತ ನಿಪುಣರಾಗಿದ್ದು, ಅಂಥ ಎಡ ಚಿಂತನೆಗೆ ವಿರೋಧವಾದ ಎಡಪಕ್ಷ ನೀತಿ ಸಂಪೂರ್ಣ ವಿಫಲವಾಗುವುದು ಖಂಡಿತ. ಬರುವ ಚುನಾವಣೆಯಲ್ಲಿ ಪರ್ಯಾಯ ಸಂಯುಕ್ತ ರಂಗ ನಿರ್ಮಿಸುವ ಪ್ರಯತ್ನ ಸುತ್ತ್ಯವಾದುದು. ಆದರೆ ಅದು ತಮ್ಮ ಮೂಲಭೂತ ಜನಪರ ಸಿದ್ಧಾಂತಗಳನ್ನು ಸಡಿಲಗೊಳಿಸುವ ಬೂರ್ಷ್ವಾ ನೀತಿಯೊಂದಿಗೆ ರಾಜಿ ನೀತಿಯಾದರೆ ಅದನ್ನು ಜನ ತಿರಸ್ಕರಿಸುತ್ತಾರೆ. ಅವಕಾಶವಾದದ, ಸಿದ್ಧಾಂತದ ಬದ್ಧತೆಯಿಲ್ಲದ, ಚಿಲ್ಲರೆ ಪಕ್ಷಗಳೊಡನೆ ಸೇರಿದ ಸಂಯುಕ್ತ ರಂಗ ಒಂದು ಕುಣಿತವಾಗಿಬಿಡುತ್ತದೆ. ಅದಕ್ಕಿಂತ ಕೇವಲ ಎಡಪಕ್ಷಗಳೇ ತಮ್ಮ ಸಂಯುಕ್ತ ರಂಗವನ್ನು ರಚಿಸಿಕೊಂಡು, ರೂಢಿಯಲ್ಲಿರುವುದಕ್ಕಿಂತ ಭಿನ್ನವಾದ ಜನಪರ ಮಾದರಿಯ ನೀತಿಯನ್ನು ಪ್ರತಿಪಾದಿಸಿ, ಅಂಥದೊಂದು ಆಡಳಿತ ಮಾದರಿಯನ್ನು ಜನತೆಯ ಮುಂದೆ ಇಡಬೇಕು. ಇದು ಕೇವಲ ಕನಿಷ್ಠ ಸಾಮಾನ್ಯ ಕಾರ್ಯಕ್ರಮದ ಮಾದರಿಗಿಂತ ಮುಂದುವರಿದ ಮಾದರಿಯಾಗಬೇಕು. ಎಡಪಕ್ಷಗಳು ಪರಸ್ಪರ ಪ್ರಾಮಾಣಿಕವಾಗಿ ಸಹಕರಿಸಬಲ್ಲವೆ ? ಅಂಥ ಸಂಯುಕ್ತ ರಂಗದಲ್ಲಿ ಅಡಕಗೊಂಡ ಎಲ್ಲ ಪಕ್ಷಗಳೂ ಬೆಳೆಯಲು ಸಾಧ್ಯವಾಗಬೇಕು. ಅದರೊಳಗೆ ಯಾವ ಪಕ್ಷವೂ ವಿಶೇಷವಾಗಿ ಪ್ರಭಾವಶಾಲಿಯಲ್ಲ, ದೊಡ್ಡಣ್ಣ ಅಲ್ಲ, ಇದು ಡಿಮಿಟ್ರೋವ್ ಹೇಳಿದ ಮಾತು.

ಯುಪಿಎ ಒಪ್ಪಿಕೊಂಡ ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ, ಅವರು ಕೊನೆಯವರೆಗೂ ಕಾರ್ಯಗತಗೊಳಿಸದ ಕೆಲವು ಕಾರ್ಯಕ್ರಮಗಳನ್ನು ಗುರುತಿಸಬಹುದು. ಕೋಮುವಾದೀಯ ಹಿಂಸೆಗೆ ಸಂಬಂಧಪಟ್ಟ (ತಡೆಗಟ್ಟುವುದು, ನಿಯಂತ್ರಿಸುವುದು ಮತ್ತು ಕೋಮುವಾದೀಯ ಹಿಂಸೆಗೆ ತುತ್ತಾದ ನಿರಾಶ್ರಿತರ ಮರು ವಸತಿ) ಕಾನೂನನ್ನು ಜಾರಿಮಾಡಲಿಲ್ಲ. ಗುಜರಾತ್ ಮಾದರಿ ಹಿಂಸೆಯನ್ನು ಮರುಕಳಿಸದಂತೆ ತಡೆಯುವುದು ಇದರ ಉದ್ದೇಶವಾಗಿತ್ತು. ಪೋಟಾ ಹೋಯ್ತು. ಆದರೆ ಅದರ ಜಾಗದಲ್ಲಿ ಕಾನೂನು ಬಾಹಿರ ಚಟುವಟಿಕೆಗಳನ್ನು ತಡೆಹಿಡಿಯುವ ಮತ್ತೊಂದು ಕಾನೂನು ಜಾರಿಯಾಯ್ತು. ಅದರ ದುರುಪಯೋಗವು ಅಸಾಧ್ಯವೇನಲ್ಲ. ಆರ್ಥಿಕ ಕ್ಷೇತ್ರದಲ್ಲಿ ಶ್ರೀಮಂತರಿಗೆ ನೀಡಿದ ಸುಂಕಗಳ ತೆರಿಗೆಗಳ ವಿನಾಯ್ತಿಗಳಿಗಂತೂ ಲೆಕ್ಕವಿಲ್ಲ. ಆಹಾರದ ಬೆಲೆ ಗಗನಕ್ಕೆ ಏರಿದ ಮೇಲೂ, ಪರಿಣಾಮಕಾರಿಯಾಗಿ ಸಾರ್ವಜನಿಕ ಪಡಿತರ ವ್ಯವಸ್ಥೆಯನ್ನು ಪುನರ್‌ರಚಿಸಲು ಒತ್ತಾಯ ತರಲು ಎಡ ಪಕ್ಷಗಳಿಂದ ಸಾಧ್ಯವಾಗಲೇ ಇಲ್ಲ. ಈ ಯಾವುದೇ ಕಾರಣಗಳನ್ನು ಮುಂದೊಡ್ಡಿ ಎಡ ಪಕ್ಷಗಳು ತಮ್ಮ ಬೆಂಬಲವನ್ನು ಹಿಂತೆಗೆದುಕೊಳ್ಳಬಹುದಾದಷ್ಟು ಇವು ಮಹತ್ವದ್ದಾಗಿದ್ದುವು. ಅಂದರೆ, ಇಷ್ಟು ದಿನ ಯುಪಿಎ ಜತೆಗಿದ್ದು ಎಡಪಕ್ಷಗಳು ಬಂಡವಾಳ ವ್ಯವಸ್ಥೆಯನ್ನು ಸುಗಮವಾಗಿ ನಿರ್ವಹಿಸಲು ನೆರವು ನೀಡಿದಂತಾಯ್ತು ಎಂಬ ಅನುಮಾನ ಉಂಟಾಗುತ್ತದೆ. ಪಶ್ಚಿಮ ಬಂಗಾಳದ ಮಾದರಿ ಯುಪಿಎ ಮಾದರಿಯಂತೆಯೇ ಆಗಿಬಿಟ್ಟರೆ ಅದರಲ್ಲಿ ಎಡಪಕ್ಷಗಳ ವಿಶಿಷ್ಟತೆಯೇನು ?

ಕೈಗಾರಿಕೆಗಾಗಿ ಭೂಮಿಯನ್ನು ವಶಮಾಡಿಕೊಳ್ಳುವ ವಿಷಯ ಬಂದಾಗ ಎಡಪಕ್ಷಗಳ ಮಾದರಿ ಹೀಗಿರುತ್ತದೆ: ಕೃಷಿಯೂ ಒಂದು ವಾಣಿಜ್ಯ. ಅದನ್ನು ನಿಭಾಯಿಸಬಲ್ಲ ರೈತನು ಭೂಮಿಯ ಒಡೆಯ. ಹವೆ, ಮಳೆ, ಕ್ರಿಮಿಕೀಟಗಳ ಬಾಧೆ ಇವನ್ನೆಲ್ಲಾ ಎದುರಿಸುತ್ತಾ ಯಶಸ್ವಿಯಾಗುವ ರೈತನು ಅನಕ್ಷರಸ್ಥನಾಗಿರಬಹುದು; ಆದರೆ ಅವನು ಜಾಣ. ಅವನ ಭೂಮಿಯನ್ನು ಕೈಗಾರಿಕೆಗೆ ಬಳಸಿದಾಗ, ಅದರ ಉತ್ಪಾದಕತೆ ಬಹುಪಾಲ ಹೆಚ್ಚುತ್ತದೆ, ವಿಕಾಸವಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಕೃಷಿ ಉದ್ಯಮಿಯಾಗಿರುವ ಹಂತದಿಂದ ಮೇಲೇರಿ ರೈತನು ಕೈಗಾರಿಕೋದ್ಯಮಿ ಏಕೆ ಆಗಲಾರ ? ಒಂದಷ್ಟು ಕನಿಷ್ಠ ತರಬೇತಿಯಿಂದ ಅವನು ಹೊಸ ಕೈಗಾರಿಕಾ ಮಂಡಳಿಯಲ್ಲಿ ನೀತಿ ನಿರೂಪಕ ಪಾತ್ರದಲ್ಲೂ ಭಾಗವಹಿಸಬಲ್ಲ. ನೂರಾರು ರೈತರನ್ನು ಮ್ಯಾನೇಜಿಂಗ್ ಡೈರೆಕ್ಟರ್‌ಗಳನ್ನಾಗಿ ಅಥವಾ ಡೈರೆಕ್ಟರ್‌ಗಳನ್ನಾಗಿ ಮಾಡಬೇಕಾಗಿಲ್ಲ. ಆದರೆ ಅವರ ಪ್ರತಿನಿಧಿಗಳು ಕೆಲವರು ಆಗಬಲ್ಲರು. ಮಿಕ್ಕವರು ಅದರ ಜನರಲ್ ಕೌನ್ಸಿಲ್ ಸದಸ್ಯರಾಗಬಲ್ಲರು. ಅವರೆಲ್ಲಾ ಕಂಪನಿಯಲ್ಲಿ ಪಾಲುದಾರರಾಗಬಲ್ಲರು. ಎಡಪಕ್ಷಗಳು ಈ ಮಾದರಿಯನ್ನು ಪರ್ಯಾಯವಾಗಿ ಚರ್ಚೆಗೆ ನೀಡಬೇಕು. ಇದೇ ರೀತಿ ಹಲವು ತಾಜಾ ಚಿಂತನೆಗಳನ್ನು ಎಡಪಕ್ಷದ ಮಾದರಿ ಚಿಂತಿಸಬೇಕು. ಬೂರ್ಷ್ವಾ ಮಾದರಿಗಿಂತ ವಿಭಿನ್ನವಾದ ಜನಪರ ಮಾದರಿಯನ್ನು ಪರ್ಯಾಯವಾಗಿ ಜನತೆಯ ಮುಂದೆ ಇಡಲಾರದೆ ಹೋದರೆ, ಬೂರ್ಷ್ವಾ ಪ್ರಜಾಪ್ರಭುತ್ವದಲ್ಲಿ ಎಡಪಕ್ಷಗಳು ತಮ್ಮ ಸ್ಥಾನವನ್ನು ಕಳೆದುಕೊಳ್ಳುತ್ತವೆ. ಇಂದು ಮಾಲಿಕನಾಗಿರುವ ರೈತನನ್ನು ಕಂಪನಿಯ ಕೂಲಿಯಾಗಿಸುವ, ಭಿಕ್ಷುಕನನ್ನಾಗಿಸುವ, ನಿರುದ್ಯೋಗಿಯಾಗಿಸುವ ಭೂವಶೀಕರಣ, ಪರಿಹಾರ ಮಾದರಿ ಹೇಗೆ ತಾನೆ ಮಾನ್ಯವೆನಿಸಿಕೊಳ್ಳುತ್ತದೆ ? ಅದು ಮಾನವೀಯವಲ್ಲ. ವಿಕಾಸದ ಜನಪರ ಪರ್ಯಾಯ ಮಾದರಿಯನ್ನು ಜನತೆ ಬಯಸುತ್ತದೆ. ಎಡಪಕ್ಷದ ಸಿದ್ಧಾಂತಿಗಳಿಗೆ ಇದೊಂದು ಸವಾಲು. ಅದನ್ನವರು ರಚಿಸಿಕೊಡಬಲ್ಲರು, ರಚಿಸಿಕೊಡಬೇಕು. ಅಚ್ಯುತ್ ಮೆನನ್ ಮಾದರಿಯನ್ನು ನಾವಿಲ್ಲಿ ನೆನಪಿಸಿಕೊಳ್ಳಬೇಕು. ಜಯಪ್ರಕಾಶ ನಾರಾಯಣರ ಸಂಪೂರ್ಣ ಕ್ರಾಂತಿ ಅವರ ಕಾಲದಲ್ಲಿ ಕೇರಳ ಪ್ರವೇಶ ಮಾಡಲಾಗಲಿಲ್ಲ. ಅವರದು ಆದರ್ಶ ಸರ್ಕಾರವೆಂದು ಜೆಪಿಯವರೇ ಹೇಳಿದರು. ಕೇವಲ ಕನಿಷ್ಠ ಕಾರ್ಯಕ್ರಮಗಳ ಪಟ್ಟಿ ಪರ್ಯಾಯ ಮಾದರಿ ಅಲ್ಲ. ಅದರೊಂದಿಗೆ ನವ ಉದಾರವಾದಿ ಅರ್ಥ ಚಿಂತನೆಗೂ ಪರ್ಯಾಯವನ್ನು ಮುಂದಿಡಬೇಕು. ಅದನ್ನು ಒಪ್ಪುವವರೆಲ್ಲಾ ಸಂಯುಕ್ತ ರಂಗದಲ್ಲಿ ಪಾಲುದಾರರಾಗಬೇಕು.

ಈ ತಿಂಗಳು (೩ನೇ ಪುಟದಿಂದ)

ಮಾಡುತ್ತಿದ್ದಾರೆಂಬ ಅರಿವು ಅವರಿಗಿಲ್ಲ'' ಎಂದು. ಅದನ್ನು ನೆನೆದು ಬಜರಂಗಿಗಳ ಪಾತಕಗಳನ್ನು ಕ್ಷಮಿಸಬೇಕೆಂದು ಅವರು ಆಗ್ರಹಿಸಿದ್ದಾರೆ. ಅದರಿಂದ ಪಾತಕಗಳ ಸರಣಿ ನಿಲ್ಲುವುದಾದರೆ ಇದು ಉತ್ಕೃಷ್ಟ ಮಾರ್ಗವೇ ಹೌದು. ಆದರೆ ಹಾಗಾಗುವ ಸೂಚನೆಗಳಿಲ್ಲ, ಏಕೆಂದರೆ ಪಾತಕಿಗಳಿಗೆ ತಮ್ಮ ಪಾತಕದ ಸಂಪೂರ್ಣ ಅರಿವಿದೆ, ಅದನ್ನು ಯೋಜನಾಬದ್ಧವಾಗಿ ನಡೆಸಲಾಗುತ್ತಿದೆ, ಅದಕ್ಕೆ ಸರ್ಕಾರದ ಮನ್ನಣೆ ಇದೆ. ನಾವು ತಿಳಿಯಬೇಕಾದ ವಿಷಯ ಇದು : ಇಂತಹ ಕೃತ್ಯಗಳು ಪರಿಹಾರವನ್ನೊದಗಿಸುವುದಿಲ್ಲ, ನಾಳೆಯೂ ನಮ್ಮ ಸಮಾಜದಲ್ಲಿ ಸರ್ವಮತಸ್ಥರೂ ಇರಬೇಕಾದ್ದು ಅನಿವಾರ್ಯ, ಯಾರನ್ನೂ ಬಗ್ಗುಬಡಿದು ನಿಗ್ರಹಿಸಲಾಗುವುದಿಲ್ಲ, ಮತ್ತು ಮತಾಂತರವು ಯಾವುದೇ ವ್ಯಕ್ತಿಯ ಹಕ್ಕು. ಇಂದು ಚರ್ಚುಗಳಿಗೆ ಬೆಂಕಿಯಿಟ್ಟು ನಾಳೆ ಕ್ರೈಸ್ತಮತದವರನ್ನು ಸಂಪೂರ್ಣವಾಗಿ ನಿರ್ನಾಮ ಮಾಡುತ್ತೇವೆಯೆ ? ಅವರ ಮಾನವ ಹಕ್ಕುಗಳಿಗೆ ಬೆಲೆಯಿಲ್ಲವೆ ? ಹೀಗೆ ಕೊಚ್ಚಿಹಾಕುವ ಹೊಸ ಸಂಪ್ರದಾಯವು ಭಾರತೀಯ ಸಂಸ್ಕೃತಿಯ ಅವಿಚ್ಛಿನ್ನ ಭಾಗವೆ? ಕ್ರೈಸ್ತಮತಕ್ಕೆ ಸೇರುವಂತೆ ಜನರ ಮನವೊಲಿಸಲು ಸಂಬಂಧಪಟ್ಟ ಸಂಸ್ಥೆಯವರು ಹಿಂದುಮತವನ್ನು ಕೆಟ್ಟರೀತಿಯಲ್ಲಿ ಬಿಂಬಿಸುವ ಸಾಹಿತ್ಯವನ್ನು ಪ್ರಕಟಿಸಿ ಪ್ರಚಾರ ಮಾಡುತ್ತಾರೆಂಬ ಆಪಾದನೆ ನಿಜವಾದಲ್ಲಿ ಅಂಥವರ ಮೇಲೆ ಕಾನೂನುಕ್ರಮ ಜರಗಿಸುವುದು ಸರ್ಕಾರದ ಕೆಲಸ. ಅದನ್ನು ಕೂಡಲೆ ಮಾಡಬೇಕು.

ಮಾತಿಗೆಂದು ಒಂದು ವಿಷಯ ನೋಡೋಣ : ಬಜರಂಗ ದಳದಲ್ಲಿರುವವರು ಸಹ ಒಂದು ರೀತಿ ಮತಾಂತರ ಹೊಂದಿರುವವರೇ ಆಗಿದ್ದಾರೆ. ಇಪ್ಪತ್ತು ವರ್ಷಗಳ ಹಿಂದೆ ಅವರು ಇಂತಹ ಮತೀಯ ನೀತಿ ಅನುಸರಿಸುತ್ತಿರಲಿಲ್ಲ. ಮತಾಂತರವು ಪ್ರಜ್ಞಾಪೂರ್ವಕವಾದ ಬದಲಾವಣೆಯ ಕ್ರಿಯೆ, ಹುಟ್ಟಿನಿಂದಲೇ ಬಂದಿರುವ ಸ್ವಭಾವವಲ್ಲ. ನಮ್ಮ ನಾಡಿನ ಕ್ರಾಂತಿಕಾರಿ ಸಮಾಜ ಸುಧಾರಕರಾದ ಬಸವಣ್ಣನವರು ಮತಾಂತರ ಹೊಂದಿದ್ದವರು ಮತ್ತು ಇತರರನ್ನು ಅದಕ್ಕೆ ಪ್ರೇರೇಪಿಸಿದವರು. ಆರೆಸ್ಸೆಸ್‌ನವರು ಯಾರಾದರೂ ಅದನ್ನು ಬಿಟ್ಟು ಬೇರೊಂದು ಸಿದ್ಧಾಂತಕ್ಕೆ ಬದ್ಧರಾದರೆ ಅದೂ ಮತಾಂತರವೇ ಆಗುತ್ತದೆ. ಅಷ್ಟೇ ಏಕೆ, ಬಿಜೆಪಿಗೆ ಪಕ್ಷಾಂತರಿಗಳಾಗುವುದು ಸಹ ಒಂದು ರೀತಿಯ ಮತಾಂತರವಲ್ಲವೆ ? ಆದ್ದರಿಂದ, ಯಾವುದೇ ಮತಧರ್ಮದ ಮಾನವತೆ, ನೈತಿಕತೆ, ನೈಷ್ಠಿಕ ಆಚರಣೆ, ಎಲ್ಲರನ್ನೂ ಒಳಗೊಳ್ಳುವ ಲಕ್ಷಣ, ಇವು ಜನರನ್ನು ಆಕರ್ಷಿಸಬೇಕು. ಹಿಂದು ಧರ್ಮದಲ್ಲಿ ಅವೆಲ್ಲಾ ಹಾಸುಹೊಕ್ಕಾಗಿರಲು ಸಾಧ್ಯವಿದೆ, ಅದನ್ನು ಬೆಳೆಸುವುದು ಮತಾಂತರ ಪ್ರಚೋದನೆಗೆ ಉತ್ತರ. ಇಷ್ಟಕ್ಕೂ ಹಿಂದುಧರ್ಮದಿಂದ ಭಿನ್ನವಾದ ಮತಧರ್ಮಗಳೆಲ್ಲಾ ಸುಲಕ್ಷಣಗಳಿಂದಲೇ ತುಂಬಿವೆಯೆ? ಹಿಂದು ಬಣದ 'ಅಸ್ಪೃಶ್ಯ'ರು ಕ್ರೈಸ್ತಧರ್ಮದ ತೆಕ್ಕೆಯಲ್ಲೂ ಹಾಗೆಯೇ ಉಳಿದಿರುವುದು ವಾಸ್ತವ. 'ಹೊಸತು' ಪತ್ರಿಕೆಯಲ್ಲಿ ಇತ್ತೀಚೆಗೆ ಪರಿಚಯಿಸಲ್ಪಟ್ಟ ''ಕರುಕ್ಕು'' ಎಂಬ ತಮಿಳು ಪುಸ್ತಕವು ಅದಕ್ಕೆ ಬೇಕಾದಷ್ಟು ಪುರಾವೆ ಒದಗಿಸುತ್ತದೆ.

ಒಟ್ಟಿನಲ್ಲಿ, ನಾವಿಂದು ಕದ್ದು-ಮುಚ್ಚಿ ಮಾಡಲಾಗುವ ಭಯೋತ್ಪಾದಕ ಕೃತ್ಯಗಳು ಮತ್ತು ಬಹಿರಂಗವಾಗಿ ನಡೆಸುವ ಅಂಥವೇ ಕೃತ್ಯಗಳು, ಎರಡನ್ನೂ ಹಿಮ್ಮೆಟ್ಟಿಸಬೇಕಾಗಿದೆ. ಎಲ್ಲ ಮತಧರ್ಮಗಳವರೂ ಆಯಾ ಮತಗಳ ಮೌಲ್ಯಯುತ ಆಚರಣೆಗಳಿಗೆ ಬದ್ಧರಾಗಿ, ಪರಸ್ಪರ ದ್ವೇಷ-ಮತ್ಸರಗಳ ವಾತಾವರಣಕ್ಕೆ ಇತಿಶ್ರೀ ಹಾಡಬೇಕಾಗಿದೆ. ಉಪದೇಶಗಳು, ಚರ್ಚೆಗಳು, ಮಾಧ್ಯಮಗಳ ಬಳಕೆ, ಧರ್ಮಗ್ರಂಥಗಳ ಅಧ್ಯಯನ ಇವೆಲ್ಲಾ ಈ ನಿಟ್ಟಿನಲ್ಲಿ ನಡೆಯದಿದ್ದರೆ ಮತಧರ್ಮಗಳು ಯಾವ ಪುರುಷಾರ್ಥಕ್ಕೆ ? ಮತಧರ್ಮಗಳು ತಮ್ಮ ಮೂಲಭೂತ ಆಶಯಗಳನ್ನು ಲೆಕ್ಕಿಸದಿದ್ದರೆ ಅವು ಬರಡಾಗುತ್ತವೆ, ಬಡವಾಗುತ್ತವೆ, ಹೊರೆಯಾಗುತ್ತವೆ. ಎಲ್ಲ ಮತಧರ್ಮೀಯರಿಗೂ ಆಯಾ ಮತಧರ್ಮಗಳ ನೇತಾರರು ಇದನ್ನು ತಿಳಿಸಿಕೊಡದಿದ್ದರೆ ಅವರು ಧರ್ಮದ್ರೋಹಿಗಳಾಗುತ್ತಾರೆ.

ಇಲ್ಲಿ ಇನ್ನೊಂದು ವಿಚಾರವಿದೆ : ನವ ನಾಗರಿಕತೆ ಮತ್ತು ಮಧ್ಯಕಾಲೀನ ಆಚರಣೆಗಳು ಏಕಕಾಲಕ್ಕೆ ಮುಖಾಮುಖಿಯಾಗುವ ಸಂದರ್ಭ ನಮ್ಮದು. ಒಂದು ಚಿಕ್ಕ ಉದಾಹರಣೆ ನೋಡೋಣ. ಗಣೇಶನ ಉತ್ಸವವು ಇಂದು ನಡೆಯುವಂತೆ ನೂರೈವತ್ತು ವರ್ಷಗಳ ಹಿಂದೆ ನಡೆಯುತ್ತಿರಲಿಲ್ಲ. ಉತ್ಸವದ ಕಾರಣದಿಂದಾಗಿ ಮತೀಯ ಘರ್ಷಣೆಯು ಅಂದು ಇಂದಿನ ಸ್ವರೂಪದ್ದಾಗಿರಲು ಸಾಧ್ಯವಿರಲಿಲ್ಲ. ಇಂದು ಪಟ್ಟಣಗಳ ಮುಖ್ಯರಸ್ತೆಗಳಲ್ಲಿ ಗಣೇಶನ ಮೆರವಣಿಗೆ ನಡೆಯುತ್ತದೆ. ಅದನ್ನು ನಿಷೇಧಿಸುವುದು ಯೋಗ್ಯವಲ್ಲ. ಆದರೆ ಅವೇ ಮುಖ್ಯರಸ್ತೆಗಳಲ್ಲಿ ಮಸೀದಿಗಳೂ ಇವೆ. ಅವನ್ನು ಸ್ಥಳಾಂತರಿಸುವುದು ಪ್ರಾಯೋಗಿಕವಲ್ಲ. ಆದ್ದರಿಂದ, ಉತ್ಸವವು ಚೆನ್ನಾಗಿ ನಡೆಯಬೇಕಾದರೆ, ಪೊಲೀಸರ ಅಗತ್ಯವನ್ನು ಕಡಿಮೆಗೊಳಿಸುವುದು ಸರಿಯೆನಿಸಿದರೆ, ಮಸೀದಿ ಮತ್ತು ಗಣೇಶ ಒಂದು ವ್ಯಾವಹಾರಿಕ ಒಪ್ಪಂದಕ್ಕೆ ಬರಬೇಕು. ಹಿಂದೆಲ್ಲಾ ಹಾಗೆ ನಡೆದಿದೆ ಮತ್ತು ಈಗ ಅದು ನಡೆಯಲು ಅಸಾಧ್ಯವೆಂದೇನೂ ಇಲ್ಲ. ಅದಕ್ಕೆ ಬೇಕಾದ್ದು ಕೇವಲ ಎರಡು ಕ್ರಿಯೆಗಳು : ಮಸೀದಿಯಲ್ಲಿ ಕಲ್ಲುಗಳನ್ನು ಶೇಖರಣೆ ಮಾಡದಿರುವುದು ಮತ್ತು ಮಸೀದಿಯೆದುರಿನ ಹತ್ತು ಅಡಿಗಳಷ್ಟು ರಸ್ತೆಯಲ್ಲಿ ಗಣೇಶೋತ್ಸವದ ಭಾಗವಾಗಿರುವ ವಾದ್ಯವನ್ನು ಒಂದು ನಿಮಿಷ ಸ್ಥಗಿತಗೊಳಿಸುವುದು. ಇಷ್ಟನ್ನು ಸಹ ಸಹಿಸದೆ ಪ್ರತಿವರ್ಷ ಮಾರಾಮಾರಿ ಮಾಡುವುದು ಯಾವ ಸಂಸ್ಕೃತಿ, ಯಾವ ಮತಧರ್ಮದ ಶ್ರೇಷ್ಠತೆಯ ಪ್ರತೀಕ ! ಉತ್ಸವಕ್ಕಿಂತಲೂ ಪ್ರದರ್ಶನ ಮುಖ್ಯವಲ್ಲ ಮತ್ತು ಮತಶ್ರದ್ಧೆಗಿಂತಲೂ ಕಲ್ಲು ಹೆಚ್ಚು ಶಕ್ತವಲ್ಲ. ಸರ್ವಧರ್ಮ ಸಮನ್ವಯದ ಮಾತನ್ನಾಡುವ ನಮ್ಮ ದೇಶದಲ್ಲಿ ಇದನ್ನು ಅನುಷ್ಠಾನಕ್ಕೆ ತರಲಾರೆವೆ ? ರಾಜಕೀಯವಲ್ಲದ ಮತಧರ್ಮದ ಆಚರಣೆಯಾದರೆ ಅದು ಸಾಧ್ಯ.

* * *

ದೆಹಲಿಯಲ್ಲಿ ಸ್ಫೋಟಗೊಂಡ ಬಾಂಬುಗಳಿಂದಾಗಿ ಹತರಾದವರಿಗೆ ಮತ್ತು ಗಾಯಾಳುಗಳಾದವರಿಗೆ 'ಹೊಸತು' ತನ್ನ ಸಾಂತ್ವನವನ್ನು ವ್ಯಕ್ತಪಡಿಸುತ್ತದೆ ಹಾಗೂ ಹತ್ಯೆಯ ಸಂಚು ಹೂಡಿದವರನ್ನು ಖಂಡಿಸುತ್ತದೆ. ಈ ರೀತಿಯ ಹಿಂಸಾಕಾರ್ಯಗಳು ಒಂದೊಂದು ಮತಧರ್ಮದವರನ್ನು ಇನ್ನೊಂದು ಮತಧರ್ಮದವರ ಒತ್ತೆಯಾಳುಗಳನ್ನಾಗಿ ಮಾಡಿ ಅಂತಃಕಲಹ, ಅನುಮಾನ, ಮತ್ತು ಅಸಹನೆಗಳನ್ನು ಬೆಳೆಸುತ್ತದೆ. ದೆಹಲಿಯಲ್ಲಿ ಭಯೋತ್ಪಾದಕರ ಬಾಂಬುಗಳು ಸಿಡಿಯುವ ಸಮಯದಲ್ಲೇ ಅಮೆರಿಕಾದ ರಾಜತಾಂತ್ರಿಕ ವಲಯಗಳು ಇನ್ನೊಂದು ಬಾಂಬು ಸಿಡಿಸಿವೆ. ಅದರಿಂದ ಈಗಲೇ ಜನರು ಹತರಾಗುವುದಿಲ್ಲ, ಆದರೆ ಬರುವ ದಿನಗಳಲ್ಲಿ ನಮ್ಮ ದೇಶದ ಸ್ವಾತಂತ್ರ್ಯ- ಸಾರ್ವಭೌಮತ್ವ ಹತವಾಗುತ್ತವೆ. ಎರಡು ವರ್ಷಗಳಿಂದ ಇಡೀ ದೇಶಕ್ಕೆ ೧೨೩ ಒಪ್ಪಂದದ ಪಾರಾಯಣ ಮಾಡಿಸಿದ ಮನಮೋಹನ ಸಿಂಗರು ಮುಚ್ಚಿಟ್ಟ ಅನೇಕ ಅಂಶಗಳು ಈಗ ಒಂದೊಂದಾಗಿ ಹೊರಬರುತ್ತಿವೆ ಮತ್ತು ದೇಶವನ್ನು ಹತಾಶೆಗೆ ದೂಡುತ್ತಿವೆ. ಆದರೆ ಅಮೆರಿಕಾ ಎಂದರೆ ಪರವಶರಾಗುವ ನಮ್ಮ ಪ್ರಧಾನಿ ಈಗಲೂ ಎಲ್ಲಾ ಸ್ವಚ್ಛವಾಗಿದೆ, ಸೊಗಸಾಗಿದೆ, ಎಂಬ ಸೋಗನ್ನೇ ಹಾಕುತ್ತಿದ್ದಾರೆ. 'ಹೊಸತು' ಮೊದಲಿನಿಂದಲೂ ಹೇಳುತ್ತಾ ಬಂದಿರುವಂತೆ ೧೨೩ ಒಪ್ಪಂದದ ಫಲಶ್ರುತಿಯೆಂದರೆ 'ವ್ರತವೂ ಇಲ್ಲ, ಸುಖವೂ ಇಲ್ಲ' ಎಂಬುದು. ಇತ್ತ ಪರಮಾಣು ಶಸ್ತ್ರಾಸ್ತ್ರ ವಿರೋಧಿ ನಿಲುವನ್ನು ಸಡಿಲಿಸುವುದು, ಅತ್ತ ಪರಮಾಣು ಇಂಧನವು ನಿಯಮಾನುಸಾರ ಸರಬರಾಜಾಗದಿರುವುದು ! ಇತ್ತ ಸಾರ್ವಭೌಮತ್ವದ ಹರಣ, ಅತ್ತ ನಿರೀಕ್ಷಿತ ವಿದ್ಯುದುತ್ಪಾದನೆಗೆ ಹೊಡೆತ !! ಲಾಲಕೃಷ್ಣ ಅಡ್ವಾನಿಯವರು ಹೇಳಿರುವಂತೆ ಈ ಒಪ್ಪಂದವು ನಮ್ಮ ದೇಶದ ದೃಷ್ಟಿಯಿಂದ ಒಂದು 'ಬೃಹತ್ ವಂಚನೆ' (ಮೆಗಾ ಫ್ರಾಡ್). ಅವರೇ ಸ್ವತಃ ಇದಕ್ಕಿಂತಲೂ ಕಡಿಮೆ ವಂಚನೆಯನ್ನು ಆಯ್ದುಕೊಂಡು ಅಮೆರಿಕಾದಿಂದ ದೂರ ಉಳಿಯುತ್ತಿದ್ದರೆಂದೇನೂ ಇಲ್ಲ. ಅವರ ಆಕ್ಷೇಪವೇನೆಂದರೆ, ತಾವು ಮಾಡಬೇಕಾದ್ದನ್ನು ಮನಮೋಹನ ಸಿಂಗ್ ಮಾಡಿಬಿಟ್ಟು ತಮ್ಮ ವಂಚನಾ ಹಕ್ಕನ್ನು ಕಸಿದುಕೊಂಡರಲ್ಲಾ, ಎಂಬುದು. ಒಬ್ಬ ನಾಗರಾಜ, ಇನ್ನೊಬ್ಬ ಸರ್ಪರಾಜ. ದೇಶಕ್ಕೆ ಇವುಗಳ ವಿಷವು ನಂಜಾಗದಂತೆ ಮಾಡುವ ರಾಜಕೀಯ ಜವಾಬ್ದಾರಿ ಜನತೆಯ ಮೇಲಿದೆ.

* * *

ಭಾರತೀಯ ಜನತಾ ಪಕ್ಷದ ರಾಷ್ಟ್ರೀಯ ಕಾರ್ಯಕಾರಿ ಸಮಿತಿಯ ಸಭೆಯು ಸೆಪ್ಟೆಂಬರ್‌ನಲ್ಲಿ ಅದ್ದೂರಿಯಾಗಿ ನಡೆಯಿತು. ಸರ್ಕಾರದ ಬೊಕ್ಕಸದಿಂದ ನೇರವಾಗಿ ಹಣ ವ್ಯಯಿಸಿರಲಾರರು, ಆದರೆ ರಾಜ್ಯದ ಯಂತ್ರವನ್ನು ಬೇಕಾದ ಹಾಗೆ ಬಳಸಿ ಜನತೆಯ ಮೇಲೆ ತೆರಿಗೆಯ ಹೊರೆಯನ್ನು ಹೆಚ್ಚಿಸಲಾಗಿದೆ. ''ಇಂದು ಕರ್ನಾಟಕ – ನಾಳೆ ಇಡೀ ದಕ್ಷಿಣ ಭಾರತ'' ಎಂಬ ಅಡ್ವಾನಿ ಘೋಷಣೆಯನ್ನು ತಮಿಳುನಾಡು, ಕೇರಳ ಮತ್ತು ಆಂಧ್ರಪ್ರದೇಶ ಸ್ವೀಕರಿಸುತ್ತವೆಯೇ ಎಂಬುದನ್ನು ಕಾದುನೋಡಬೇಕು. ಕರ್ನಾಟಕದಲ್ಲಿ ಭಾಜಪದ ಏಕಪಕ್ಷೀಯ ಸರ್ಕಾರವು ರಚನೆಯಾಗುವತ್ತ ಪಕ್ಷಾಂತರ ನಡೆಯುತ್ತಿರುವುದನ್ನು ಮಾನ್ಯ ರಾಜನಾಥ ಸಿಂಗರು ಸ್ವಾಗತಿಸಿದ್ದಾರೆಂದು ವರದಿಯಾಗಿದೆ. ಅದು ಅವರ ಪ್ರಜಾಪ್ರಭುತ್ವದ ಕಲ್ಪನೆ. ಅಧ್ಯಕ್ಷ ಸಿಂಗ್ ಹೇಳಿದ ಇನ್ನೊಂದು ಮಾತು ಹೀಗಿದೆ : ''ಕಾಶ್ಮೀರದಲ್ಲಿ ಅಮರನಾಥ ಯಾತ್ರೆಗೆ ಹೋಗುವ ಹಾದಿಯನ್ನು ರಾಷ್ಟ್ರೀಕರಿಸಬೇಕು. ಜಮ್ಮು-ಕಾಶ್ಮೀರದ ಈಚಿನ ವಿದ್ಯಮಾನಗಳು ರಾಷ್ಟ್ರೀಯತೆ ಮತ್ತು ರಾಷ್ಟ್ರವಿರೋಧಿ ಮನೋಭಾವಗಳ ನಡುವೆ ನಡೆದ ಘರ್ಷಣೆ.'' (ಇವೇ ಮಾತುಗಳಲ್ಲದಿರಬಹುದು, ಆದರೆ ಸಾರಾಂಶ ಅದೇ). ಇದು ಅನರ್ಥಕಾರಿ ಮಾತುಗಳು. ದೇಶದ ಯಾವುದೇ ಭಾಗದ ಒಂದು ರಸ್ತೆಯನ್ನು ರಾಷ್ಟ್ರೀಕರಿಸುವುದು ಎಂದರೇನು ? ಇದರ ಮಾರಕ ಸೂಚನೆ ಇದು : ಕಾಶ್ಮೀರ ಹೇಗೂ ನಮ್ಮ ದೇಶದ ಭಾಗವಲ್ಲ; ಅಲ್ಲಿಯ ಒಂದು ರಸ್ತೆಯನ್ನಾದರೂ ನಮ್ಮದಾಗಿಸಿಕೊಂಡು ರಕ್ಷಿಸಿಕೊಳ್ಳೋಣ ! ಒಂದು ರಾಜಕೀಯ ಪಕ್ಷದ ಅಧ್ಯಕ್ಷರು ಹೀಗೆ ಮಾತನಾಡುತ್ತಾರೆಂದು ನಂಬಬಹುದೆ ? ಸಿಂಗ್ ಅವರು ತಮ್ಮ ಈ ಮಾತನ್ನು ದಯವಿಟ್ಟು ಹಿಂತೆಗೆದುಕೊಳ್ಳುತ್ತಾರೆಂದು ಆಶಿಸೋಣ. ಎರಡನೆಯ ಪ್ರಶ್ನೆ ''ರಾಷ್ಟ್ರವಿರೋಧಿ ಮನೋಭಾವ''ಕ್ಕೆ ಸಂಬಂಧಿಸಿದ್ದು. ಗಲಭೆ ಮಾಡಿದ್ದು ಕಾಶ್ಮೀರದಲ್ಲಿ ಮಾತ್ರವಲ್ಲ, ಜಮ್ಮುವಿನಲ್ಲೂ ಸಹ. ಒಂದು ಇನ್ನೊಂದಕ್ಕೆ ಪ್ರಚೋದನೆ ನೀಡುವಂತಿತ್ತು. ಕಾಶ್ಮೀರದ ಜನರೆಲ್ಲಾ 'ರಾಷ್ಟ್ರವಿರೋಧಿ ಮನೋಭಾವ'ದವರಲ್ಲ, ಹಾಗಿದ್ದಿದ್ದರೆ ಕಾಶ್ಮೀರವು ಭಾರತದ ಅವಿಭಾಜ್ಯ

ಅಂಗವಾಗಿರುತ್ತಿರಲಿಲ್ಲ. ಪ್ರತ್ಯೇಕತಾವಾದಿಗಳ ಮೇಲಿನ ಸಿಟ್ಟು ಇಡೀ ಕಾಶ್ಮೀರದ ಜನತೆಯ ಮೇಲೆ ಆಪಾದನೆ ಹೊರಿಸುವ ರೂಪ ತಾಳಬಾರದು. ಹಾಗೆ ಮಾಡಿದರೆ, ನಮ್ಮ ಇನ್ನೂ ಎಷ್ಟೋ ರಾಜ್ಯದ ಜನರನ್ನು ಸಾರಾಸಗಟಾಗಿ ರಾಷ್ಟ್ರವಿರೋಧಿಗಳೆಂದು ದೂಷಿಸಬೇಕಾದೀತು. ಕೆಲವರು ರಾಷ್ಟ್ರವಿರೋಧಿಗಳೇ ಆಗಿದ್ದಾರೆಂದು ಭಾವಿಸೋಣ. ಅವರನ್ನು ಏನು ಮಾಡಬೇಕು? ಪರಿವರ್ತಿಸಲು ಯತ್ನಿಸಬೇಕೋ ಅಥವಾ ದೂಷಿಸಿ ಇನ್ನೂ ಕಠಿಣ ವಿರೋಧಿಗಳನ್ನಾಗಿಸಬೇಕೋ? ೧೯೪೭ರಿಂದ ಇಲ್ಲಿಯವರೆಗಿನ ಬೆಳವಣಿಗೆಗಳನ್ನು ಗಮನಿಸಿದರೆ ಕ್ರಮೇಣ ಕಾಶ್ಮೀರದ ಒಂದು ದೊಡ್ಡ ವಿಭಾಗವು ದೇಶದ ಆಶಯಗಳಿಂದ ದೂರವಾಗುತ್ತಾ ಬಂದಿರುವುದು ಗೊತ್ತಾಗುತ್ತದೆ. ರಾಜನಾಥ ಸಿಂಗರು ಆ ಪ್ರಕ್ರಿಯೆಯನ್ನು ಇನ್ನೂ ವ್ಯಾಪಕಗೊಳಿಸಿ ಪ್ರತ್ಯೇಕತೆಯನ್ನು ಗಟ್ಟಿಗೊಳಿಸ ಹೊರಟಿದ್ದಾರೆ. ಹತಾಶರಾಗಿರುವ ಕಾಶ್ಮೀರದ ಜನವಿಭಾಗವೊಂದನ್ನು ಹತ್ತಿರಕ್ಕೆ ಬರಮಾಡಿಕೊಳ್ಳುವ ಕೆಲಸ ಮಾಡಬೇಕೇ ವಿನಾ ಅವರನ್ನು ಇನ್ನೂ ದೂರ ತಳ್ಳುವುದನ್ನಲ್ಲ. ಇಡೀ ಅಮರನಾಥ ಪ್ರಕರಣದಲ್ಲಿ ಭಾರತೀಯ ಜನತಾ ಪಕ್ಷವು ವಿಚ್ಛಿದ್ರಕಾರಕ ಶಕ್ತಿಗಳನ್ನು ಪ್ರಬಲಗೊಳಿಸಿದ್ದು ಶ್ಲಾಘನೀಯ ಕಾರ್ಯಕ್ರಮವಲ್ಲ; ದೇಶಭಕ್ತಿಯು ಆ ಸ್ವರೂಪ ಪಡೆಯುವುದು ಸರ್ವಥಾ ಅಕ್ಷಮ್ಯ. ಆ ಪಕ್ಷದ ಈಗಿನ ಕ್ರೈಸ್ತವಿರೋಧಿ ಚಟುವಟಿಕೆಯ ಪರಿಣಾಮವೂ ನಕಾರಾತ್ಮಕವಾದದ್ದೆಂದು ಅವರಿಗೇಕೆ ಭಾಸವಾಗದೋ ತಿಳಿಯದು.



ಪ್ರೊ॥ ಎ. ಲಕ್ಷ್ಮೀಸಾಗರ

* * *

ಮಾನ್ಯರೂ ಆತ್ಮೀಯರೂ ಆದ ಪ್ರೊ॥ ಎ. ಲಕ್ಷ್ಮೀಸಾಗರ ಅವರ ನಿಧನಕ್ಕೆ 'ಹೊಸತು' ಸಂತಾಪ ಸೂಚಿಸುತ್ತದೆ. ಆರಂಭದ ಕಾಲದಿಂದಲೂ ಪತ್ರಿಕೆಯ ಹಿತೈಷಿಗಳಾಗಿದ್ದವರು, ಪತ್ರಿಕೆಯ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾ ಬಂದವರು ಅವರು. ನೇರನುಡಿಯ, ಸರಳ ಸ್ವಭಾವದ, ಭ್ರಷ್ಟಾಚಾರವನ್ನು ಆಮೂಲಾಗ್ರವಾಗಿ ಖಂಡಿಸುತ್ತಾ, ಜೀವನವನ್ನು ತೆರೆದ ಪುಸ್ತಕವನ್ನಾಗಿ ಇರಿಸಿಕೊಂಡಿದ್ದ ಶ್ರೀಯುತರು ಅಪರೂಪದ ವ್ಯಕ್ತಿ. ಅವರನ್ನು ಕುರಿತ ಒಂದು ಪ್ರಕರಣವನ್ನು ಉಲ್ಲೇಖಿಸಲು 'ನಾನು' ಪದಪ್ರಯೋಗ ಮಾಡಲು ಓದುಗರ ಅನುಮತಿ ಬೇಡುತ್ತೇನೆ. ನಾನು ಭಾಗವಹಿಸುತ್ತಿದ್ದ ಕಾರ್ಯಕ್ರಮಗಳಿಗೆ ಎಷ್ಟೋ ಬಾರಿ ಆಹ್ವಾನವಿಲ್ಲದೆಯೂ ಅವರು ಬಂದಿದ್ದಾರೆ, ನಾನೂ ಹಾಗೆಯೇ ಮಾಡಿದ್ದೇನೆ. ಗಾಂಧಿನಗರದ ಅವರ ಮನೆಗೆ ಹತ್ತಾರು ಬಾರಿ ಹೋಗಿ ದೀರ್ಘಕಾಲದವರೆಗೆ ಅನೇಕ ವಿಷಯಗಳನ್ನು ಚರ್ಚಿಸಿದ್ದೇನೆ, ಅವರ ಅನುಭವಗಳನ್ನು ಕೇಳಿ ತಿಳಿದಿದ್ದೇನೆ. ಒಂದು ಮರೆಯಲಾಗದ ಘಟನೆ ಇದು : ಅವರು ಸಚಿವರಾಗಿದ್ದ ಕಾಲ. ಒಮ್ಮೆ ನಾನು ಹುಬ್ಬಳ್ಳಿಗೆ ಹೊರಟಿದ್ದೆ; ಎರಡನೆಯ ದರ್ಜೆ ಮಲಗುವ ಕೋಚ್‌ನಲ್ಲಿ. ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ನಿನ ಯಾವುದೋ ಶಿಬಿರದಲ್ಲಿ ತರಗತಿ ನಡೆಸಲು. ಬೆಂಗಳೂರಿನ ರೈಲು ನಿಲ್ದಾಣದ ಪ್ಲಾಟ್‌ಫಾರ್ಮ್‌ನಲ್ಲಿ ನಿಧಾನವಾಗಿ ನಡೆದುಹೋಗುತ್ತಿದ್ದೆ. ಈಗಿನಂತೆ ಆಗಿನ್ನೂ ರಕ್ಷಣಾ ನಿಯಮಗಳು ಘೋರವಾಗಿರಲಿಲ್ಲ. ಆದರೂ ಪೊಲೀಸಿನವರೊಬ್ಬರು ನನಗೆ 'ದಾರಿ ಬಿಡಿ, ದಾರಿ ಬಿಡಿ' ಎಂದು ಹೇಳಿದರು. ಯಥಾಪ್ರಕಾರ ನಾನು ಯಾರಿಗೆ ಮತ್ತು ಏಕೆ ದಾರಿ ಬಿಡಬೇಕೆಂದೂ, ನಾನು ಯಾರ ದಾರಿಗೂ ಅಡ್ಡವಾಗಿರಲಿಲ್ಲವೆಂದೂ ಹೇಳಿದೆ. ಆತ ಇನ್ನೂ ಏನೋ ಹೇಳಬೇಕೆನ್ನುವಷ್ಟರಲ್ಲಿ ಹಿಂದಿನಿಂದ ಬಂದ ಪ್ರೊ॥ ಲಕ್ಷ್ಮೀಸಾಗರ್ ಅವರು ಹೆಗಲ ಮೇಲೆ ಕೈಹಾಕಿ "ಏನು ಡಾಕ್ಟ್ರೇ, ಎಲ್ಲಿಗೆ ಪ್ರಯಾಣ" ಎಂದರು. ಪೊಲೀಸಿನವರಿಗೆ ಆಶ್ಚರ್ಯ. ನಾವಿಬ್ಬರೂ ಲೋಕಾಭಿರಾಮವಾಗಿ ಮಾತನಾಡುತ್ತಾ ನಡೆದೆವು. ನನ್ನ ಕಂಪಾರ್ಟ್‌ಮೆಂಟ್ ಬಂದಾಗ ನಾನು ಅವರನ್ನು ಬೀಳ್ಕೊಡಲಿದ್ದೆ. ಆದರೆ ಅವರೂ ನನ್ನೊಡನೆ ಬೋಗಿಗೆ ಹತ್ತಿ ತುಮಕೂರಿನವರೆಗೆ ನನ್ನೊಡನಿದ್ದು ನಂತರ ಅವರ ಪ್ರಥಮ ದರ್ಜೆಯ ಬೋಗಿಗೆ ಹೋದರು. ಅಷ್ಟೂ ಕಾಲ ಏನೇನೋ ಮಾತನಾಡುತ್ತಿದ್ದೆವು. ಅವರು ಇಳಿದುಹೋದ ನಂತರ ಸಹಪ್ರಯಾಣಿಕರಿಗೆ ಅವರು ಯಾರೆಂಬುದನ್ನು ಹೇಳಿದೆ. ಇಂಥ ಸಚಿವರೂ ಇರುತ್ತಾರೆಯೇ ಎಂದು ಅವರಿಗೆ ಆಶ್ಚರ್ಯ, ಸಂತೋಷ. ಈಗ ಮಂತ್ರಿಗಳು ಹಾಗಿರುತ್ತಾರೋ ಇಲ್ಲವೋ ನನಗೆ ತಿಳಿಯದು. ಇದ್ದರೂ ಲಕ್ಷ್ಮೀಸಾಗರ್ ರೀತಿಯಲ್ಲಿ ಅವರು ಪ್ರೋಟೊಕೋಲ್ ಮುರಿದು ನನ್ನಂಥವರೊಡನೆ ಪ್ರಯಾಣಿಸಲಾರರು. ಅವರನ್ನು ಗೌರವದಿಂದ ನೆನೆಯುತ್ತೇನೆ. ನಾನು ಜೆ. ಪಿ. ಚಳುವಳಿಯ ವಿರೋಧಿಯಾಗಿದ್ದವನೆಂದು ತಿಳಿದಿದ್ದೂ ಅವರು ನನ್ನನ್ನು ಎಂದೂ ಅವಹೇಳನ ಮಾಡಲಿಲ್ಲ. "ನಿಮ್ಮದು ನಿಮಗೆ, ನಮ್ಮದು ನಮಗೆ, ಡಾಕ್ಟ್ರೆ. ಇಬ್ಬರೂ ನಂಬುವಂಥವು ಬೇಕಾದಷ್ಟಿವೆ, ಅಲ್ಲವೆ" ಎಂದುಬಿಡುತ್ತಿದ್ದರು. ಅವರನ್ನು ಜಾತಿವಾದಿಯೆಂದು ಛೇಡಿಸಿರುವವರನ್ನು ನಾನು ಬಲ್ಲೆ. ಅವರು ಹಿಂದುಳಿದವರ ಪರವಾಗಿದ್ದವರೇ ವಿನಾ ಬೇರೆಷ್ಟೋ ರಾಜಕಾರಣಿಗಳಂತೆ ಸ್ವಾರ್ಥ ಜಾತಿವಾದಿ ರಾಜಕಾರಣಿಯಾಗಿರಲಿಲ್ಲ. ರಾಮಕೃಷ್ಣ ಹೆಗಡೆಯವರ ಆಪ್ತರಾಗಿದ್ದರೂ ಪ್ರೊ॥ ಲಕ್ಷ್ಮೀಸಾಗರ್ ಅವರು ನನ್ನಂಥವರಿಗೆ ಪ್ರಿಯರಾಗಲು ಅದೇ ಮುಖ್ಯಕಾರಣವಾಗಿತ್ತು.

* * *

ಸೆಪ್ಟೆಂಬರ್ ೫ರಂದು ಯಾಂತ್ರಿಕವಾಗಿ ಇನ್ನೊಂದು ಶಿಕ್ಷಕರ ದಿನ ನಡೆದುಹೋಯಿತು. ನಮ್ಮಲ್ಲಿ ಈಗ ದಿನಗಳಿಗೇನೂ ಕಡಿಮೆ ಇಲ್ಲ: ಮಕ್ಕಳ ದಿನ, ಅಪ್ಪನ ದಿನ, ಅಮ್ಮನ ದಿನ, ಎಲ್ಲವೂ ಇವೆ. ಅದಕ್ಕಾಗಿ 'ಆರ್ಚಿ' ಕಾರ್ಡ್‌ಗಳು ಹೇರಳವಾಗಿ ಮಾರಾಟವಾಗುವುದೂ ಉಂಟು. ಇನ್ನಷ್ಟು ಕಾರ್ಡ್‌ಗಳು ಖರ್ಚಾಗುವುದಾದರೆ ನಾಳೆ 'ಕಪ್ಪೆಯ ದಿನ', 'ಸೊಳ್ಳೆಯ ದಿನ' ಎಲ್ಲವೂ ಬರಬಹುದು. ಅಥವಾ ಶಿಕ್ಷಕರ ದಿನವನ್ನೇ 'ಸೊಳ್ಳೆಯ ದಿನ'ವೆಂದು ಕರೆಯುವುದು ಉಚಿತವೂ? ಅದಕ್ಕಾಗಿ ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳಿಂದ ಹಣ ವಸೂಲು ಮಾಡುತ್ತಾರೆ. ಅದೆಲ್ಲಾ ಯಾವ ಶಿಕ್ಷಕರಿಗೆ ಹೋಗುತ್ತದೋ ತಿಳಿಯದು. ಬಹುಮಟ್ಟಿಗೆ ಶಾಲೆಗಳ ಆಡಳಿತ ಮಂಡಲಿಯವರ ಪಾಲಾಗುತ್ತದೆಂದು ಹೇಳುತ್ತಾರೆ. ಶಿಕ್ಷಕರು ಸ್ವತಃ ಮುಂದೆ ನಿಂತು "ವಿದ್ಯಾರ್ಥಿಗಳ ದಿನ"ವನ್ನು ಆಚರಿಸುವುದು ಸೂಕ್ತವಾಗಿರುತ್ತದೆ; ಏಕೆಂದರೆ, ಅವರಿಲ್ಲದಿದ್ದರೆ ಶಿಕ್ಷಕರಿಗೆಲ್ಲಿಯ ಸ್ಥಾನ? ಶಿಷ್ಯರು ದೊಡ್ಡವರಾಗಿ ಬೆಳೆದಾಗ ಶಿಕ್ಷಕರಿಗೆ ಒದಗುವ ಹೆಮ್ಮೆ, ಗೌರವಗಳೂ ಅಪೂರ್ವ. ಶಿಕ್ಷಕರು ವಿದ್ಯಾರ್ಥಿಗಳನ್ನು ಎಷ್ಟೋ ಬಾರಿ ಬೈದಿರುತ್ತಾರೆ, ಆದರೆ ಬಹುಮಟ್ಟಿಗೆ ವಿದ್ಯಾರ್ಥಿಗಳು ಅದನ್ನು ಮನಸ್ಸಿನಲ್ಲಿ ತುಂಬಿಕೊಂಡಿರುವುದಿಲ್ಲ. ಬದಲಾಗಿ, ಶಿಕ್ಷಕರು ಎಂದೋ ಚೆನ್ನಾಗಿ ಹೇಳಿದ್ದ ಪಾಠವನ್ನು ಸ್ಮರಿಸುತ್ತಾರೆ, ಅದೆಷ್ಟು ಖುಷಿ ತಂದಿದ್ದಿತೆಂದು ಭಾವಪರವಶರಾಗುತ್ತಾರೆ. ಶಿಕ್ಷಕರಿಗಲ್ಲದೆ ಬೇರಾವ ಕ್ಷೇತ್ರದ ಮಾರ್ಗದರ್ಶಿಗಳಿಗೂ ಇಂತಹ ಅನುಭವ ಅಪರೂಪದ್ದೇ ಇರಬೇಕು. ಶಿಕ್ಷಕರ ಪಾಠವನ್ನು ನೆನೆಯುವಂತೆ ಅವರ ತರಗತಿಗೆ ಚಕ್ಕರ್ ಹಾಕಿದ್ದುದನ್ನೂ ವಿದ್ಯಾರ್ಥಿಗಳು ಸರಸದಿಂದಲೇ ನೆನಪಿಸುತ್ತಾರೆ. ಮತ್ತೆ 'ನಾನು' ಎನ್ನುವುದು ಕ್ಷಮಾರ್ಹವಾದರೆ, ನನಗೆಷ್ಟೋ ಬಾರಿ ವಿದ್ಯಾರ್ಥಿಗಳು ಹೇಳುತ್ತಿದ್ದುದುಂಟು: "ಸಾರ್, ನಿಮಗೆ ವರ್ಗರಹಿತ ಸಮಾಜ ಪ್ರಿಯವಾದದ್ದೆಂದು ಕೇಳಿದ್ದೇವೆ. ಅಂತಹ ಸಮಾಜದ ನಿರ್ಮಾಣವಾಗುವವರೆಗೆ ನೀವು ಜೀವಂತವಾಗಿರುವುದು ಅನುಮಾನ. ಆದ್ದರಿಂದ ಇಂದೇ ನಿಮಗೆ ಆ ಅನುಭವ ನೀಡಲು ತೀರ್ಮಾನಿಸಿದ್ದೇವೆ. ಹೇಗೆ ಗೊತ್ತಾ, ನಿಮ್ಮ ಕ್ಲಾಸಿನಿಂದ ಹೊರಗುಳಿದು ನಿಮ್ಮ ಪಾಠವನ್ನು ಮೆಚ್ಚಿಕೊಳ್ಳುವ ಮೂಲಕ!" ಅರ್ಥಾತ್, ತಾವಷ್ಟೇ ವಿದ್ಯಾರ್ಥಿಗಳ ಏಳಿಗೆಗೆ ಏಕೈಕ ಕಾರಣವೆಂದು ಶಿಕ್ಷಕರು ಭ್ರಮಿಸಬೇಕಾಗಿಲ್ಲ. ಇಷ್ಟಕ್ಕೂ ಯಾವ ಉತ್ಪಾದನಾ ಕ್ಷೇತ್ರದಲ್ಲಿ ತಾನೆ ಶಿಕ್ಷಣದ ಪ್ರಕ್ರಿಯೆ ಮತ್ತು ಶಿಕ್ಷಕರು ಇರುವುದಿಲ್ಲ? ಡಿಕೆನ್ಸ್‌ನ ಫ್ಯಾಗಿನ್ ಕೂಡ ಶಿಕ್ಷಕನೇ! ಆದರೆ ಅವನು ಶ್ಲಾಘನೀಯನಲ್ಲ. ಕಾಶ್ಮೀರದ ಒಬ್ಬ ಮುದುಕ ಅಥವಾ ಮುದುಕಿ ಎಂಟು-ಹತ್ತು ವರ್ಷದ ಬಾಲಕನಿಗೋ ಬಾಲಕಿಗೋ ರತ್ನಗಂಬಳಿ ಹೆಣೆಯುವುದನ್ನು ಹೇಳಿಕೊಡುವಾಗ ಅವರೂ ಶಿಕ್ಷಕರೇ ಆಗಿರುತ್ತಾರೆ. ಹಾಗೆ ನೋಡಿದರೆ ಅವರು ತಮ್ಮ ಶಿಷ್ಯರನ್ನು ಬಹಳ ಹತ್ತಿರದಿಂದ ನೋಡುತ್ತಾರೆ, ಅತೀವ ವಾತ್ಸಲ್ಯದಿಂದ ನಡೆಸಿಕೊಳ್ಳುತ್ತಾರೆ. ಮಕ್ಕಳು ಶಾಲೆಗೆ ಹೋಗಲಾಗುವುದಿಲ್ಲವಲ್ಲ ಎಂಬುದಷ್ಟೇ ಕೊರಗು, ಆದರೆ ಅವರು ಉತ್ಪಾದನಾಶಾಲಿಗಳಾಗಿಯಂತೂ ಬೆಳೆಯುತ್ತಾರೆ. ಶಿಕ್ಷಕರ ದಿನದಂದು ಎಸ್. ರಾಧಾಕೃಷ್ಣನ್ ಅವರನ್ನು ನೆನೆಯುವುದು ರೂಢಿ. ಏನೊ, ಎಲ್ಲಾ ಶಿಕ್ಷಕರೂ ಅವರಂತೆಯೇ ಎಂಬ ಅಪ್ರಕಟಿತ ಅಹಂಕಾರ ಬೇರೆ. ಪಾಪ, ಎಷ್ಟೋ ವಿದ್ಯಾರ್ಥಿಗಳಿಗೆ ರಾಧಾಕೃಷ್ಣನ್ ಅಂಥವರು ಎಟಕುವವರಲ್ಲವಾದ್ದರಿಂದ ಯಾವನೋ ಒಬ್ಬ ರಾಮಕೃಷ್ಣನನ್ನೇ ಸಹಿಸೋಣವೆಂದು ಅಂದುಕೊಂಡಿರಬಹುದು! ನಮ್ಮ ಇಂದಿನ ವ್ಯವಸ್ಥೆಯಲ್ಲಿ ಶಿಕ್ಷಣ ಸಂಸ್ಥೆಯನ್ನು ಆಯ್ದುಕೊಳ್ಳುತ್ತಾರೆಯೇ ವಿನಾ ಶಿಕ್ಷಕನನ್ನು ಅಲ್ಲ. ಅಲ್ಲಿ ಯಾರಿರುತ್ತಾರೋ ಅವರೇ ಇವರಿಗೆ ಗುರು. ಎಲ್ಲಾ ಆಕಸ್ಮಿಕಗಳ ಸರಮಾಲೆ. ವಾಲ್ಮೀಕಿಯ ಆಶ್ರಮಕ್ಕೆ ಲವ-ಕುಶರು ಬಂದಾಗ ಅವರ ಪ್ರತಿಭೆಯಿಂದ ದಂಗಾದ ಇತರ ವಿದ್ಯಾರ್ಥಿಗಳು ಬೇರೆಡೆ ಹೋಗಲು ತೀರ್ಮಾನಿಸಿದರಂತೆ! ಇಂತಹ ಪ್ರತಿಭಾಸಂಪನ್ನರ ಜೊತೆ ಸ್ಪರ್ಧೆ ಸಾಧ್ಯವಿಲ್ಲವೆಂಬ ಕಾರಣದಿಂದ ಹಾಗೆ ಮಾಡಬೇಕಾಗಿ ಬಂತೆಂದು ಭವಭೂತಿ ತನ್ನ 'ಉತ್ತರರಾಮಚರಿತ' ನಾಟಕದಲ್ಲಿ ಹೇಳುತ್ತಾನೆ. ಈಗಿನ ವಿದ್ಯಾರ್ಥಿಗಳಿಗೆ ಇದು ಅನವಶ್ಯಕ.

ಏಕೆಂದರೆ, ವಿದ್ಯಾರ್ಥಿಗಳನ್ನು ಆಯ್ದುಕೊಳ್ಳುವಾಗಲೇ ಶಿಕ್ಷಣ ಸಂಸ್ಥೆಗಳವರು ವರ್ಗದ ಚೌಕಟ್ಟನ್ನು ಭದ್ರಗೊಳಿಸಿರುತ್ತಾರೆ. ಆದಕ್ಕೆ ತಕ್ಕಂತೆ ವ್ಯಾಪಾರ ಕುದುರಿಸಿಕೊಂಡಿರುತ್ತಾರೆ. ಉದಾಹರಣೆಗೆ, ಯೋಗಾಚಾರ್ಯ ತಿರುಮಲ ಕೃಷ್ಣಮಾಚಾರ್ಯರ ಒಬ್ಬ ಶಿಷ್ಯರಾದ ಶ್ರೀ ಪಟ್ಟಾಭಿ ಜೋಯಿಸ್ ಅವರು ತಮ್ಮ ಶಿಷ್ಯರಿಗೆಲ್ಲಾ ಪತ್ರಮುಖೇನ ಆದೇಶ ನೀಡುತ್ತಾರೆ: ನಾನು ಹೇಳಿಕೊಟ್ಟಿರುವುದನ್ನು ನಾನು ಹೇಳಿಕೊಟ್ಟಿರುವಂತೆಯೇ, ಅದೇ ಸನ್ನಿವೇಶವನ್ನು ರಚಿಸಿ ಹೇಳಿಕೊಡಬೇಕು. ಮತ್ತು, ಅದಕ್ಕೆ ಇಷ್ಟಿಷ್ಟು ಗೌರವ ಸಂಭಾವನೆಯನ್ನು ಗುರುಗಳಿಗೆ ಸಂದಾಯ ಮಾಡಬೇಕು. ಅಂದರೆ, ಎಂಥದೋ ಕೊಠಡಿಯಲ್ಲಿ ಪಟ್ಟಾಭಿಯವರು ಹೇಳಿಕೊಟ್ಟ ಪಾಠವನ್ನು ಬೇರೆಯವರಿಗೆ ಹೇಳಿಕೊಡಕೂಡದು. ಅವರು ಉಪಯೋಗಿಸುವ ಭವ್ಯ ಕೊಠಡಿಯ ಮಾದರಿಯೇ ಶಿಷ್ಯನದೂ ಆಗಿರಬೇಕು, ಇತ್ಯಾದಿ. ಭೌತಶಾಸ್ತ್ರದ ಪ್ರಾಧ್ಯಾಪಕನೊಬ್ಬ ಇಷ್ಟು ಕಠಿಣ ವ್ಯಾಪಾರೀಕರಣಕ್ಕೆ ಇಳಿಯಲಾರನೆಂಬುದು ಒಂದು ಸಮಾಧಾನದ ವಿಷಯ. ಏನೇ ಇರಲಿ, ಶಿಕ್ಷಕನ ಅವಿರತ ಘೋಷಣೆಯು 'ವಿದ್ಯಾರ್ಥಿಗಳಿಗೆ ಜಯವಾಗಲಿ' ಎನ್ನುವುದೇ ಆಗಿರಬೇಕು.

* * *

ವಿದೇಶದ ವಿಶ್ವವಿದ್ಯಾನಿಲಯಗಳು ಭಾರತದಲ್ಲಿ ತಮ್ಮ ಶಿಕ್ಷಣ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕೆಂದು ಸ್ಯಾಮ್ ಪಿಟ್ರೋಡಾನ ರಾಷ್ಟ್ರೀಯ ಜ್ಞಾನ ಆಯೋಗ ತಿಳಿಸಿತ್ತು. ವಿದೇಶಗಳಿಗೆ ಹೋಗದೆ ವಿದೇಶಿ ಶಿಕ್ಷಣದ ಸೌಭಾಗ್ಯ ನಮ್ಮ ಮಕ್ಕಳದ್ದಾಗುತ್ತದೆಂಬ ಪ್ರತೀತಿಯನ್ನು ಹರಡಿ ಈ ಯೋಜನೆಗೆ ಗೌರವ ತರಿಸಿಕೊಟ್ಟಿರುವ ಮಾಧ್ಯಮಗಳು ನಮ್ಮಲ್ಲಿವೆ. ಇದರ ಒಂದು ಚಿತ್ರ ಈಗ ಪಕ್ಕದ ಆಂಧ್ರಪ್ರದೇಶದಲ್ಲಿ ಕಾಣಸಿಗುತ್ತದೆ. ವಿಶೇಷ ಆರ್ಥಿಕ ವಲಯದ ಮುಸುಕಿನಲ್ಲಿ ಏನೆಲ್ಲಾ ಅವ್ಯವಹಾರಗಳು ನಡೆಯುತ್ತವೆಂದು ಈಗಾಗಲೆ ತಿಳಿದಿದೆ. ಅದರಲ್ಲೀಗ ವಿದೇಶಿ ವಿಶ್ವವಿದ್ಯಾನಿಲಯವೂ ಭಾಗಿಯಾಗಿದೆ. ಇವು ವಿದೇಶಿ ಎಂದರೆ ಕೇವಲ ಭೌಗೋಳಿಕವಾಗಿ ವಿದೇಶಿಯಲ್ಲ, ಭಾರತದ ಅಗತ್ಯಗಳಿಗೆ ಮತ್ತು ಸಂಸ್ಕೃತಿಗೆ ಹೊರತಾದುವು ಎಂಬರ್ಥದಲ್ಲೂ ಅವು ವಿದೇಶಿಗಳೇ. ಅಮೆರಿಕಾದಲ್ಲಿ ಜಾರ್ಜಿಯ ಎಂಬ ರಾಜ್ಯವಿದೆ. ಅಟ್ಲಾಂಟಾ ಅಲ್ಲಿಯ ಪ್ರಸಿದ್ಧ ನಗರ, ಅಲ್ಲೊಂದು 'ಜಾರ್ಜಿಯ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್' ಇದೆ. ಕ್ಯಾಲ್‌ಟೆಕ್‌ನಷ್ಟು ಪ್ರಸಿದ್ಧವಲ್ಲದ ಈ 'ಜಾರ್ಜ್‌ಟೆಕ್' ಒಂದು ವಿಶ್ವವಿದ್ಯಾನಿಲಯ. ವಿಶ್ವವಿದ್ಯಾನಿಲಯದ ವಿಸ್ತೃತ ವಿಭಾಗವಾಗಿ ಆಂಧ್ರಪ್ರದೇಶದಲ್ಲಿ ನೆಲೆಯೂರಲು ಅದು ೨೫೦ ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡಿದೆ. ಅಲ್ಲಿ ಒಂದು ಎಕರೆಗೆ ಮಾರುಕಟ್ಟೆ ಬೆಲೆ ಸುಮಾರು ಒಂದೂವರೆ ಕೋಟಿ ರೂಪಾಯಿಗಳು; ಆದರೆ ಜಾರ್ಜಿಯಾಟೆಕ್‌ಗೆ ಅದು ಒಂದೂವರೆ ಲಕ್ಷದ ಬೆಲೆಯಲ್ಲಿ ದೊರಕಿದೆ. ಸರ್ಕಾರದ ಮಧ್ಯಪ್ರವೇಶವು ಜಾರ್ಜಿಯಾ ಪರವಾಗಿ ಮತ್ತು ರೈತರ ಮತ್ತು ಸಾರ್ವಜನಿಕರ ವಿರೋಧವಾಗಿ ಕೆಲಸ ಮಾಡಿರುವುದು ಸ್ಪಷ್ಟ. ವಿಶ್ವವಿದ್ಯಾನಿಲಯದ ಸ್ಥಾಪನೆ ಮುಂದೆಂದೋ ಆಗುತ್ತದೆಂಬ ಆಶ್ವಾಸನೆ ನೀಡಲಾಗಿದೆ. ಆದರೆ ಮೊದಲು ಈಗ ಆ ಜಮೀನಿನಲ್ಲಿ ಭವ್ಯವಾದ ಸೆವೆನ್ ಸ್ಟಾರ್ ಹೋಟೆಲ್ ಆರಂಭವಾಗಲಿದೆ. ಅದಕ್ಕಾಗಿ ಕಟ್ಟಡದ ನಿರ್ಮಾಣಕಾರ್ಯ ಆರಂಭವಾಗಿದೆ. ಜ್ಞಾನಸೌಧಕ್ಕೆ ಮುಂಚೆ ಪ್ರವಾಸಿಗರ ಸೌಧ; ಆಮೇಲೆ ಒಂದು ಈಜುಕೊಳ, ಗಾಲ್ಫ್ ಕೋರ್ಸ್, ಕ್ಲಬ್, ಇತ್ಯಾದಿ. ಭಾರತದ ಅಭಿವೃದ್ಧಿಗೆ ಇದಕ್ಕಿಂತ ಬೇರಿನ್ನೇನು ಬೇಕು! ತಾಂತ್ರಿಕ ಶಿಕ್ಷಣ ನೀಡುವ ಹೆಸರಿನಲ್ಲಿ ಮೋಜಿನ ತಾಣ ತಲೆಯೆತ್ತುತ್ತದೆ. ವಿದೇಶಿ ವಿಶ್ವವಿದ್ಯಾನಿಲಯಗಳ ವ್ಯಾಮೋಹಕ್ಕೆ ನಾವು ತೆರುತ್ತಿರುವ ದುಬಾರಿ ಬೆಲೆ ಇದು.

## ಸಾರ್ವಜನಿಕ ಸಂಪತ್ತಿನ ಹರಾಜು

ದಿನೇ ದಿನೇ ಕಲ್ಯಾಣ ರಾಜ್ಯದ ಕಲ್ಪನೆ ಮಾಯವಾಗುತ್ತಿದೆ. ನಮ್ಮ ದೇಶದಲ್ಲಿ ಇಪ್ಪತ್ತು ರೂಪಾಯಿಯಲ್ಲಿ ಒಂದು ದಿನ ಕಳೆವ ಶೇಕಡ ೭೮ ಜನ ಇದ್ದಾರೆ ಎಂಬ ಅರ್ಜುನ್ ಸೇನ್‌ಗುಪ್ತ ವರದಿ ಒಂದು ಕಡೆ ಸಂಪತ್ತಿನ ಸಾಮಾಜೀಕರಣದ ಅವಶ್ಯಕತೆಯನ್ನು ಒತ್ತಿಹೇಳುತ್ತಿದ್ದರೆ, ನಮ್ಮ ಸರಕಾರಗಳು ಸಾರ್ವಜನಿಕ ಸಂಪತ್ತಿನ ಖಾಸಗೀಕರಣದತ್ತ ದಾಪುಗಾಲು ಹಾಕುತ್ತಿವೆ. ಹಿಂದೆ ಕೇಂದ್ರದಲ್ಲಿ ಬಿ.ಜೆ.ಪಿ. ನಾಯಕತ್ವದ ಎನ್.ಡಿ.ಎ. ಸರಕಾರ ಸಾರ್ವಜನಿಕ ಕೈಗಾರಿಕೆಗಳನ್ನು ಮುಚ್ಚಲು, ಖಾಸಗೀಕರಣಗೊಳಿಸಲು, ಬಂಡವಾಳ ಹಿಂತೆಗೆಯಲು ಉಸ್ತುವಾರಿಗಾಗಿ ಒಬ್ಬ ಸಚಿವನನ್ನೇ ನಿಯಮಿಸಿತ್ತು. ಅದೇ ಪಕ್ಷದ ಆಡಳಿತವಿರುವ ಕರ್ನಾಟಕ ಈಗ 'ಖಾಸಗಿ ಕಲ್ಯಾಣ' ಯೋಜನೆಯನ್ನು ತೀವ್ರವಾಗಿ ಜಾರಿಗೆ ತರುತ್ತಿದೆ. ದೇವಸ್ಥಾನಗಳನ್ನು ಮುಜರಾಯಿ ಇಲಾಖೆಯಿಂದ ಖಾಸಗಿ ಮಠಗಳಿಗೆ ವಹಿಸುವುದು, ಯಾತ್ರಾ ಸ್ಥಳಗಳನ್ನು ಖಾಸಗಿ ವಲಯಕ್ಕೆ ವಹಿಸುವುದು, ಪಶುಸಂಗೋಪನಾ ಇಲಾಖೆಯಿಂದ ಅಮೃತ್ ಮಹಲ್ ಕಾವಲ್‌ಅನ್ನು ಖಾಸಗೀಮಠಕ್ಕೆ ವಹಿಸುವುದು ಇವೆಲ್ಲ ರಾಜ್ಯದ ಬಿ.ಜೆ.ಪಿ. ಸರಕಾರದಲ್ಲಿ ನಡೆಯುತ್ತಿರುವ 'ಸಮಾಜ ಕಲ್ಯಾಣ' ಕಾರ್ಯಗಳು. ಇದೀಗ ಇವರ ಸಮಾಜ ಕಲ್ಯಾಣ ಕಾರ್ಯ ಸಾರ್ವಜನಿಕ ಭೂಮಿಗಳತ್ತ ಹರಿದಿದೆ.

ಬೆಂಗಳೂರು ನಗರ ಮತ್ತು ಸುತ್ತಮುತ್ತಲ ಪ್ರದೇಶದಲ್ಲಿ ಭೂಮಿಗೆ ಚಿನ್ನದ ಬೆಲೆ ಬಂದಿರುವುದು ಎಲ್ಲರಿಗೂ ತಿಳಿದ ವಿಚಾರ. ಈ ಕಾರಣಕ್ಕಾಗಿಯೇ ಭೂಕಬಳಿಕೆ ಮಿತಿಮೀರಿದೆ. ಹಿಂದಿನ ಸರಕಾರ ಎ.ಟಿ. ರಾಮಸ್ವಾಮಿ ಅವರ ನಾಯಕತ್ವದಲ್ಲಿ ಒಂದು ಸದನ ಸಮಿತಿ ರಚಿಸಿ ಭೂಕಬಳಿಕೆಯ ಅಧ್ಯಯನಕ್ಕೆ ತೊಡಗಿಸಿತು. ಬೆಂಗಳೂರು ನಗರ ಮತ್ತು ಸುತ್ತಲ ಪ್ರದೇಶಗಳನ್ನು ಅಧ್ಯಯನ ಮಾಡಿದ ಸಮಿತಿ ಬೆಚ್ಚಿಬೀಳುವ ಮಾಹಿತಿಗಳನ್ನು ಹೊರಗೆಡಹಿತು. ಸುಮಾರು ೫೦ ಸಾವಿರ ಎಕರೆಗಿಂತ ಹೆಚ್ಚಿನ ೨೫ರಿಂದ ೩೦ಸಾವಿರ ಕೋಟಿ ಮೌಲ್ಯದ ಸರ್ಕಾರಿ, ಸಾರ್ವಜನಿಕ ಭೂಮಿ ಒತ್ತುವರಿಯಾಗಿದ್ದು, ಈ ಅಕ್ರಮ ಭೂಕಬಳಿಕೆಯಲ್ಲಿ ರಾಜ್ಯದ ಕಾಂಗ್ರೆಸ್, ದಳ, ಬಿ.ಜೆ.ಪಿ. ಎಲ್ಲ ಪಕ್ಷಗಳ ವ್ಯಕ್ತಿಗಳು ಫಲಾನುಭವಿಗಳಾಗಿದ್ದರು. ಸಮಾಜದ ಪ್ರತಿಷ್ಠಿತ ವ್ಯಕ್ತಿಗಳೆಂದು ಕರೆಸಿಕೊಳ್ಳುವವರೂ ಭೂಗಳ್ಳರಾಗಿದ್ದರು. ರವಿಶಂಕರ ಗುರೂಜಿ, ಆದಿಚುಂಚನಗಿರಿ ಸ್ವಾಮಿ, ಬೇಲಿಮಠದ ಸ್ವಾಮಿ, ಇವರಲ್ಲದೇ ಖೋಡೆ, ಬೇಣಿಗಳಂಥ ಉದ್ಯಮಿಗಳು, ದೊಡ್ಡ ಬಿಲ್ಡರ್‌ಗಳು, ಒಬ್ಬ ಡಿ.ಜಿ.ಪಿ., ಎಲ್ಲಾ ಸಾರ್ವಜನಿಕ ಆಸ್ತಿಯನ್ನು ಕಬಳಿಸಿದ ಪಟ್ಟಿಯಲ್ಲಿದ್ದಾರೆಂದು ಮಾಹಿತಿಗಳು ಹೊರಬಂದವು. ಮತ್ತೆ ಚುನಾವಣೆ ಬಂದಿತು. ಸರಕಾರ ಬದಲಾಯಿತು. ಆದರೆ ರಾಮಸ್ವಾಮಿ ಸಮಿತಿ ವರದಿ ಧೂಳು ತಿನ್ನುತ್ತಿದೆ. ಆದರೆ 'ಪ್ರತಿಷ್ಠಿತ' ವ್ಯಕ್ತಿಗಳು ಲಪಟಾಯಿಸಿದ ಭೂಮಿ ಏನಾಯಿತು ಎನ್ನುವುದರ ಬಗ್ಗೆ ಮಾಹಿತಿ ಇಲ್ಲ. ಸರಕಾರ ಈಗ 'ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ' ಸ್ಥಾಪಿಸಲು ಹೊರಟಿದೆ. ಈ ನಿಗಮದ ಉದ್ದೇಶ, ಸಾರ್ವಜನಿಕ ಜಮೀನನ್ನು ಗುರ್ತಿಸಿ ಕಾಪಾಡಿಕೊಳ್ಳುವುದಲ್ಲ ಅಥವಾ ವಸತಿಹೀನರಿಗೆ, ಸ್ಲಂ ನಿವಾಸಿಗಳಿಗೆ ಹೋಗಲಿ ನಗರದಲ್ಲಿ ವಸತಿಗಾಗಿ ಪರಿತಪಿಸುತ್ತಿರುವ ಮಧ್ಯಮ ವರ್ಗದವರಿಗೆ ನಿವೇಶನ ಒದಗಿಸುವುದಲ್ಲ. ಇಂಥ ಸಾರ್ವಜನಿಕ ಜಮೀನನ್ನು ಪತ್ತೆಹಚ್ಚಿ ಅದನ್ನು ಹರಾಜಿನಲ್ಲಿ ಮಾರಾಟಮಾಡುವವು. ಬೆಂಗಳೂರು ನಗರದ ಜಿಲ್ಲಾಧಿಕಾರಿ ಈಗಾಗಲೇ ಇಂಥ ಪ್ರಕ್ರಿಯೆಯನ್ನು ಆರಂಭಿಸಿದ್ದಾರೆ. ಇದರಿಂದ ಸಾರ್ವಜನಿಕ ಸಂಪತ್ತಿನ ಖರೀದಿ ಯಾವ ಸಾರ್ವಜನಿಕರಿಗೂ, ಬಡವರಿಗೂ ಆಗದೆ ಹರಾಜಿನಲ್ಲಿ ಖರೀದಿಸುವ ತಾಕತ್ತಿದ್ದವರಿಗೆ ಮಾತ್ರ ಸಾಧ್ಯ. ಅಲ್ಲಿಗೆ 'ಪ್ರತಿಷ್ಠಿತರು' ಲೂಟಿ ಮಾಡಿ ಅಳಿದುಳಿದ ಸಾರ್ವಜನಿಕ ಜಮೀನನ್ನು ಹರಾಜಿನ ಮೂಲಕ ಧನವಂತರಿಗೇ ಅರ್ಪಿಸುವುದು ರಾಜ್ಯದ ಬಿ.ಜೆ.ಪಿ. ಸರಕಾರದ 'ಸಮಾಜ'ಕಲ್ಯಾಣ ಯೋಜನೆ. ರಾಜ್ಯ ಸರಕಾರ ಆರಂಭಿಸಿರುವ ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ರಾಜ್ಯಾದ್ಯಂತ ಈ ಹರಾಜು ಕಾರ್ಯಕ್ರಮ ಆರಂಭಿಸಲಿದೆ. ಅಲ್ಲಿಗೆ ರಾಜ್ಯದ ಸಾರ್ವಜನಿಕ ಜಮೀನು ಸಂಪೂರ್ಣ ಭೂಗಳ್ಳರ, ಧನವಂತರ ಪಾಲಾಗಿ ಸಾರ್ವಜನಿಕರಿಗೆ ನಿಲ್ಲಲು ನೆಲೆ ಇಲ್ಲದಂತಹ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಇಂಥ ಅಪಾಯಕಾರಿಯಾದ ಉದ್ದೇಶದ ನಿಗಮ ಸ್ಥಾಪಿಸುವುದರ ಮೂಲಕ ರಾಜ್ಯ ಸರಕಾರ, ಭಾರತೀಯ ಜನತಾ ಪಕ್ಷ ತಾನು ಯಾರ ಪರ ಎಂದು ಸಾಬೀತುಪಡಿಸಿದೆ. ಇದೇ ಪರಿಸ್ಥಿತಿ ಮುಂದುವರೆದರೆ ರಾಜ್ಯದಲ್ಲಿ ಗ್ರಾಮ ಗ್ರಾಮಗಳಲ್ಲಿನ ಸಾರ್ವಜನಿಕ ಜಮೀನು, ಸಾಮಾಜಿಕ ಅರಣ್ಯ (ರಾಜ್ಯ ಸರಕಾರದ ವ್ಯಾಪ್ತಿಗೆ ಸೇರಿದ್ದು) ಕೆಲವೇ ದಿನಗಳಲ್ಲಿ ಧನವಂತರ, ದೊಡ್ಡ ದೊಡ್ಡ ಕಂಪನಿಗಳ ಪಾಲಾಗಿ ಸಾಮಾಜಿಕ ಕ್ಷೋಭೆ ಉಂಟಾಗುತ್ತದೆ. ಈಗಾಗಲೇ ಸಿಪಿಐ, ಸಿಪಿಎಂ, ದಲಿತ, ರೈತ ಸಂಘಟನೆಗಳು ಈ ಸಾರ್ವಜನಿಕ ಜಮೀನಿನ ಹರಾಜು ಕ್ರಮದ ವಿರುದ್ಧ ಹೋರಾಡುತ್ತಿವೆ. ಆದರೆ ಭೂಗಳ್ಳರು, ನೆಲಗಳ್ಳರು ಬಹು ಸಂಖ್ಯೆಯಲ್ಲಿರುವ ರಾಜ್ಯದ ವಿಧಾನಸೌಧ ಇಂಥ ಹೋರಾಟಗಳಿಗೆ ಮಣಿಯಲಾರದು. ರಾಜ್ಯದ ಭೂಹೀನ, ವಸತಿ ರಹಿತ ಜನ ಇದು ತಮ್ಮ ಕರ್ತವ್ಯವೆಂಬಂತೆ ಬೀದಿಗಿಳಿದು ಹೋರಾಡಬೇಕಿದೆ. 'ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ' ರದ್ದಾಗಬೇಕು ಅಥವಾ ಅದು ಸಾರ್ವಜನಿಕ ಜಮೀನುಗಳ ರಕ್ಷಣಾ ನಿಗಮವಾಗಿ ಪರಿವರ್ತನೆ ಆಗಬೇಕು. ಇದು ಸಾರ್ವಜನಿಕರ ಸಂಪತ್ತು; ಸಾರ್ವಜನಿಕರೇ ಕಾಳಜಿ ವಹಿಸಬೇಕು.

**ಡಾ|| ಸಿದ್ದನಗೌಡ ಪಾಟೀಲ**
ಘಾಟೆ ಭವನ, ವಯ್ಯಾಲಿಕಾವಲ್, ಮಲ್ಲೇಶ್ವರಂ, ಬೆಂಗಳೂರು -೫೬೦ ೦೦೩

# ಅಸಂಘಟಿತ ಕಾರ್ಮಿಕರ ಹಿತರಕ್ಷಣೆಗೆ ಅಗತ್ಯವಿರುವ ಕ್ರಮಗಳು

## ಅರ್ಜುನ್ ಸೇನ್‌ಗುಪ್ತ ವರದಿ



ಅಸಂಘಟಿತ ವಲಯದ ಕೂಲಿಕಾರರ ದುಡಿಮೆಗೆ ಸಂಬಂಧಿಸಿದಂತೆ ಕೆಲವು ನಿರ್ದಿಷ್ಟ ಹಾಗೂ ನ್ಯಾಯಸಮ್ಮತವಾದ ನಿಯಮಗಳನ್ನು ಕಡ್ಡಾಯವಾಗಿ ಜಾರಿಗೆ ತರುವ ಅವಶ್ಯಕತೆಯಿದೆ. ಕಾರ್ಮಿಕರ ಸಮಸ್ಯೆಗಳ ಕುರಿತು ಅಧ್ಯಯನ ಮಾಡಲು ಎರಡನೇ ರಾಷ್ಟ್ರೀಯ ಆಯೋಗವು ರಚನೆಗೊಂಡ ನಂತರದ ಅವಧಿಯಲ್ಲಿ ಅಸಂಘಟಿತ ಕಾರ್ಮಿಕರ ದುಡಿಮೆ ಮತ್ತು ಸಾಮಾಜಿಕ ಭದ್ರತೆಗಳಿಗೆ ಸಂಬಂಧಿಸಿದಂತೆ ಸುಧಾರಣೆಗಳನ್ನು ತರಲು ಸಮಗ್ರ ಶಾಸನವೊಂದನ್ನು ರೂಪಿಸಬೇಕೆಂಬ ಒಮ್ಮತದ ಅಭಿಪ್ರಾಯ ಮೂಡಿಬರುತ್ತಿದೆ. ಈಗಾಗಲೇ ತ್ರಿಪಕ್ಷೀಯ ಸಮಾಲೋಚನ ಸಮಿತಿಯು ಕೃಷಿ ಕಾರ್ಮಿಕರು ಮತ್ತು ಕೃಷಿಯೇತರ ಕಾರ್ಮಿಕರಿಗೆ ಎರಡು ಪ್ರತ್ಯೇಕ ಮಸೂದೆಗಳನ್ನು ಮಂಡಿಸಬೇಕೆಂದು ಅಭಿಪ್ರಾಯಪಟ್ಟಿದೆ. ಯುಪಿಎ ಸರ್ಕಾರವು ಘೋಷಿಸಿರುವ ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ಸಹ ಕೃಷಿ ಕಾರ್ಮಿಕರಿಗಾಗಿ ಸಮಗ್ರ ಶಾಸನವೊಂದನ್ನು ರೂಪಿಸಬೇಕೆಂದು ಉದ್ದೇಶಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕೃಷಿ ಕಾರ್ಮಿಕರು ಮತ್ತು ಅಸಂಘಟಿತ ಕೃಷಿಯೇತರ ಕಾರ್ಮಿಕರ ಹಿತರಕ್ಷಣೆಗಾಗಿ ಎರಡು ಸಮಗ್ರ ಮಸೂದೆಗಳನ್ನು ಮಂಡಿಸಬೇಕೆಂದು ರಾಷ್ಟ್ರೀಯ ಆಯೋಗವು ಶಿಫಾರಸ್ಸು ಮಾಡಿದೆ.

ಕೃಷಿ ಕಾರ್ಮಿಕರು ಮತ್ತು ಕೃಷಿಯೇತರರ ಕಾರ್ಮಿಕರಿಗಾಗಿ ರೂಪಿಸಬೇಕೆಂದಿರುವ ಈ ಸಮಗ್ರ ಮಸೂದೆಗಳಲ್ಲಿರಬೇಕೆಂದು ಸೂಚಿಸಲಾಗಿರುವ ನಿಯಮಗಳು/ಷರತ್ತುಗಳು: ೧. ವಾರದ ೭ ದಿನಗಳಲ್ಲಿ ೬ ದಿನಗಳಲ್ಲಿ ೮ ಗಂಟೆ ಕೆಲಸ. ನಡುವೆ ಅರ್ಧಗಂಟೆ ವಿರಾಮ. ೨. ವೇತನದ ಸಮೇತ ೧ ದಿನದ ರಜೆ/ವಿರಾಮ. ರಾಷ್ಟ್ರೀಯ ಕನಿಷ್ಠ ವೇತನ, ದಿನನಿತ್ಯದ ದುಡಿಮೆಗೆ ಸಂಬಂಧಪಟ್ಟಂತೆ ನೀಡಲಾಗುವ ಗಂಟೆವಾರು ವೇತನ ಮತ್ತು ಸಣ್ಣಪುಟ್ಟ ಕೆಲಸಗಳಿಗೆ ನೀಡುವ ವೇತನದ ದರ ಒಂದೇ ಸಮಾನಾಗಿರಬೇಕು. ೩. ಪುರುಷರ ಮತ್ತು ಮಹಿಳೆಯರ ಉದ್ಯೋಗಗಳ ಮೌಲ್ಯಮಾಪನದಲ್ಲಿ ಯಾವುದೇ ತಾರತಮ್ಯ ಇರಬಾರದು. ೪. ನಿಗದಿತ



ಯುಪಿಎ ಸರ್ಕಾರದ ಆದೇಶದ ಮೇರೆಗೆ ಡಾ|| ಅರ್ಜುನ್ ಸೇನ್‌ಗುಪ್ತ ಆಯೋಗವು ಅಸಂಘಟಿತ ಕಾರ್ಮಿಕರ ಸಮಸ್ಯೆಗಳನ್ನು ಅಧ್ಯಯನ ಮಾಡಿ ಆ ಸಮುದಾಯದ ಕ್ಷೇಮಾಭಿವೃದ್ಧಿಗಾಗಿ ಸಮಗ್ರ ವರದಿಯೊಂದನ್ನು ಮಂಡಿಸುವುದರ ಮೂಲಕ ಹಲವಾರು ಸಲಹೆಗಳನ್ನು ನೀಡಿದೆ. ಈ ವರದಿಯ ಆಯ್ದ ಭಾಗಗಳನ್ನು 'ಹೊಸತು'ವಿನ ಏಪ್ರಿಲ್ ೨೦೦೮ರ ಸಂಚಿಕೆಯಿಂದ ಮೊದಲ್ಗೊಂಡು ಪ್ರತಿ ತಿಂಗಳೂ ಪ್ರಕಟಿಸಲಾಗುತ್ತಿದೆ. ಈ ಸಂಚಿಕೆಯಲ್ಲಿ 'ಅಸಂಘಟಿತ ಕಾರ್ಮಿಕರ ಹಿತರಕ್ಷಣೆಗೆ ಅಗತ್ಯವಿರುವ ಕ್ರಮಗಳ'ನ್ನು ಸರ್ಕಾರವು ಜಾರಿಗೆ ತರಬೇಕೆಂದು ಆಯೋಗವು ಸಲಹೆ ನೀಡಿದೆ. ಆಯ್ದ ಭಾಗಗಳ ಪ್ರಕಟಣೆ ಇದರೊಂದಿಗೆ ಮುಕ್ತಾಯವಾಗಿದೆ.

ತಾರೀಖಿಗೆ ವೇತನ ನೀಡದಿದ್ದರೆ ಉದ್ಯಮಿಗಳಿಗೆ ದಂಡ ವಿಧಿಸಬೇಕಲ್ಲದೆ, ತಡವಾಗಿ ನೀಡುವ ವೇತನದ ಜೊತೆಗೆ ಬಡ್ಡಿಯನ್ನೂ ಸೇರಿಸಬೇಕು. ೫. ವೇತನದಲ್ಲಿ ಯಾವುದೇ ದಂಡ ಅಥವಾ ಜುಲ್ಮಾನೆಯ ಸ್ವರೂಪದ ಕಡಿತವೂ ಇರಬಾರದು. ೬. ಲಿಂಗ, ಜಾತಿ ಅಥವಾ ಕೋಮಿನ ಆಧಾರದ ಮೇಲೆ ಯಾವ ತಾರತಮ್ಯಕ್ಕೂ ಅವಕಾಶವಿರಬಾರದು. ೭. ಏಡ್ಸ್ ರೋಗ, ಲಿಂಗಾಧಾರಿತ ಕಿರುಕುಳಗಳ ವಿರುದ್ಧ ರಕ್ಷಣೆ ಒದಗಿಸಬೇಕು, ಮತ್ತು ೮. ಕೆಲಸದ ವೇಳೆಯಲ್ಲಿ ಅಪಘಾತಗಳು ಸಂಭವಿಸಿದರೆ ಸೂಕ್ತ ಪರಿಹಾರ ಒದಗಿಸಬೇಕು.

ಈ ಎಲ್ಲ ನಿಯಮಗಳನ್ನು ಕಾರ್ಯರೂಪಕ್ಕೆ ತರುವ ನಿಟ್ಟಿನಲ್ಲಿ ಯಾವ ಲೋಪದೋಷಗಳೂ ಇಲ್ಲದಂತೆ ಖಾತ್ರಿಪಡಿಸಿಕೊಳ್ಳಲು ತ್ರಿಪಕ್ಷೀಯ ಸಮಿತಿಯೊಂದನ್ನು ನೇಮಕಮಾಡಬೇಕೆಂದು ಆಯೋಗವು ಒತ್ತಿಹೇಳಿದೆ.

**ಕನಿಷ್ಠ ಮಟ್ಟದ ಸಾಮಾಜಿಕ ಭದ್ರತೆ:** ಕೃಷಿ ಮತ್ತು ಕೃಷಿಯೇತರ ವಲಯಗಳಲ್ಲಿ ದುಡಿಯುವ ಅಸಂಘಟಿತ ಕಾರ್ಮಿಕರ ಜೀವನ, ಆರೋಗ್ಯ ಮತ್ತು ಅಂಗವಿಕಲತೆ, ಹೆರಿಗೆ ಹಾಗೂ ವೃದ್ಧಾಪ್ಯಗಳಿಗೆ ಸಂಬಂಧಪಟ್ಟಂತೆ ರಾಷ್ಟ್ರೀಯ ಮಟ್ಟದಲ್ಲಿ ಕನಿಷ್ಠ ಸಾಮಾಜಿಕ ಭದ್ರತೆ ಒದಗಿಸಲು ಯೋಜನೆಯೊಂದನ್ನು ರೂಪಿಸಬೇಕೆಂದು ಆಯೋಗವು ಮೇ ೨೦೦೬ರಷ್ಟು ಹಿಂದೆಯೇ ಸೂಚಿಸಿದೆ. ಈ ಯೋಜನೆ ಹಾಗೂ ಅದನ್ನು ಜಾರಿಗೆ ತರಲು ಮಂಡಿಸಲಾದ ಮಸೂದೆಗಳಲ್ಲಿ ಅಸಂಘಟಿತ ಕಾರ್ಮಿಕರಿಗೆ ನೀಡಲೇಬೇಕಾದ ಹಕ್ಕುಬಾಧ್ಯತೆಗಳನ್ನು ಸ್ಪಷ್ಟಪಡಿಸಲಾಗಿದೆ. ಕೃಷಿ ಮತ್ತು ಕೃಷಿಯೇತರ ಕಾರ್ಮಿಕರ ಹಿತರಕ್ಷಣೆಗಾಗಿ ಪ್ರತ್ಯೇಕ ಮಸೂದೆಗಳನ್ನು ಮಂಡಿಸಬೇಕೆಂದು ಆಯೋಗವು ಸೂಚಿಸಿರುವ ಹಿನ್ನೆಲೆಯಲ್ಲಿ ಮೇಲ್ಕಾಣಿಸಿದ ಎಲ್ಲ ಅಂಶಗಳನ್ನೂ ವರದಿಯಲ್ಲಿ ಅಳವಡಿಸಿಕೊಳ್ಳಲಾಗಿದೆ.

ರಾಷ್ಟ್ರೀಯ ಆಯೋಗವು ಮಾಡಿರುವ ಶಿಫಾರಸ್ಸುಗಳಲ್ಲಿ ಈ ಕೆಳಕಾಣಿಸಿದ ಸೌಲಭ್ಯಗಳನ್ನು ಅಸಂಘಟಿತ ಕಾರ್ಮಿಕರಿಗೆ ನೀಡಬೇಕೆಂದು ಸೂಚಿಸಲಾಗಿದೆ.

(i) ಜೀವವಿಮೆ: ಸಹಜ ಮರಣ ಸಂಭವಿಸಿದಲ್ಲಿ ೩೦,೦೦೦ ರೂ.ಗಳು. ಆಕಸ್ಮಾತ್ತಾಗಿ ಸಾವಿಗೀಡಾದರೆ ಅಥವಾ ಸಂಪೂರ್ಣವಾಗಿ ಅಂಗವಿಕಲರಾದರೆ ೭೫,೦೦೦ ರೂ.ಗಳು.

(ii) ಆರೋಗ್ಯ ವಿಮೆ: ಆಸ್ಪತ್ರೆಗೆ ದಾಖಲಾದರೆ ಪ್ರತಿಯೊಬ್ಬ ಕಾರ್ಮಿಕನಿಗೆ ಮತ್ತು ಅವನ ಕುಟುಂಬಕ್ಕೆ ವರ್ಷವೊಂದಕ್ಕೆ ತಲಾ ೧೫,೦೦೦ ರೂ.ಗಳವರೆಗೆ ಚಿಕಿತ್ಸೆ ಶುಲ್ಕ ನೀಡಬೇಕು. ಈ ದಿಶೆಯಲ್ಲಿ ಕೆಲವು ನಿರ್ದಿಷ್ಟ ಆಸ್ಪತ್ರೆಗಳನ್ನು ಗೊತ್ತುಮಾಡಬೇಕು. ಈ ಯೋಜನೆಯಡಿ ಆಸ್ಪತ್ರೆಗೆ ಹೋಗಿಬರುವ ಖರ್ಚನ್ನೂ ನೀಡಬೇಕು.

(iii) ವೃದ್ಧಾಪ್ಯ ಭದ್ರತೆ: ಬಡತನ ರೇಖೆಗಿಂತ ಕೆಳಗಿರುವ ಎಲ್ಲ ಕಾರ್ಮಿಕರಿಗೂ (ವಯಸ್ಸು ೬೦ವರ್ಷ) ಪ್ರತಿ ತಿಂಗಳಿಗೆ ೨೦೦ ರೂ. ಪಿಂಚಣಿ ನೀಡಬೇಕು. ಬಡತನ ರೇಖೆಗಿಂತ ಕೆಳಗಿರುವವರನ್ನು ಹೊರತುಪಡಿಸಿದಂತೆ ಇತರ ಎಲ್ಲಾ ಕಾರ್ಮಿಕರೂ ಭವಿಷ್ಯನಿಧಿಗೆ ಅರ್ಹರಾಗಿರುತ್ತಾರೆ. ಭವಿಷ್ಯನಿಧಿ ಯೋಜನೆಯಲ್ಲಿ ಸೂಚಿಸಿರುವಂತೆ ನಿರುದ್ಯೋಗ ವಿಮೆಯನ್ನೂ ನೀಡಲಾಗುತ್ತದೆ; ಎಂದರೆ, ಕಾರ್ಮಿಕರು ತಮಗೆ ಸಿಗುವ ೬ ತಿಂಗಳ ಅವಧಿಯ ನಿರುದ್ಯೋಗ ಭತ್ಯೆಯ ಶೇ. ೫೦ರಷ್ಟು ಮೊತ್ತವನ್ನು ಮುಂಗಡವಾಗಿಯೇ ತೆಗೆದುಕೊಳ್ಳಬಹುದಾಗಿದೆ.

೫ ವರ್ಷಗಳ ಅವಧಿಯಲ್ಲಿ ಕಾರ್ಯಗತಗೊಳಿಸಲಾಗುವ ಈ ರಾಷ್ಟ್ರೀಯ ಸಾಮಾಜಿಕ ಭದ್ರತಾ ಯೋಜನೆಯನ್ನು ಖಾತ್ರಿಯಾಗಿ ಅಸಂಘಟಿತ ಕಾರ್ಮಿಕರಿಗೆ ತಲುಪಿಸಬೇಕಾದ ಜವಾಬ್ದಾರಿಯನ್ನು ರಾಜ್ಯಮಟ್ಟದಲ್ಲಿ ಕೆಳ ಹಂತದಲ್ಲಿರುವ ಸಂಸ್ಥೆಗಳು ಹೊರಬೇಕಾಗುತ್ತದೆ. ಈ ಎಲ್ಲ ಕಾರ್ಯಕಲಾಪಗಳ ಉಸ್ತುವಾರಿಯನ್ನು ಕೇಂದ್ರ ಸಂಘಟನೆಯೊಂದು ವಹಿಸಿಕೊಳ್ಳಲಿದೆ. ಈ ಯೋಜನೆಯಡಿ ಪ್ರತಿವರ್ಷವೂ ಪ್ರತಿಯೊಬ್ಬ ಅಸಂಘಟಿತ ಕಾರ್ಮಿಕನ ಭದ್ರತೆಗೆ ೧೧೯೫ ರೂ.ಗಳನ್ನು ಖರ್ಚುಮಾಡಲಾಗುತ್ತದೆ; ಎಂದರೆ ೩೦ ಕೋಟಿ ಕೃಷಿ ಮತ್ತು ಕೃಷಿಯೇತರ ಕಾರ್ಮಿಕರಿಗೂ ಜೀವನ ಭದ್ರತೆಗೆ ತಗಲುವ ಖರ್ಚು ಸುಮಾರು ೩೩,೯೫೦ ಕೋಟಿ ರೂ.ಗಳು (೨೦೦೬- ೨೦೦೭ರ ದರದಲ್ಲಿ). ಈ ಇಡೀ ಯೋಜನೆಯ ಆರ್ಥಿಕ ಹೊರೆಯನ್ನು ರಾಷ್ಟ್ರೀಯ ಸಾಮಾಜಿಕ ಭದ್ರತೆ ಮತ್ತು ಯೋಗಕ್ಷೇಮ ನಿಧಿ ಎಂಬ ಸಂಸ್ಥೆ ಭರಿಸಲಿದೆ ಮತ್ತು ಈ ನಿಟ್ಟಿನಲ್ಲಿ ಅಗತ್ಯವಿರುವ

ಹಣವನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳೂ ಸೇರಿದಂತೆ ವಿವಿಧ ಸಂಘಸಂಸ್ಥೆಗಳು ಒದಗಿಸಲಿವೆ.

**ಅಂಚಿನಲ್ಲಿರುವ ಮತ್ತು ಸಣ್ಣಪುಟ್ಟ ರೈತರಿಗಾಗಿ ತೆಗೆದುಕೊಳ್ಳಲಾಗುವ ರಕ್ಷಣಾ ಕ್ರಮಗಳ ಸಮಗ್ರ ಯೋಜನೆ :** ಆಯೋಗವು ಕೃಷಿಕೂಲಿಕಾರರೂ ಸೇರಿದಂತೆ ಅಂಚಿನಲ್ಲಿರುವ ಮತ್ತು ಸಣ್ಣಪುಟ್ಟ ರೈತರ ಸ್ಥಿತಿಗತಿಗಳನ್ನು ಗಣನೆಗೆ ತೆಗೆದುಕೊಂಡು ತನ್ನ ವರದಿಯನ್ನು ಸಿದ್ಧಗೊಳಿಸಿದೆ. ಈ ವರದಿಯಲ್ಲಿ ತಿಳಿಸಿರುವಂತೆ ಶೇ. ೮೪ರಷ್ಟು ರೈತ ಕುಟುಂಬಗಳು ೨ ಹೆಕ್ಟೇರ್‌ಗಿಂತ ಕಡಿಮೆ ಹಿಡುವಳಿ ಭೂಮಿಯನ್ನು ಹೊಂದಿದ್ದು ಶೇ.೪೩ರಷ್ಟು ಭೂಮಿಯಲ್ಲಿ ಸಾಗುವಳಿ ಮಾಡುತ್ತಾರೆ. ರೈತರ ಸ್ಥಿತಿಗತಿಗಳ ಕುರಿತ ಸಮೀಕ್ಷೆಯ (೨೦೦೩) ಪ್ರಕಾರ ಬಹುತೇಕ ರಾಜ್ಯಗಳಲ್ಲಿ ಸಣ್ಣ ಹಿಡುವಳಿದಾರರು ಮಧ್ಯಮ ಮತ್ತು ದೊಡ್ಡ ಹಿಡುವಳಿದಾರರಿಗೆ ಸರಿಸಮಾನರಾಗಿ ಉತ್ಪಾದಿಸುತ್ತಾರೆ. ಇಷ್ಟಾದರೂ ಬೇಸಾಯದಿಂದ ಈ ಜನವಿಭಾಗದವರು ಗಳಿಸುವ ವರಮಾನ ಕಡಿಮೆಯೇ. ಮಾರುಕಟ್ಟೆ ವ್ಯವಸ್ಥೆಯ ಇತಿಮಿತಿಗಳು, ಸಾಲಸೌಲಭ್ಯಗಳ ಮತ್ತು ರಸಗೊಬ್ಬರಗಳ ಕೊರತೆ ಹಾಗೂ ಹೊಸ ತಂತ್ರಜ್ಞಾನದಿಂದ ಒದಗಿಬರುವ ಅನಕೂಲತೆಗಳಿಂದ ಅಂಚಿನಲ್ಲಿರುವ ಮತ್ತು ಸಣ್ಣ ರೈತರು ವಂಚಿತರಾಗಿದ್ದಾರೆ.

ರಾಷ್ಟ್ರೀಯ ರೈತರ ಆಯೋಗವು ರೈತ ಸಮುದಾಯದ ಹಲವಾರು ಸಮಸ್ಯೆಗಳ ಬಗೆಗೆ ಬೆಳಕು ಚೆಲ್ಲಿದೆ. ೧೧ನೇ ಪಂಚವಾರ್ಷಿಕ ಯೋಜನೆಯ ಭಾಗವಾಗಿ ಯೋಜನಾ ಆಯೋಗವು ಈ ಬಗೆಯ ವಿವಿಧ ಸಮಸ್ಯೆಗಳ ಕುರಿತು ನೀಡಿರುವ ವರದಿಯನ್ನೂ ವಿಮರ್ಶಿಸಿರುವುದಲ್ಲದೆ, ವಿಶೇಷವಾಗಿ ಅಂಚಿನಲ್ಲಿರುವ ಮತ್ತು ಸಣ್ಣ ರೈತರು ಎದುರಿಸುತ್ತಿರುವ ಸಮಸ್ಯೆಗಳ ನಿವಾರಣೆಗಾಗಿ ಕೆಲವು ನಿರ್ದಿಷ್ಟ ಸಲಹೆಗಳನ್ನು ನೀಡಿದೆ.

**ಅಂಚಿನಲ್ಲಿರುವ ಮತ್ತು ಸಣ್ಣ ರೈತರಿಗಾಗಿ ಪ್ರತ್ಯೇಕ ಯೋಜನೆ :** ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗವು ಅಂಚಿನಲ್ಲಿರುವ ಮತ್ತು ಸಣ್ಣ ರೈತರು ಎದುರಿಸುತ್ತಿರುವ ಸಮಸ್ಯೆಗಳ ಕುರಿತು ವಿಶೇಷವಾಗಿ ಚರ್ಚಿಸಿದೆ. ವ್ಯಾಪಕವಾದ ಸಾರ್ವಜನಿಕ ಬಂಡವಾಳ ಹೂಡಿಕೆ ಮತ್ತು ವಿವಿಧ ಸಂಘಸಂಸ್ಥೆಗಳು ಕೃಷಿ ಕ್ಷೇತ್ರದಲ್ಲಿ ತೊಡಗಿಕೊಳ್ಳುವಂತಹ ಕ್ರಮಗಳೇ ಅಲ್ಲದೆ ಸಾಲ ಸೌಲಭ್ಯಗಳು, ರಸಗೊಬ್ಬರಗಳ ಸರಬರಾಜು, ಆಧುನಿಕ ತಂತ್ರಜ್ಞಾನ ಮುಂತಾದವು ಸುಲಭವಾಗಿ ಲಭ್ಯವಾಗುವ ದಿಶೆಯಲ್ಲಿ ಸರ್ಕಾರದಿಂದ ಸೂಕ್ತ ಉಪಕ್ರಮಗಳನ್ನು ತೆಗೆದು ಕೊಳ್ಳಲಾಯಿತು. ಅಂತೆಯೇ ಅಂಚಿನಲ್ಲಿರುವ ರೈತರು ಮತ್ತು ಕೃಷಿ ಕೂಲಿಕಾರರಿಗಾಗಿ ಯೋಜನೆ, ಸಣ್ಣ ರೈತರ ಅಭಿವೃದ್ಧಿ ಸಂಸ್ಥೆ ಮತ್ತು 'ಮಿಲಿಯನ್ ಬಾವಿ' ಯೋಜನೆ ಎಂಬ ಮೂರು ಪರಿಣಾಮಕಾರಿ ಯೋಜನೆಗಳನ್ನು ರೈತ ಸಮುದಾಯದ ಕ್ಷೇಮಾಭಿವೃದ್ಧಿಗಾಗಿ ಜಾರಿಗೆ ತರಲಾಗಿದ್ದು, ಅವುಗಳಿಂದಾಗಿ ಕೃಷಿ ಉತ್ಪಾದನೆಯಲ್ಲಿ ಹೆಚ್ಚಳ ಕಂಡು ಬಂದಿತಲ್ಲದೆ ರೈತರ ವರಮಾನವೂ ಹೆಚ್ಚಿತು. ನಂತರದ ದಿನಗಳಲ್ಲಿ ಈ ಯೋಜನೆಗಳನ್ನು ಹಿಂತೆಗೆದು ಕೊಳ್ಳಲಾಯಿತು. ಇಲ್ಲವೇ ಇತರ ವಲಯಕೇಂದ್ರಿತ ಕಾರ್ಯಕ್ರಮಗಳೊಂದಿಗೆ ವಿಲೀನಗೊಳಿಸಲಾಯಿತು.

ಈ ಹಿನ್ನೆಲೆಯಲ್ಲಿ ೧೧ನೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಸರ್ಕಾರವು ಅಂಚಿನಲ್ಲಿರುವ




ಮತ್ತು ಸಣ್ಣ ರೈತರ ಅಗತ್ಯಗಳನ್ನು ಪೂರೈಸುವ ನಿರ್ದಿಷ್ಟ ಗುರಿಯನ್ನು ಹೊಂದಿರುವ ಕಾರ್ಯಕ್ರಮವೊಂದನ್ನು ಮತ್ತೆ ಜಾರಿಗೆ ತರಬೇಕೆಂದು ಆಯೋಗವು ಶಿಫಾರಸ್ಸು ಮಾಡಿದೆ. ಇಂತಹ ಕಾರ್ಯಕ್ರಮವು ಮೊದಲು ಫಸಲು ಕಡಿಮೆ ಇರುವ ಪ್ರದೇಶಗಳಿಂದ ಪ್ರಾರಂಭವಾಗಬೇಕಿದೆ ಮತ್ತು ಇದನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ಸಲುವಾಗಿ ವಿಶೇಷ ಸಂಸ್ಥೆಯೊಂದನ್ನು ಸ್ಥಾಪಿಸುವ ಅಗತ್ಯವಿದೆಯೆಂದು ಅಭಿಪ್ರಾಯಪಟ್ಟಿದೆ. ಕೆಲವು ನಿರ್ದಿಷ್ಟ ಬೇಸಾಯ ಯೋಜನೆಗಳು, ಆಹಾರಧಾನ್ಯ ಸಂಗ್ರಹಣೆ, ರಸಗೊಬ್ಬರಗಳ ಸರಬರಾಜು ಮತ್ತು ಬೆಳೆಗಾರರ ಸ್ವಸಹಾಯ ಗುಂಪುಗಳ ರಚನೆ, ಸೂಕ್ತವಾದ ಮಾರುಕಟ್ಟೆ ವ್ಯವಸ್ಥೆ, ರೈತರ ಅಗತ್ಯತೆಗಳಿಗೆ ತಕ್ಕಂತೆ ತಂತ್ರಜ್ಞಾನ ಬಳಸುವಲ್ಲಿ ತರಬೇತಿ ಮುಂತಾದ ರೈತಸ್ನೇಹಿ ಕ್ರಮಗಳಿಗೆ ಸರ್ಕಾರವು ಆದ್ಯತೆ ನೀಡಬೇಕಿದೆ.

**ಭೂಮಿ ಮತ್ತು ನೀರು – ಇವುಗಳ ಸಮರ್ಥ ಬಳಕೆ : ಗ್ರಾಮೀಣ ಮತ್ತು ನೀರು:** ಜನವಿಭಾಗಗಳ ದಿನನಿತ್ಯದ ಬದುಕಿನಲ್ಲಿ ಭೂಮಿ ಮತ್ತು ನೀರು, ಎರಡೂ ಅತ್ಯಂತ ಅಗತ್ಯ. ಇವುಗಳ ಬಳಕೆಯಲ್ಲಿ ಕಾಣಬರುವ ಸಮಸ್ಯೆಗಳು ಆಯಾ ಪ್ರದೇಶಗಳಿಗೆ ಸಂಬಂಧಪಟ್ಟಂತೆ ವಿವಿಧ ಸ್ವರೂಪಗಳಲ್ಲಿರುತ್ತವೆ. ಈ ಸಮಸ್ಯೆಗಳು ದೊಡ್ಡ ಅಥವಾ ಅನುಕೂಲಸ್ಥ ರೈತರಿಗಿಂತಲೂ ಅಂಚಿನಲ್ಲಿರುವ ಮತ್ತು ಸಣ್ಣ ರೈತರನ್ನು ಕಾಡುವುದೇ ಹೆಚ್ಚು. ಎಂದೇ ಭೂಮಿ ಮತ್ತು ನೀರು, ಇವೆರಡನ್ನೂ ಸಮರ್ಥವಾಗಿ ಬಳಸುವ ದಿಶೆಯಲ್ಲಿ ಸೂಕ್ತ ವಿಧಾನಗಳನ್ನು ರೂಪಿಸಿ ರೈತರಿಗೆ ತರಬೇತಿ ನೀಡಬೇಕು.

ಹೆಚ್ಚಿನ ಪ್ರಮಾಣದಲ್ಲಿ ಮಳೆ ಬೀಳುವ ಪ್ರದೇಶಗಳಲ್ಲಿ ಮಳೆನೀರಿನ ಶೇಖರಣೆಗಾಗಿ ವಿಶೇಷವಾದ ಯೋಜನೆಗಳನ್ನು ರೂಪಿಸಬೇಕು. ಇದರಿಂದಾಗಿ ಕೃಷಿಗೆ ತಗಲುವ ಒಟ್ಟಾರೆಯ ಖರ್ಚಿನಲ್ಲಿ ಸಾಕಷ್ಟು ಹಣ ಮಿಗುತಾಯ ವಾಗಲಿದೆ. ಈಗಾಗಲೇ ಇಂತಹ ಯೋಜನೆಗಳನ್ನು ೪,೫೦,೦೦,೦೦೦ ಹೆಕ್ಟೇರಿನಷ್ಟು ಭೂಮಿಯಲ್ಲಿ ಜಾರಿಗೆ ತರಲಾಗಿದೆ. ಇನ್ನೂ ೭,೫೦,೦೦,೦೦೦ ಹೆಕ್ಟೇರು ಭೂಮಿ ಬಾಕಿ ಉಳಿದಿದೆ. ಇಲ್ಲಿಯೂ ನೀರು ಸಂಗ್ರಹಣೆ ಯೋಜನೆಗಳನ್ನು ಕೂಡಲೆ ವ್ಯಾಪಕವಾಗಿ ಜಾರಿಗೆ ತರುವುದರಿಂದಾಗಿ ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗಾವಕಾಶಗಳು ಹೆಚ್ಚಲಿವೆ. ಈ ಎಲ್ಲ ಚಟುವಟಿಕೆಗಳನ್ನು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ ಕಾರ್ಯಕ್ರಮ ಮತ್ತು ಎಸ್.ಜಿ. ಆಯೋಜನೆಗಳಂತಹ ಮತ್ತು ಯೋಜನೆಗಳ ಭಾಗವಾಗಿ ಜರುಗಿಸಬಹುದಾಗಿದೆ. ಪಂಚಾಯಿತಿಗಳೂ ಈ ದಿಶೆಯಲ್ಲಿ ಪ್ರಮುಖ ಪಾತ್ರ ವಹಿಸುವಂತಾಗಬೇಕು. ಹನ್ನೊಂದನೇ ಪಂಚವಾರ್ಷಿಕ ಯೋಜನೆಯಲ್ಲಿ ಈ ಚಟುವಟಿಕೆಗಳನ್ನು ಕೆಲವು ನಿರ್ದಿಷ್ಟ ಜಿಲ್ಲೆಗಳಲ್ಲಿ, ವಿಶೇಷವಾಗಿ ಅಂಚಿನಲ್ಲಿರುವ ಮತ್ತು ಸಣ್ಣ ರೈತರ ಹಿತಾಸಕ್ತಿಗಳನ್ನು ಗಮನದಲ್ಲಿಟ್ಟು ಸಂಘಟಿಸಬೇಕಿದೆ.

**ಅಂಚಿನಲ್ಲಿರುವ ಮತ್ತು ಸಣ್ಣ ರೈತರಿಗೆ ಸಾಲ ಸೌಲಭ್ಯಗಳು :** ಬ್ಯಾಂಕು ಮತ್ತಿತರ ಸಂಘಸಂಸ್ಥೆಗಳು ಗ್ರಾಮೀಣ ಪ್ರದೇಶದ ಜನರಿಗೆ ಸಾಲಸೌಲಭ್ಯಗಳನ್ನು ನೀಡುತ್ತಿವೆಯಾದರೂ, ಕೃಷಿಕಾರರ, ಅದರಲ್ಲೂ ಅಂಚಿನಲ್ಲಿರುವ ಮತ್ತು ಸಣ್ಣ ರೈತರಿಗೆ ಅವು ನೀಡುವ ಸಾಲದ ಮೊತ್ತವು ಯಾವುದಕ್ಕೂ ಸಾಲುತ್ತಿಲ್ಲ. ರಿಸರ್ವ್ ಬ್ಯಾಂಕ್ ಈ ದಿಶೆಯಲ್ಲಿ ಹೆಚ್ಚಿನ ಕಾಳಜಿ ತೋರದೆ ಇರುವುದರಿಂದಾಗಿ ಸರ್ಕಾರದ ಜನಪರ ಕಾರ್ಯಕ್ರಮಗಳು ಪರಿಣಾಮಕಾರಿಯಾಗಿ ಜಾರಿಯಾಗುತ್ತಿಲ್ಲ.

ರಾಷ್ಟ್ರದ ಇಡೀ ಬ್ಯಾಂಕಿಂಗ್ ವ್ಯವಸ್ಥೆಯು ಈಗಲಾದರೂ ಈ ಕೆಳಕಾಣಿಸಿದ ಕ್ರಮಗಳನ್ನು ತೆಗೆದು ಕೊಂಡು ಬಡ ರೈತರ ನೆರವಿಗೆ ಮುಂದಾಗಬೇಕಿದೆ.

ಆದ್ಯತಾ ವಲಯದ ಮಾರ್ಗದರ್ಶನ ಸೂತ್ರಗಳನ್ನು ಪರಿಷ್ಕರಿಸಿ, ಶೇ. ೧೦ರಷ್ಟು ಮೊತ್ತವನ್ನು ಅಂಚಿನಲ್ಲಿರುವ ಮತ್ತು ಸಣ್ಣ ರೈತರ ಅಗತ್ಯಗಳಿಗೆ ಮೀಸಲಾಗಿಡಬೇಕು. ಏಪ್ರಿಲ್ ೨೦೦೮ರಲ್ಲಿ ರಿಸರ್ವ್ ಬ್ಯಾಂಕ್ ಆದ್ಯತಾ ವಲಯಕ್ಕೆ ನೀಡಲಾಗುವ ಸಾಲ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಕೆಳಕಾಣಸಿದ ಹೊಸ ಮಾರ್ಗದರ್ಶನ ಸೂತ್ರಗಳನ್ನು ಪ್ರಕಟಿಸಿತು.

೧. ಕೃಷಿವಲಯ : ಶೇ. ೧೮

೨. ಅಂಚಿನಲ್ಲಿರುವ ಮತ್ತು ಸಣ್ಣ ರೈತರೂ ಸೇರಿದಂತೆ ದುರ್ಬಲ ಜನ ವಿಭಾಗಗಳು ಶೇ. ೧೦

೩. ಇತರರು. ಶೇ. ೧೨

ಈ ಮಾರ್ಗದರ್ಶನ ಸೂತ್ರಗಳಿಗೆ ತಿದ್ದುಪಡಿ ತಂದು ೨ ಹೆಕ್ಟೇರ್ ಭೂ ಹಿಡುವಳಿ ಹೊಂದಿರುವ ರೈತರಿಗೆ ಇನ್ನೂ ಹೆಚ್ಚಿನ ಸೌಕರ್ಯಗಳನ್ನು ನೀಡಬೇಕೆಂದು ಆಯೋಗವು ಶಿಫಾರಸ್ಸು ಮಾಡಿದೆ.

ರಿಸರ್ವ್ ಬ್ಯಾಂಕ್ ಅಂಚಿನಲ್ಲಿರುವ ಮತ್ತು ಸಣ್ಣ ರೈತರ ಅಗತ್ಯತೆಗಳನ್ನು ಗಮನದಲ್ಲಿಟ್ಟು, ಅವರಿಗಾಗಿ ಪ್ರತ್ಯೇಕವಾದ ಸಾಲದ ವ್ಯವಸ್ಥೆಯನ್ನು ಮಾಡಬೇಕಿದೆ.

ಒಟ್ಟಾರೆಯಾಗಿ, ಆಯೋಗವು ಅಭಿಪ್ರಾಯ ಪಡುವಂತೆ, ಬ್ಯಾಂಕುಗಳು ತಮ್ಮ ಚಟುವಟಿಕೆಗಳನ್ನು ಗ್ರಾಮೀಣ ಪ್ರದೇಶಗಳಲ್ಲೂ ವ್ಯಾಪಕವಾಗಿ ವಿಸ್ತರಿಸಬೇಕಿದೆ.

ಈ ಎಲ್ಲ ಶಿಫಾರಸ್ಸುಗಳನ್ನು ಜಾರಿಗೆ ತರುವ ದಿಶೆಯಲ್ಲಿ ಸರ್ಕಾರವು ವಿಶೇಷವಾಗಿ ಗಮನ ಹರಿಸಬೇಕೆಂದು ಆಯೋಗವು ಆಗ್ರಹಪಡಿಸುತ್ತದೆ.

# ಅದ್ದುವಿನ ಅವಸ್ಥೆ

(ಕಳೆದ ಸಂಚಿಕೆಯಿಂದ ಮುಂದುವರಿದಿದೆ)



## ಪಡ್ನೂರಿನ ಪಾಠಗಳು

### (ದಕ್ಷಿಣ ಕನ್ನಡ ಅಂದು - ಇಂದು)

ಎಸ್. ಆರ್. ವಿಜಯಶಂಕರ

ಮನೆಯಲ್ಲಿ ಸಾಲ ಇರುವುದರಿಂದ ಅದ್ದುವಿಗೆ ದಿನಗೂಲಿಯನ್ನು ಹೆಚ್ಚು ಮಾಡುವಂತೆ ಕೇಳುವುದು ಕಷ್ಟವಾಗುತ್ತಿತ್ತು. ದಿನವೊಂದಕ್ಕೆ ಎರಡು ರೂಪಾಯಿ ಐವತ್ತು ಪೈಸೆ ಇದ್ದ ದಿನಗೂಲಿ ಏರುತ್ತಾ ಹೋಗಿ ನಾಲ್ಕು ರೂಪಾಯಿ ತಲುಪಿತು. ಆ ಸಂದರ್ಭದಲ್ಲಿ ನಮ್ಮ ಊರಲ್ಲಿ ಬೀಡಿ ಉದ್ಯಮ ಹೆಚ್ಚಾಗಿ, ಇನ್ನೊಂದು ಬೀಡಿ ಬ್ರಾಂಚ್ ಶುರುವಾಯಿತು. ಹೆಂಗಸರು ಮಾತ್ರ ಹೋಗುತ್ತಿದ್ದ ಬೀಡಿ ಕೆಲಸಕ್ಕೆ ಕೆಲವರು ಗಂಡಸರೂ, ಹುಡುಗರೂ ಹೋಗಲು ಪ್ರಾರಂಭಿಸಿದರು. ಇದರಿಂದಾಗಿ ಕೂಲಿ ಕೆಲಸಕ್ಕೆ ಜನ ಕಮ್ಮಿಯಾಗಿ ಅದ್ದುವಿನಂತಹ ಉತ್ತಮ ಕೆಲಸಗಾರರಿಗೆ ಬೇಡಿಕೆ ಹೆಚ್ಚಿತು.

ಅದ್ದು ನಮ್ಮ ಮನೆಯಲ್ಲಿ ಒಕ್ಕಲು ಅಲ್ಲ, ಬೇರೆ ಕಡೆ ಮನೆಯಿದ್ದು ಕೆಲಸಕ್ಕೆ ಬರುವವ. ಹಾಗಾಗಿ ಯಾವಾಗ ಬೇಕಾದರೂ ಕೆಲಸ ಬಿಡುವುದಕ್ಕೆ ಅವ ಸ್ವತಂತ್ರ. ಹೀಗಿರುವಾಗ ಇನ್ನೊಂದು ಕಡೆಯಿಂದ ಅವನಿಗೆ ದಿನಕ್ಕೆ ಐದು ರೂಪಾಯಿ ಕೂಲಿಗೆ ಆಹ್ವಾನ ಬಂತು. ಅದಕ್ಕಾಗಿ ಅವ ನಮ್ಮ ಮನೆಗೆ ಬರುವುದಕ್ಕಿಂತ ಹೆಚ್ಚಿಗೆ ದೂರ ನಡೆದು ಹೋಗಬೇಕಾಗುತ್ತಿತ್ತು. ಆದರೂ ಅದ್ದು ನಮ್ಮ ಮನೆ ಕೆಲಸ ಬಿಟ್ಟು ಐದು ರೂಪಾಯಿಯ ಹೆಚ್ಚಿನ ಸಂಬಳಕ್ಕೆ ಹೊರಟ. ದಿನಾ ಮೂರು ಮೈಲಿ ಹೆಚ್ಚು ನಡೆಯುವುದಕ್ಕೆ ತಯಾರಾದ. ಅಲ್ಲಿಂದ ಎಡ್ವಾನ್ಸ್ ಪಡೆದು ನಮ್ಮ ಸಾಲ ಬಾಕಿಯನ್ನು ಚುಕ್ತಾ ಮಾಡಿದ. ಕೆಲಸ ಬಿಟ್ಟಮೇಲೆ ನನಗೊಮ್ಮೆ ದಾರಿಯಲ್ಲಿ ಸಿಕ್ಕಾಗ "ಈ ಸರ್ತಿ ಏನೊಂಜಿ ರೇಡಿಯೋ ದೆಪ್ಪೆ ಅಣ್ಣೇರೆ" (ಈ ಸಲ ನಾನೊಂದು ರೇಡಿಯೋ ತೆಗೆದೇ ತೀರುತ್ತೇನೆ ಅಣ್ಣಾ) ಎಂದು ಹೇಳಿದ್ದ.

ಅದ್ದು ಕೆಲಸ ಬಿಟ್ಟದ್ದು ಮನೆಯಲ್ಲಿ ಎಲ್ಲರಿಗೂ ಆಘಾತವಾಯಿತು. ಅದ್ದು ಹಾಗೆ ಮಾಡಿಯಾನೆಂದು ಯಾರೂ ನಿರೀಕ್ಷಿಸಿರಲಿಲ್ಲ. ಮನೆಯಲ್ಲಿ ತೋಟದ ಉಸ್ತುವಾರಿ, ಲೆಕ್ಕ ಇತ್ಯಾದಿ ಬರೆದು ತೋಟದ ಕೆಲಸ ನೋಡಿಕೊಳ್ಳುತ್ತಿದ್ದ ನನ್ನ ಅತ್ತೆ ಹಾಗೂ ಮನೆಯ ಎಲ್ಲಾ ಹೆಂಗಸರ ಮನಸ್ಸಿಗೆ ಬಹಳ ನೋವಾಗಿತ್ತು. ರಾತ್ರೆ ಊಟ ಮಾಡುವಾಗ ನನ್ನ ತಂದೆಯವರಲ್ಲಿ ಅತ್ತೆ 'ಅದಕ್ಕೆ ಬೇಕಾದರೆ ಸಂಬಳ ಹೆಚ್ಚಿಗೆ ಮಾಡುಲೆ ಆವುತಿತ್ತು. ಹೀಂಗೆ ಹೇಳದ್ದೆ ಕೇಳದ್ದೆ ಹೋಪದ. ಅದರ ಬುದ್ಧಿ ತೋರಿಸಿತ್ತು, (ಅವನಿಗೆ ಬೇಕಾದರೆ ಸಂಬಳ ಹೆಚ್ಚು ಮಾಡಬಹುದಿತ್ತು. ಹೀಗೆ ಹೇಳದೆ ಕೇಳದೆ ಹೋಗುವುದೇ. ಅವನ ಬುದ್ಧಿ ತೋರಿಸಿಯೇ ಬಿಟ್ಟ) ಎಂದು ಹೇಳಿದರು. ಈ "ಬುದ್ಧಿ ತೋರಿಸಿಯೇ ಬಿಟ್ಟ" ಎಂಬ ಮಾತ ಮುಂದೆ ನಾನಾ ರೂಪ ಪಡೆದು ಒಂದು ರೀತಿಯ ಅಸ್ಪಷ್ಟ ಸಿಟ್ಟಾಯಿತು. ಅಸಹನೆ ಅಸ್ಪಷ್ಟ ದ್ವೇಷಕ್ಕೆ ದಾರಿ ಮಾಡಿತು.

ಅದ್ದು ಕೆಲಸ ಬಿಟ್ಟಮೇಲೆ ಅದ್ದುವಿನ ಬಗ್ಗೆ ಮನೆಯಲ್ಲಿ ಎಲ್ಲರಿಗೂ ಮನಸ್ಸು ಮುರಿಯಿತು. ನಮ್ಮ ಮನೆ ಮೇಲಿನ ರಸ್ತೆಯಲ್ಲಿ ಹೋದರೂ ಅವ ಮನೆಗೆ ಬರುತ್ತಿರಲಿಲ್ಲ. ಆಮೇಲೆ ಅವ ಒಮ್ಮೆಯೂ ಮನೆಗೆ ಬರಲಿಲ್ಲ ಎಂಬುದೇ ಅವನ ಬಗ್ಗೆ ಮನೆಯಲ್ಲಿ ಬೇಜಾರು ಹೆಚ್ಚಾಗುವುದಕ್ಕೆ ಕಾರಣವಾಯಿತು. ದಾರಿಯಲ್ಲಿ ಸಿಕ್ಕಿದಾಗ ಅವ ನನ್ನಲ್ಲಿ ಮಾತಾಡುತ್ತಿದ್ದ. ಒಮ್ಮೆ ನಾನು ರೇಡಿಯೋ ಬಗ್ಗೆ ಕೇಳಿದಾಗ ಏನೂ ಆಗಿಲ್ಲ ಎಂದು ಬೇಜಾರುಪಟ್ಟ. ನಮ್ಮ ಮನೆಕೆಲಸ ಬಿಟ್ಟು ಅವನಿಗೆ ಸೋಲಾಗಿತ್ತು. ನಮ್ಮ ಮನೆಗೆ ಪುನಃ ಬರುವುದಕ್ಕೆ ನಾಚಿಕೆ, ಅವಮಾನ. ಸ್ವಭಾವತಃ ಸ್ವಾಭಿಮಾನಿಯಾದ ಅವನು ನಮ್ಮ ಮನೆಗೆ ಬಾರದೆ ಓಡಾಡಿದ.

ಅವ ಐದು ರೂಪಾಯಿಗೆ ದಿನಗೂಲಿಗೆ ಹೋದಕಡೆ, ಅವರ ಮುಖ್ಯ ಕೆಲಸ ಆದ ಬಳಿಕ ಅದ್ದುವನ್ನು ಕೆಲಸದಿಂದ ಬಿಟ್ಟರು. ಬೇರೆ ಎಲ್ಲೂ ಅವನಿಗೆ ನಾವು ಕೊಡುತ್ತಿದ್ದ ನಾಲ್ಕು ರೂಪಾಯಿಗಿಂತ ಹೆಚ್ಚು ಸಿಗುತ್ತಿರಲಿಲ್ಲ. ನಿತ್ಯ ಕೆಲಸ ಮಾಡುವವರಿಗೆ ಮೂರು ಅಥವಾ ಮೂರೂವರೆ ಹೀಗೆಲ್ಲಾ ತರಾವರಿ ಸಂಬಳ ಇರುತ್ತಿದ್ದುದರಿಂದ ನಾಲ್ಕು ಅಥವಾ ಐದು ರೂಪಾಯಿ ಸಂಬಳದ ದೊಡ್ಡಾಳುಗಳು ಯಾವಾಗಲೂ ಬೇಡ. ತೋಟಕ್ಕೆ ಅಗತೆ ಮಾಡುವುದು ಇತ್ಯಾದಿ ಕೆಲಸಗಳಿಗೆ ಅವರ ಉಪಯೋಗ ಹೆಚ್ಚು. ಅದು ವರುಷವಿಡೀ ಇರುವ ಕೆಲಸಗಳಲ್ಲ. ಹೀಗಿರಲಾಗಿ, ಅದ್ದು ನಾಲ್ಕಾರು ಮನೆಗಳಲ್ಲಿ ಅಷ್ಟಿಷ್ಟು ಕೆಲಸ ಮಾಡಿಕೊಂಡು ಓಡಾಡುತ್ತಿದ್ದ. ಪುನಃ ನಮ್ಮ ಮನೆಗೆ ಕೆಲಸ ಕೇಳಿಕೊಂಡು ಬರಲಿಲ್ಲ. ಹಾಗೆ ಕೇಳುವುದಕ್ಕೆ ಅವನಿಗೆ ನಾಚಿಕೆ ಎಂದು ನಾನು ತಿಳಿದಿದ್ದೆ. ಬಾರದಿರುವುದಕ್ಕೆ ಅವನ ದುರಹಂಕಾರ ಕಾರಣ ಎಂದು ಮನೆಯಲ್ಲಿ ಹೆಚ್ಚಿನವರು ಭಾವಿಸಿದರು.

ಆಗಿನ ಕಾಲದಲ್ಲಿ ಕರ್ನಾಟಕದಿಂದ ಕೇರಳಕ್ಕೆ ಅಕ್ಕಿ ಸಾಗಿಸಲು ವಿಶೇಷ ಪರ್ಮಿಟ್ ಬೇಕಾಗುತ್ತಿತ್ತು. ಕರ್ನಾಟಕದಲ್ಲಿ ಅಕ್ಕಿ ಬೆಲೆ ಕಮ್ಮಿ. ಕೇರಳದಲ್ಲಿ ಹೆಚ್ಚು. ನಮ್ಮದು ಕೇರಳ ಕರ್ನಾಟಕ ಗಡಿ ಪ್ರದೇಶ. ನಮ್ಮ ಬಂಟ್ವಾಳ ತಾಲ್ಲೂಕು ಆ ಕಡೆ, ಕೇರಳಕ್ಕೆ ಸೇರಿದ ಕಾಸರಗೋಡು ತಾಲೂಕು/ಜಿಲ್ಲೆ. ನಮ್ಮ ಊರಿನ ಬೆಟ್ಟಗುಡ್ಡಗಳನ್ನು ದಾಟುತ್ತಾ ಹೋದರೆ ಕೇರಳ ಗಡಿ ತಲುಪಬಹುದು. ೧೯೬೮ರಿಂದ ೭೩ರ ನಡುವೆ ನಮ್ಮ ಊರಿನ

ಅಕ್ಕಿ ಬೆಲೆ ಅನುಸರಿಸಿ ಕೇರಳಕ್ಕೆ ಅಕ್ಕಿಯ ಕಳ್ಳ ಸಾಗಣೆ ನಡೆಯುತ್ತಿತ್ತು. ಒಂದು ನಿಶ್ಚಿತ ದೂರದವರೆಗೆ ಅಕ್ಕಿಯನ್ನು ಪುಟ್ಟ ಲಾರಿಗಳಲ್ಲಿ ಸಾಗಿಸಿ ಅಲ್ಲಿಂದ ಮುಂದೆ ಗುಡ್ಡದ ದಾರಿಗಳಲ್ಲಿ ಅವನ್ನು ತಲೆಹೊರೆಯಲ್ಲಿ ಸಾಗಿಸಿ ಕೇರಳ ಗಡಿ ತಲುಪಿಸಬೇಕು. ಹೀಗೆ ತಲೆಹೊರೆಯಲ್ಲಿ ಅಕ್ಕಿ ಸಾಗಿಸಲು ಗಟ್ಟಿಮುಟ್ಟಾದ ಆಳುಗಳು ಬೇಕಾಗುತ್ತಿತ್ತು. ಅವರಿಗೆ ಎರಡು ಮೂರು ಪಟ್ಟು ಹೆಚ್ಚಿಗೆ ದುಡ್ಡು ಸಿಗುತ್ತಿತ್ತು. ಒಮ್ಮೊಮ್ಮೆ ಪೊಲೀಸ್ ಇತ್ಯಾದಿ ರೈಡುಗಳಾಗುವ ಅಪಾಯವೂ ಇತ್ತು. ಹಾಗೆ ಸಿಕ್ಕಿಬಿದ್ದಾಗ ತಲೆಹೊರೆಯಲ್ಲಿ ಅಕ್ಕಿ ಸಾಗಿಸುವವರನ್ನು ಜೈಲಿಗೂ ಹಾಕುತ್ತಿದ್ದರು.

ಐದು ರೂಪಾಯಿ ದಿನಗೂಲಿ ಸಂಬಳದ ಕೆಲಸ ಹೋದ ಬಳಿಕ ನಾಲ್ಕಾರು ತಿಂಗಳು ಅಲ್ಲಿ ಇಲ್ಲಿ ಕೆಲಸ ಮಾಡಿದ ಅದ್ದು ಒಂದು ದಿನ ಕೇರಳಕ್ಕೆ ಅಕ್ಕಿ ಸಾಗಿಸುವ ಕಳ್ಳಸಾಗಣೆ ಅಕ್ಕಿ ಹೊರುವ ಕೆಲಸಕ್ಕೆ ಸೇರಿದ. ಅವ ಕೇರಳಕ್ಕೆ ಅಕ್ಕಿ ಸಾಗಿಸುವ ಗ್ಯಾಂಗಿಗೆ ಸೇರಿದ್ದಾನೆ ಎಂಬುದು ಮನೆಯ ಇತರ ಆಳುಗಳಿಂದ ನಮಗೆಲ್ಲಾ ತಿಳಿಯಿತು. 'ಬೋಡ್ಚಿ ಅಂದು ಪಂಡ ಕೇಣಿಜ್ಜೆ' (ಬೇಡ ಎಂದು ಹೇಳಿದರೆ ಕೇಳುವುದಿಲ್ಲ) ಎಂದೊಮ್ಮೆ ಅಬ್ಬೋಕರೆ ನಮ್ಮ ಮನೆಯಲ್ಲಿ ಹೇಳಿದ. ನನಗೊಮ್ಮೆ ದಾರಿಯಲ್ಲಿ ಸಿಕ್ಕಾಗ ದಿನಕ್ಕೆ ಇಪ್ಪತ್ತರಿಂದ ಇಪ್ಪತ್ತೈದು ರೂಪಾಯಿವರೆಗೆ ಸಂಪಾದಿಸಿ ಈ ಸಲ ರೇಡಿಯೋ ತೆಗೆದೇ ತೀರುತ್ತೇನೆ ಎಂದು ನನ್ನಲ್ಲಿ ಅದ್ದು ತನ್ನ ನಿರ್ಧಾರ ಪ್ರಕಟಿಸಿದ. ಕೇರಳಕ್ಕೆ ಅಕ್ಕಿ ಸಾಗಿಸುವವರಿಗೆ ಒಂದು ಕೆ.ಜಿ. ಅಕ್ಕಿಗೆ ಇಷ್ಟು ಎಂಬ ದುಡ್ಡಿನ ಲೆಕ್ಕ ಇರುತ್ತಿತ್ತು. ದೊಡ್ಡ ಹೊರೆ, ಹೆಚ್ಚು ಸಲ ಗುಡ್ಡಗಳಲ್ಲಿ ತಲೆಹೊರೆಯಲ್ಲಿ ಕೇರಳಕ್ಕೆ ಅಕ್ಕಿ ಸಾಗಿಸಿದರೆ ಹೆಚ್ಚಿನ ಆದಾಯ ಬರುತ್ತಿತ್ತು.

ಆದರೆ ಇಲ್ಲೂ ಅದ್ದುವಿನ ದುರದೃಷ್ಟ ಅವನ ಬೆನ್ನುಬಿಡಲಿಲ್ಲ. ಹೇಳಿಕೇಳಿ ಅದ್ದು ಕೂಲಿ ಕೆಲಸದವ. ಅವನಿಗೆ ಕಳ್ಳಸಾಗಾಣಿಕೆಯ ಸೂಕ್ಷ್ಮಬುದ್ಧಿ ಇರಲಿಲ್ಲ. ಗಟ್ಟಿ ಆಳಾದರೂ ಪೊಲೀಸರು ಬರುವ ಸೂಕ್ಷ್ಮ ತಿಳಿದು ಹೇಗೆ ಅಕ್ಕಿಯನ್ನು ಗುಡ್ಡದಲ್ಲಿ ಅಡಗಿಸಿ ಇಟ್ಟು ತಾನು ತಪ್ಪಿಸಿಕೊಳ್ಳಬೇಕೆಂಬ ಜಾಣ್ಮೆ ಇರಲಿಲ್ಲ. ಒಂದು ಸಲದ ರೈಡಿನಲ್ಲಿ ಅವನ ತಲೆಹೊರೆಯ ಅಕ್ಕಿಯನ್ನು ಪೊಲೀಸರು ತೆಗೆದುಕೊಂಡು ಹೋಗಿ ಅವನಿಗೆ ಲುಕ್ಸಾನು ಆಯಿತು. ಇನ್ನೊಂದು ಸಲದ ರೈಡಿನಲ್ಲಿ ಅದ್ದುವೇ ಪೊಲೀಸರ ಕೈಗೆ ಸಿಕ್ಕಿಬಿದ್ದು ಅವನನ್ನು ಜೈಲಿಗೆ ಹಾಕಿದರು. ಹೀಗೆ ಅದ್ದು ಜೈಲಿಗೆ ಹೋದ್ದರಿಂದ ನಮ್ಮ ಮನೆಯಲ್ಲಿ ಅವನ ವಿಚಾರ ಪುನಃ ಪ್ರತ್ಯಕ್ಷವಾಯಿತು. ಮನೆಯಲ್ಲಿ ಅದೊಂದು ಚರ್ಚೆಗೆ ಕಾರಣವಾಯಿತು. ಅದಕ್ಕೆ ಕಾರಣ ನನ್ನ ತಂದೆಯವರ ಉದ್ಯೋಗ.

ನನ್ನ ತಂದೆಯವರು ವೃತ್ತಿಯಲ್ಲಿ ವಕೀಲರು. ತಾಲ್ಲೂಕು ಕೇಂದ್ರದಲ್ಲಿ ವಕೀಲಿ ವೃತ್ತಿ ನಡೆಸುತ್ತಿದ್ದರು. ೧೯೬೭ರ ಬಳಿಕ ನಮ್ಮ ಹಳ್ಳಿಯ ಮನೆಯಲ್ಲೇ ಇದ್ದು ದಿನಾ ಕೋರ್ಟು, ಕಚೇರಿಗಳಿಗಾಗಿ ತಾಲ್ಲೂಕು ಕೇಂದ್ರಕ್ಕೆ ಹೋಗಿ ಸಂಜೆ ಹಿಂತಿರುಗುತ್ತಿದ್ದರು. ಬಂಟ್ವಾಳ ಕೋರ್ಟಿಗೆ ಸಮೀಪ ಒಂದು ಮಾಳಿಗೆಯಲ್ಲಿ ಅವರ ವಕೀಲರ ಆಫೀಸು ಇತ್ತು. ನನ್ನ ತಂದೆಯವರು ವಕಾಲತ್ತಿನಲ್ಲಿ ವಿಶೇಷ ಏನೂ ದುಡ್ಡು ಮಾಡಲಿಲ್ಲ. ಪಾಪದವರು, ಬಡ ಕುಟುಂಬದವರು, ಧನಿಗಳ ಎದುರು ಭೂಮಿ ಕಳಕೊಳ್ಳಬೇಕಾದ ಒಕ್ಕಲುಗಳು, ಅಶನಾರ್ಥಕ್ಕಾಗಿ ಪರದಾಡುವ ಬಡ ವಿಧವೆಯರು ಹೀಗಿರುವವರೆ ಅವರ ಕಕ್ಷಿಗಾರರು. ದುಡ್ಡಲ್ಲಿ ಫೀಸು ಕೊಡಲು ಸಾಧ್ಯವಾಗದೆ ತರಕಾರಿ, ಗುಜ್ಜೆ, ಹಣ್ಣು, ಬಸಳೆ ಹೀಗಿರುವುದನ್ನು ಅವರ ಆಫೀಸಿಗೂ ನಮ್ಮ ಮನೆಗೂ ಅವರ ಕಕ್ಷಿಗಾರರು ಹೊತ್ತುಕೊಂಡು ಬರುತ್ತಿದ್ದರು. ಒಟ್ಟಲ್ಲಿ ಬಡವರು ಹೋಗಿ ಮಾತಾಡ ಬಹುದಾದ ಒಬ್ಬ ವಕೀಲ ಎಂಬ ಅಭಿಪ್ರಾಯ ಆ ಪ್ರದೇಶದ ಜನರಲ್ಲಿತ್ತು. ಹೇಗಾದರೂ ಕಾನೂನಿನಲ್ಲಿ ಗೆದ್ದು ಆಸ್ತಿ ದೊಡ್ಡದು ಮಾಡಿಕೊಳ್ಳುವ ದೊಡ್ಡ ಜಮೀನ್ದಾರ ಕಕ್ಷಿಗಾರರು ಅವರಿಗೆ ಇರಲೇ ಇಲ್ಲ. ಸಣ್ಣಪುಟ್ಟ ಹಿಡುವಳಿದಾರರೂ ಕೆಲವರು ಅವರ ಕಕ್ಷಿಗಾರರಾಗಿದ್ದರು.

ಒಂದು ರೇಡಿಯೋದ ಬಯಕೆಯಿಂದ ತನ್ನ ಬದುಕನ್ನು ದುರಂತದ ಅಂಚಿಗೆ ಒಯ್ದು ಜೈಲಿಗೆ ಹೋಗಿ ಅವಮಾನಿತನಾದ ಅದ್ದು ನನಗೆ ನೆನಪಾಗಿ, ರೇಡಿಯೋಕ್ಕೆ ಹೂವಿನ ಹಾರ ಹಾಕುವ ವದಂತಿ ಹುಟ್ಟಿಸುವವರು ಎಷ್ಟು ಅಮಾನವೀಯವಾದ ಕೆಲಸ ಮಾಡುತ್ತಾರೆ ಅನಿಸುತ್ತದೆ. ನಮ್ಮ ಅದ್ದುವಿಗೆ ಒಂದು ರೇಡಿಯೋ ಕೊಳ್ಳುವ ಅನುಕೂಲ ಬಂದು ಆ ಟ್ರಾನ್ಸಿಸ್ಟರನ್ನು ಅವನು ಒಂದು ಹಾರದಂತೆ ಕುತ್ತಿಗೆಯಲ್ಲಿ ತೂಗುಹಾಕಿಕೊಂಡು ಓಡಾಡುವಂತೆ ಆಗಿದ್ದರೆ ಎಷ್ಟು ಚೆನ್ನಾಗಿತ್ತು ಎಂದೆನಿಸುತ್ತದೆ.

ಬಡವರು ಹೋಗಿ ಮಾತಾಡಿಸಬಹುದಾದ ವಕೀಲರು ಎಂಬ ಧೈರ್ಯದಲ್ಲಿ ಒಂದು ಸಂಜೆ ಅದ್ದುವಿನ ಕಡೆಯವರು ನನ್ನ ತಂದೆಯವರಲ್ಲಿಗೆ ಬಂದು ಕಣ್ಣೀರು ಹಾಕಿ ಅದ್ದುವನ್ನು ಜೈಲಿನಿಂದ ಬಿಡಿಸಿಕೊಡಬೇಕೆಂದು ಕೇಳಿಕೊಂಡರು. ಎಂದಿನಂತೆ ನನ್ನ ತಂದೆಯವರ ಮನಸು ಕರಗಿತು. ಅಯ್ಯೋ ಪಾಪ ಅನಿಸಿತು. ''ಆಂಡು ತೂಕ. ಎಲ್ಲೆ ಆಫೀಸುಗು ಬಲೆ'' (ಆಯಿತು. ನೋಡೋಣ. ನಾಳೆ ಆಫೀಸಿಗೆ ಬನ್ನಿ) ಎಂದು ಹೇಳಿ ಮನೆಗೆ ಬಂದರು. ರಾತ್ರೆ ಊಟ ಮಾಡುವಾಗ ತಂದೆಯವರು ಅದ್ದುವಿನ ಜೈಲಿನ ವಿಚಾರ ಹೇಳಿದರು.

ನನ್ನ ತಂದೆಯವರು ಅದ್ದುವಿಗೆ ಸಹಾಯ ಮಾಡಕೂಡದು, ಅವ ಸ್ವಲ್ಪ ದಿನ ಜೈಲಲ್ಲೆ ಇದ್ದು ನರಕ ಅನುಭವಿಸಲಿ ಎಂಬ ಆಗ್ರಹ ಮನೆಯವರಿಂದ. ನನ್ನ ತಂದೆಯವರ ಚಿಕ್ಕಪ್ಪನ ಮಗ ತಮ್ಮ ಅಂದರೆ ನನ್ನ ಚಿಕ್ಕತಂದೆ ನಮ್ಮ ಅವಿಭಕ್ತ ಕುಟುಂಬದಲ್ಲಿ ಜೊತೆಗೆ ಇದ್ದೆವು. ಆಗ ಆತ ಮದುವೆಯಾಗದ ಹುಡುಗ. ತೋಟದ ಕೆಲಸ ಇತ್ಯಾದಿ ಜವಾಬ್ದಾರಿ ಹೊರುತ್ತಿದ್ದ. ಆತ ನನ್ನ ತಂದೆಯವರ ಎದುರು ನಿಂತು ಮಾತನಾಡುತ್ತಿದ್ದುದೇ ಇಲ್ಲ. ಅಂತಹ ಚಿಕ್ಕಪ್ಪನೂ ಅದ್ದುವಿಗೆ ತಂದೆಯವರು ಸಹಾಯ ಮಾಡಬಾರದೆಂದೂ, ತಮ್ಮ ಮನೆಯಲ್ಲಿ ಕೆಲಸ ಮಾಡುತ್ತಾ ಇದ್ದರೆ ಅವ ಎಷ್ಟು ಸೌಖ್ಯದಲ್ಲಿ ಇರುತ್ತಿದ್ದ ಎಂಬುದು ಅವನಿಗೆ ತಿಳಿಯಬೇಕೆಂದೂ ಹೇಳಿದ. ಈ ಚಿಕ್ಕಪ್ಪನಿಗೆ ಅಣ್ಣನ ಎದುರು ವಾದಿಸುವಷ್ಟು ಅದ್ದುವಿನ ಮೇಲೆ ಕೋಪ ಯಾಕೆ ಎಂದು ನನಗೆ ಆಶ್ಚರ್ಯವಾಗಿತ್ತು. ಒಟ್ಟಲ್ಲಿ ನನ್ನ ತಂದೆಯವರು ಒತ್ತಡಕ್ಕೆ ಸಿಕ್ಕಿಕೊಂಡರು.

ನನ್ನ ತಂದೆಯವರು ಒತ್ತಡದಲ್ಲಿದ್ದಾಗ ಮಕ್ಕಳಾದ ನಮಗೆ ಬೈಗಳು ಜಾಸ್ತಿ. ಮಾರನೇ ದಿನ ಬೆಳಿಗ್ಗೆ ಆಫೀಸಿಗೆ ಹೊರಡುವ ಮೊದಲು ಅವರು ಯಾವ ಯಾವುದೋ ಕಾರಣಕ್ಕೆ ಮಕ್ಕಳ ಮೇಲೆ ರೇಗಿದರು. ಮಾರನೇ ದಿನ ಸಂಜೆ ಅದ್ದುವಿನ ಕತೆ ಏನಾಯಿತು ಎಂದು ನಮಗೆಲ್ಲಾ ಕುತೂಹಲ. ಊಟದ ಕೊನೆಯಲ್ಲಿ ಅದ್ದು ಇನ್ನೂ ಜೈಲಲ್ಲೇ ಇದ್ದಾನೆ, ಹೊರಗೆ ಬಂದಿಲ್ಲ ಎಂದು ತಿಳಿಯಿತು. ಬೇರೆ ಯಾರಾದರೂ ವಕೀಲರ ಹತ್ತಿರ ಹೋಗಿ ಎಂದಿದ್ದೇನೆ ಎಂದು ತಮ್ಮಷ್ಟಕ್ಕೆ ತಾವೆ ಎಂಬಂತೆ ತಂದೆಯವರು ಗೊಣಗಿಕೊಂಡರು. ಮನೆಯಲ್ಲಿ ಎಲ್ಲರೂ ಒಮ್ಮೆ ನಿರುಮ್ಮಳರಾದರು.

ಆದರೆ ಅದ್ದುವಿನ ಮನೆಯವರು ಬಿಡಲಿಲ್ಲ. ನಮ್ಮ ಸುತ್ತಮುತ್ತಲಿನ ಊರುಗಳಲ್ಲಿ ''ಪಾಪದಕುಳು ಕಣ್ಣೀರು ಪಾಂಡ ಅಣ್ಣೇರೆಗು ತಡೆಯಾರ ಆವಂದು'' (ಪಾಪದವರು ಕಣ್ಣೀರು ಹಾಕಿದರೆ ಅಣ್ಣನವರಿಗೆ ತಡೆದುಕೊಳ್ಳಲಾಗುವುದಿಲ್ಲ) ಅವರಿಂದಾದ ಏನಾದರೂ ಸಹಾಯ ಮಾಡುತ್ತಾರೆ ಎಂಬುದು ನನ್ನ ತಂದೆಯವರ ಬಗ್ಗೆ ಇದ್ದ ಪ್ರತೀತಿ. ಆ ಧೈರ್ಯದಲ್ಲೆ ಅದ್ದುವಿನ ಕಡೆಯವರು ನನ್ನ ತಂದೆಯವರ ಆಫೀಸಿನಲ್ಲಿ ಮುಖ ಸಣ್ಣದು ಮಾಡಿಕೊಂಡು ಕುಳಿತರು.

ಅಂತೂ ನನ್ನ ತಂದೆಯವರು ಅವರ ಪೈಕಿ ಯಾರದ್ದೋ ಜಾಮೀನು ಮಾಡಿಸಿ ಒಂದೆರಡು ದಿನಗಳಲ್ಲಿ ಅವನನ್ನು ಜೈಲಿನಿಂದ ಬಿಡಿಸಿದರು. ನಡುವೆ ಒಂದು ಸೆಕೆಂಡ್ ಸ್ಯಾಟರ್‌ಡೇ (ತಿಂಗಳ ಎರಡನೇ ಶನಿವಾರ) ಹಾಗೂ ಭಾನುವಾರದ ರಜೆಗಳು ಬಂದುದರಿಂದ ಅದ್ದು ಹೆಚ್ಚು ಕಮ್ಮಿ ಒಂದು ವಾರ ಕಾಲ ಜೈಲಲ್ಲಿದ್ದ. ಅವ ಜೈಲಿನಿಂದ ಹೊರಬಂದ ಬಳಿಕ ಅವನನ್ನು ತಾನು ಜೈಲಿನಿಂದ ಬಿಡಿಸಿದ್ದೆಂದು ಯಾರಲ್ಲೂ ಹೇಳಬೇಕಾಗಿಲ್ಲವೆಂದೂ, ಇನ್ನು ಮುಂದೆ ಅಕ್ಕಿಯ ಅಥವಾ ಬೇರೆ ಯಾವುದೇ ಕಳ್ಳ ಸಾಗಾಣೆಯಂತಹ ತಪ್ಪುದಾರಿಯ ಕೆಲಸಗಳಿಗೆ ಕೈಹಾಕದೆ ಉತ್ತಮ ರೀತಿಯಲ್ಲಿ ಜೀವನ ಮಾಡಬೇಕೆಂದೂ ಬುದ್ಧಿ ಹೇಳಿ ಜೈಲಿನಿಂದ ಹೊರಬಂದ ಅದ್ದುವನ್ನೂ ಅವನ ಕಡೆಯವರನ್ನೂ ನನ್ನ ತಂದೆಯವರು ಕಳುಹಿಸಿಕೊಟ್ಟರು.

ಅದ್ದು ಜೈಲಿನಿಂದ ಬಿಡುಗಡೆಯಾದ್ದನ್ನು ನನ್ನ ತಂದೆಯವರು ಮನೆಯಲ್ಲೂ, ಎಲ್ಲೂ ಯಾರಿಗೂ ಹೇಳಲಿಲ್ಲ. ಹತ್ತಾರು ದಿನಗಳ ಬಳಿಕ ಅಬ್ಬೋಕರೆ ಬ್ಯಾರಿಯ ಮಣ್ಣುಕೆಲಸದವರ ಪೈಕಿ ಒಬ್ಬ ಹುಡುಗ ಹೇಳಿ ನನಗೆ ಅದ್ದು ಜೈಲಿನಿಂದ ಬಿಡುಗಡೆಯಾದ್ದು ತಿಳಿಯಿತು. 'ಈರೆಗೆ ಗೊಂತುಜ್ಜಾ ಅಣ್ಣೇರೆ, ಅಮ್ಮೇರ್ ಬುಡ್ಪ್

ಪಾಯಿನ ಅತ್ತಾ' (ನಿಮಗೆ ಗೊತ್ತಿಲ್ಲವೇ ಅಣ್ಣಾ, ತಂದೆಯವರೇ ಜೈಲಿನಿಂದ ಬಿಡಿಸಿದ್ದಲ್ಲವೆ ?) ಎಂದು ಅವ ಹೇಳಿದಾಗಲೆ ನನಗೆ ವಿಚಾರ ತಿಳಿದದ್ದು. ಆದರೆ ತಂದೆಯವರ ಬಳಿ ಅದನ್ನೆಲ್ಲಾ ಕೇಳುವಷ್ಟು ಧೈರ್ಯ ಇಲ್ಲದೆ ನಾನು ಸುಮ್ಮನಿದ್ದೆ.

ಆದರೆ, ಜೈಲಿನಿಂದ ಹೊರಬಂದ ಅದ್ದು ಜರ್ಜರಿತನಾಗಿದ್ದ. ಅವನ ಮುಖ ಯಾವತ್ತೂ ಬಾಡಿರುತ್ತಿತ್ತು. ಕಾಯಿಲೆ ಬಿದ್ದವನಂತೆ ಕಂಗಾಲಾಗಿದ್ದ. ನೋಡಿದರೆ ಮೈಯಲ್ಲಿ ತ್ರಾಣವೇ ಇಲ್ಲದ ಹಾಗೆ ಕಾಣುತ್ತಿದ್ದ. ನಮ್ಮೆಲ್ಲರ ಕಣ್ಣು ತಪ್ಪಿಸಿ ಓಡಾಡುತ್ತಿದ್ದ. ಒಮ್ಮೆ ನಾನು ಅವನನ್ನು ಪಾಲ್ತಿಮಾರಿನ ಸಮೀಪದ ಪುಂಡಿಕ್ಯಾಯವರ ಗದ್ದೆ ಹುಣಿಯಲ್ಲಿ ನಡೆದುಹೋಗುತ್ತಿರುವುದನ್ನು ನೋಡಿದೆ. ನನ್ನನ್ನು ದೂರದಿಂದ ನೋಡಿ ಅವ ಇನ್ನೊಂದು ಕಡೆ ತಿರುಗಿಹೋದ. ನಮ್ಮ ಮನೆಯ ಹತ್ತಿರದ ರಸ್ತೆಯಲ್ಲಿ ನಡೆಯುತ್ತಾ ಅವನ ಮನೆಗೆ ಹೋಗುತ್ತಿದ್ದವ ಪಕ್ಕದ ಗುಡ್ಡಗಳ ಒಳಹಾದಿ, ಕಾಲುದಾರಿಗಳಲ್ಲಿ ನಮ್ಮ ಹಾಗೂ ಜನಗಳ ಕಣ್ಣಿಗೆ ಬೀಳದೆ ಓಡಾಡುತ್ತಿದ್ದ. ಜೈಲಿಗೆ ಹೋಗಿ ಅವನಿಗೆ ವಿಪರೀತ ಅವಮಾನವಾಗಿತ್ತು. ಜನರಿಗೆ ಮುಖ ತೋರಿಸಲೂ ನಾಚಿಕೆ ಆಗುತ್ತಿತ್ತು. ಇಷ್ಟು ಕಷ್ಟ, ನಷ್ಟ, ನೋವು, ಅವಮಾನ ಪಟ್ಟರೂ ಅವನಿಗೊಂದು ರೇಡಿಯೋ ಕೊಳ್ಳುವುದು ಸಾಧ್ಯವಾಗಲಿಲ್ಲ.

ಆಮೇಲೆ ೧೯೭೫ರಲ್ಲಿ ನಾನು ವಿಟ್ಲದ ವಿದ್ಯಾಭ್ಯಾಸ ಮುಗಿಸಿ ಕಾಲೇಜಿಗೆ ಮೈಸೂರಿಗೆ ಹೋದೆ. ವಿಟ್ಲ ಪಡ್ನೂರು ಗ್ರಾಮ ಬಿಟ್ಟ ಬಳಿಕ ನನಗೆ ಅದ್ದುವಿನ ಸಂಪರ್ಕ ಇಲ್ಲ. ಆದರೂ ಅವನಿಗೆ ರೇಡಿಯೋ ಕೊಳ್ಳಲು ಆಗದ ಈ ಎಲ್ಲಾ ಯಾತನೆಗಳೂ ನನ್ನ ನೆನಪಲ್ಲಿ ಇಷ್ಟು ದಟ್ಟವಾಗಿ ಉಳಿಯಲು ಒಂದು ಕಾರಣವಿದೆ. ಆ ಕಾರಣವನ್ನು ಹೇಳಿದರೆ ನಿಮಗದು ಅರ್ಥವಾದೀತು.

ನಾನು ಕೋಡಪದವಿನಲ್ಲಿ ಎಲಿಮೆಂಟರಿ ಶಾಲೆಗೆ ಹೋಗುವಾಗ ರೇಡಿಯೋ ಇದ್ದವರು ಟೆಸ್ಟ್ ಮ್ಯಾಚ್‌ಗಳ ಕ್ರಿಕೆಟ್ ಕಾಮೆಂಟರಿ ಕೇಳುವುದು ಒಂದು ಫ್ಯಾಶನ್ ಆಗಿತ್ತು ಎಂದರೂ ತಪ್ಪಲ್ಲ. ಕ್ರಿಕೆಟ್ ಬಗ್ಗೆ ಎಲ್ಲರಿಗೂ ಒಂದು ಆಸಕ್ತಿ. ಭಾರತ-ಪಾಕಿಸ್ತಾನ್ ಟೆಸ್ಟ್ ಮ್ಯಾಚ್ ಆಗಿ ಪಾಕಿಸ್ತಾನ ಗೆದ್ದರೆ ಮುಸ್ಲಿಮರು ಅವರ ಮನೆಗಳಲ್ಲಿ ರೇಡಿಯೋಗಳಿಗೆ ಹೂವಿನ ಹಾರ ಹಾಕುತ್ತಾರೆ ಎಂಬ ವದಂತಿಯನ್ನು ಅನೇಕರು ಹೇಳುತ್ತಿದ್ದರು. ಅದನ್ನು ಕೆಲವರು ಬಹುವಾಗಿ ನಂಬುತ್ತಿದ್ದರು. ನಮ್ಮ ತೋಟದ ಆಚೆ ಕರೆಯಲ್ಲಿ ಪಕ್ಕದ ಮನೆಯವರಿಗೆ ಸೇರಿದ ಜಾಗದಲ್ಲಿ ಒಂದು ಮುಸ್ಲಿಂ ಕುಟುಂಬ ಇತ್ತು. ಅವರಲ್ಲಿ ಕೆಲವರು ಕೂಲಿ ಕೆಲಸ, ಇನ್ನು ಕೆಲವರು ಯಾವುದಾದರೂ ಸಣ್ಣಪುಟ್ಟ ವ್ಯಾಪಾರ ಮಾಡುತ್ತಿದ್ದರು. ಪಾಕಿಸ್ತಾನ ಕ್ರಿಕೆಟ್‌ನಲ್ಲಿ ಗೆದ್ದಾಗ ಅವರ ಮನೆಯಲ್ಲಿ ರೇಡಿಯೋಗೆ ಹೂವಿನ ಹಾರ ಹಾಕುತ್ತಾರೆ ಎಂದು ನಮ್ಮ ಬೈಲಿನ ಮಕ್ಕಳಿಗೆ ಕೆಲವರು ಹೇಳುತ್ತಿದ್ದರು. ಅದನ್ನು ಅನೇಕರು ನಂಬುತ್ತಿದ್ದರು.

ಅದ್ದುವಿನ ಅನುಭವದಿಂದಾಗಿ ಎಷ್ಟು ಜನ ಕೂಲಿಯವರ ಮನೆಯಲ್ಲಿ ರೇಡಿಯೋ ಇರಲು ಸಾಧ್ಯ ಎಂಬ ಅನುಮಾನ ನನಗೆ ಬರತೊಡಗಿತು. ನಮ್ಮ ಊರಿನ ಒಬ್ಬ ಸಕ್ರಿಯ ಕಾರ್ಯಕರ್ತರು ಆಚೆಕರೆ ಮುಸ್ಲಿಮರ ಮನೆಯಲ್ಲಿ ಪಾಕಿಸ್ತಾನ ಭಾರತದ ವಿರುದ್ಧ ಕ್ರಿಕೆಟ್‌ನಲ್ಲಿ ಗೆದ್ದಾಗ ರೇಡಿಯೋಕ್ಕೆ ಹೂವಿನಹಾರ ಹಾಕುತ್ತಾರೆ ಎಂದು ಹೇಳಿದರು. ಅವರಲ್ಲಿ ನಾನು, ಆಚೆಕರೆ ಮುಸ್ಲಿಮರ ಮನೆಯಲ್ಲಿ ರೇಡಿಯೋವೇ ಇಲ್ಲ, ಬೇಕಾದರೆ ಹೋಗಿ ನೋಡಿ ಎಂದು ಹೇಳಿದೆ. ಅವರು, ಬಹಳ ತಿಳಿದವರ ಹಾಗೆ ಮಾತಾಡಬೇಡ ಎಂದು ನನ್ನಲ್ಲಿ ಹೇಳಿದರು. ಆದರೆ ನಾನು ಅವರಲ್ಲಿ ರೇಡಿಯೋ ಇಲ್ಲ ಎಂಬುದನ್ನು ಆ ಮೊದಲೇ ಖಾತ್ರಿ ಮಾಡಿಕೊಂಡಿದ್ದೆ. ಬಹಳ ವರುಷಗಳ ಬಳಿಕ ಆ ಮುಸ್ಲಿಮರ ಮನೆಯ ಹೆಣ್ಣುಮಕ್ಕಳೆಲ್ಲಾ ಬೀಡಿ ಕಟ್ಟಲು ತೊಡಗಿದ ಬಳಿಕ ಅವರೊಂದು ಸೆಕೆಂಡ್ ಹ್ಯಾಂಡ್ ಟ್ರಾನ್ಸಿಸ್ಟರ್ ರೇಡಿಯೋ ಕೊಳ್ಳುವ ಪ್ರಯತ್ನ ಮಾಡಿದರು.

ಆಗ ರೇಡಿಯೋಕ್ಕೆ ಪೋಸ್ಟಾಫೀಸಿನಿಂದ ಒಂದು ಲೈಸೆನ್ಸ್ ಪಡೆದು ಇಟ್ಟುಕೊಳ್ಳಬೇಕಾಗಿತ್ತು. ಲೈಸೆನ್ಸ್ ಇಲ್ಲದೆ ರೇಡಿಯೋ ಇಟ್ಟುಕೊಳ್ಳುವುದು ಕಾನೂನಿನ ಪ್ರಕಾರ ಅಪರಾಧವಾಗಿತ್ತು. ಪುತ್ತೂರು, ವಿಟ್ಲ ಮೊದಲಾದ ಊರುಗಳಲ್ಲಿ ರೇಡಿಯೋ ಮೈದಾನಗಳೇ ಇದ್ದವು. ಸಂಜೆ ಆ ಪುಟ್ಟ ಪಟ್ಟಣಗಳ ನಾಗರಿಕರು ರೇಡಿಯೋ ಮೈದಾನದಲ್ಲಿ ವಾಯುಸೇವನೆ ಮಾಡುತ್ತಾ ರೇಡಿಯೋ ಕೇಳುವ ಕ್ರಮವಿತ್ತು. ಆ ಮೈದಾನದಲ್ಲಿ ಒಂದು ಎತ್ತರದ ಕಟ್ಟಡದಲ್ಲಿ ಮೈಕ್ ಇಟ್ಟಿರುತ್ತಿದ್ದರು. ಸಂಜೆ ಬಂದು ರೇಡಿಯೋ ಹಾಕಿ ಮೈಕ್ ಮೂಲಕ ರೇಡಿಯೋ ಧ್ವನಿಯನ್ನು ಮೈಕ್‌ನಲ್ಲಿ ಬಿತ್ತರಿಸುತ್ತಿದ್ದರು. ಆ ಕಾಲದಲ್ಲಿ ನಮ್ಮ ಆಚೆಕರೆ ಮುಸಲ್ಮಾನ ಕುಟುಂಬದವರು, ಹೆಣ್ಣುಮಕ್ಕಳು ಬೀಡಿ ಕಟ್ಟುವಾಗ ಒಂದು ರೇಡಿಯೋ ಇದ್ದರೆ ಪದ್ಯ ಕೇಳಬಹುದು ಎನ್ನುತ್ತಾರೆ. ಸೆಕೆಂಡ್‌ಹ್ಯಾಂಡ್ ರೇಡಿಯೋಕ್ಕೆ ಲೈಸೆನ್ಸ್ ಸಿಗಬಹುದೇ ? ಸಿಕ್ಕರೆ ಎಷ್ಟು ಫೀಸು ಎಂದು ಪೋಸ್ಟ್‌ಮಾಸ್ಟರಲ್ಲಿ ಕೇಳುತ್ತಿದ್ದರು.

ಪಾಕಿಸ್ತಾನ ಭಾರತದ ವಿರುದ್ಧ ಗೆದ್ದರೆ ಮುಸಲ್ಮಾನರು ರೇಡಿಯೋಕ್ಕೆ ಹೂವಿನ ಹಾರ ಹಾಕುತ್ತಾರೆ ಎಂಬುದು ಬಹುಶಃ ಭಾರತದಾದ್ಯಂತ ಪ್ರಚಾರದಲ್ಲಿರುವ ಒಂದು ವದಂತಿ. ಅದರ ಸತ್ಯಾಸತ್ಯತೆಯನ್ನು ಯಾರೂ ವಿಚಾರ ವಿಮರ್ಶೆ ಮಾಡಲು ಹೋಗದೆ ಅನೇಕರು ಅಂತಹ ವದಂತಿಗಳನ್ನೇ ನಂಬಿಬಿಡುತ್ತಾರೆ. ಇತ್ತೀಚೆಗೆ ಪಾಕಿಸ್ತಾನ ಭಾರತದ ವಿರುದ್ಧ ಕ್ರಿಕೆಟ್‌ನಲ್ಲಿ ಗೆದ್ದಾಗ ಮುಸ್ಲಿಮರು ಮನೆಯಲ್ಲಿ ಟಿ.ವಿ.ಗೆ ಹೂವಿನ ಹಾರ ಹಾಕುತ್ತಾರೆ ಎಂಬ ಮಾತನ್ನೂ ನಾನು ಕೇಳಿದ್ದೇನೆ.

ಆದರೆ ಭಾರತದ ವಿರುದ್ಧ ಪಾಕಿಸ್ತಾನ ಗೆದ್ದಾಗ ಮುಸ್ಲಿಮರು ತಮ್ಮ ಮನೆಗಳಲ್ಲಿ ರೇಡಿಯೋಗಳಿಗೆ ಹೂವಿನ ಹಾರ ಹಾಕುತ್ತಾರೆ ಎಂಬ ವದಂತಿಯನ್ನು ಕೆಲವರು ಹೇಳುವುದು ಕೇಳಿದಾಗ ನನಗೆ ನನ್ನ ಬಾಲ್ಯದ ಅದ್ದು ನೆನಪಾಗುತ್ತಾನೆ. ಎಷ್ಟೋ ಮನೆಗಳಲ್ಲಿ ರೇಡಿಯೋ ಅಥವಾ ಈಗ ಟಿ.ವಿ.ಗಳೂ ಇರುವುದಿಲ್ಲ. ಜನಗಳು ಅವರ ಸಣ್ಣಪುಟ್ಟ ಆಸೆಗಳನ್ನೂ ತೀರಿಸಿಕೊಳ್ಳಲಾಗದೆ ಒದ್ದಾಡುತ್ತಾರೆ. ಟೆಕ್ನಾಲಜಿ ಹಾಗೂ ಜಾಹೀರಾತುಗಳು ಮನುಷ್ಯನ ಆಸೆಗಳನ್ನು ಕೆರಳಿಸುತ್ತವೆ. ಅವನ್ನು ಕೊಳ್ಳುವ ಸಂಪತ್ತು ಅವರಿಗಿರುವುದಿಲ್ಲ. ಒಂದು ರೇಡಿಯೋದ ಬಯಕೆಯಿಂದ ತನ್ನ ಬದುಕನ್ನು ದುರಂತದ ಅಂಚಿಗೆ ಒಯ್ದು ಜೈಲಿಗೆ ಹೋಗಿ ಅವಮಾನಿತನಾದ ಅದ್ದು ನನಗೆ ನೆನಪಾಗಿ ರೇಡಿಯೋಕ್ಕೆ ಹೂವಿನ ಹಾರ ಹಾಕುವ ವದಂತಿ ಹುಟ್ಟಿಸುವವರು ಎಷ್ಟು ಅಮಾನವೀಯವಾದ ಕೆಲಸ ಮಾಡುತ್ತಾರೆ ಅನಿಸುತ್ತದೆ. ನಮ್ಮ ಅದ್ದುವಿಗೆ ಒಂದು ರೇಡಿಯೋ ಕೊಳ್ಳುವ ಅನುಕೂಲ ಬಂದು ಆ ಟ್ರಾನ್ಸಿಸ್ಟರನ್ನು ಅವನು ಒಂದು ಹಾರದಂತೆ ಕುತ್ತಿಗೆಯಲ್ಲಿ ತೂಗುಹಾಕಿಕೊಂಡು ಓಡಾಡುವಂತೆ ಆಗಿದ್ದರೆ ಎಷ್ಟು ಚೆನ್ನಾಗಿತ್ತು ಎಂದೆನಿಸುತ್ತದೆ.

**ಎಸ್.ಆರ್.ವಿಜಯಶಂಕರ**
ಸಿ-೨/೧೦೩, ಓಂಕಾರ್ ಅಪಾರ್ಟ್‌ಮೆಂಟ್ಸ್
೮ನೇ ಮುಖ್ಯರಸ್ತೆ, ಮಲ್ಲೇಶ್ವರಂ
ಬೆಂಗಳೂರು - ೫೬೦ ೦೦೩

# ಅದೊಂದು ಸಂಸ್ಕೃತಿ

ತೆಲುಗು ಮೂಲ : ಅಬ್ಬೂರಿ ಛಾಯಾದೇವಿ
ಕನ್ನಡಕ್ಕೆ : ಎಂ. ಜಿ. ಶುಭಮಂಗಳ



''ನಿನ್ನ ಅಭ್ಯುದಯ ಭಾವನೆಗಳಿಂದ ನನ್ನನ್ನು ಕೊಲ್ಲಬೇಡ !'' ಎಂದಳು ಸೃಜನ.

ಅವಳ ಮಾತುಗಳಿಗೆ ದಿಗ್ಭ್ರಾಂತಿಗೊಳಗಾದೆ. ನಾನು ಹೆತ್ತು ಬೆಳೆಸಿದ ಹುಡುಗಿ ಅವಳೇನಾ ಎಂದು ಅನುಮಾನವಾಯಿತು.

ಸೃಜನ ಕಣ್ಣು. ಮೂಗು, ಬಣ್ಣ ಎಲ್ಲದರಲ್ಲೂ ಅವಳ ಅಪ್ಪನ ಹೋಲಿಕೆ ಇದೆ ಎನಿಸಿದರೂ, ಸ್ವಭಾವದಲ್ಲಿ ನನ್ನ ಹೋಲಿಕೆ ಇದೆ ಎಂದುಕೊಳ್ಳುತ್ತಿದ್ದೆ. ತನಗೆ ಬೇಕಾದುದನ್ನು ಹಕ್ಕಿನಿಂದ ಕೇಳುತ್ತಾಳೆ. ತನ್ನಿಷ್ಟದಂತೆಯೇ ಮಾಡಬೇಕೆನ್ನುತ್ತಾಳೆ. ಯಾರಾದರೂ ವಿಮರ್ಶಿಸಿದರೆ, ತನ್ನನ್ನು ತಾನು ಸಮರ್ಥಿಸಿಕೊಂಡು ಧೈರ್ಯವಾಗಿ ಉತ್ತರ ಹೇಳುತ್ತಾಳೆ. ಆದರೆ, ಅವಳ ಆಲೋಚನಾ ಧೋರಣೆ ನನಗೆ ಇಷ್ಟು ಅತಿರೇಕವಾಗಿ ಬೆಳೆಯುತ್ತದೆ ಎಂದುಕೊಳ್ಳಲಿಲ್ಲ.

ಚಿಕ್ಕವಳಿದ್ದಾಗ ನಾನು ಹಟ ಮಾಡುತ್ತಿದ್ದೆ. 'ಇವಳು ಬರ್ತಾ ಬರ್ತಾ ಗಂಡು ಹುಡುಗನಂತೆ ಬೆಳೆಯುತ್ತಿದ್ದಾಳೆ. ಇವಳನ್ನು ಹೇಗೆ ನಿಯಂತ್ರಿಸಬೇಕೋ ಗೊತ್ತಾಗುತ್ತಿಲ್ಲ' ಎಂದು ಕಸಿವಿಸಿಗೊಳ್ಳುತ್ತಿದ್ದಳು ಅಮ್ಮ. 'ನಿನ್ನನ್ನು ನಾನು ಅಡಗಿಸಲಾಗುತ್ತದೆಯೇ !' ಎನ್ನುತ್ತಾ ನನ್ನನ್ನು ಪರೋಕ್ಷವಾಗಿ ಸಮರ್ಥಿಸುತ್ತಿದ್ದರು ಅಪ್ಪ. ಅಣ್ಣನಂತೆ ನಾನು ಕೂಡ ವಿದ್ಯಾರ್ಥಿ ಸಂಘದ ಕಾರ್ಯಕಲಾಪಗಳಲ್ಲಿ ಪಾಲ್ಗೊಳ್ಳುತ್ತೀನಿ ಎಂದರೆ ಅಮ್ಮ ನನಗೆ ಅಡ್ಡ ಬರುತ್ತಿದ್ದಳು. 'ಹೆಣ್ಣು ಮಕ್ಕಳಿಗೆ ಅಂತಹವು ಒಳ್ಳೆಯದಲ್ಲ, ನಾಳೆ ಮದುವೆ ಸಂಬಂಧ ಹೇಗೆ ಕುದುರುತ್ತದೆ ?' ಎಂದು. ಚಿಕ್ಕಂದಿನಿಂದ ಅಣ್ಣನನ್ನು ನೋಡಿದಹಾಗೆ ನನ್ನನ್ನೂ ನೋಡಬೇಕೆಂದು ಹಟ ಹಿಡಿಯುತ್ತಿದ್ದೆ. ಅಣ್ಣನನ್ನು ಒಂದು ರೀತಿ, ನನ್ನನ್ನು ಒಂದು ರೀತಿ ನೋಡುತ್ತಿದ್ದಾರೆನಿಸುತ್ತಿತ್ತು.

ಮುಖ್ಯವಾಗಿ, ಅಮ್ಮ ಆ ಪಕ್ಷಪಾತ ಹೆಚ್ಚಾಗಿ ಮಾಡುತ್ತಿದ್ದಳು. 'ಅವನು ಗಂಡು ಹುಡುಗ, ನೀನು ಹೆಣ್ಣು ಹುಡುಗಿ' ಎನ್ನುತ್ತ, ಊಟ ಆದ ಮೇಲೆ ತಟ್ಟೆ ತೆಗಿ ಎನ್ನುತ್ತಿದ್ದಳು ನನಗೆ. ಅಣ್ಣ ಕೈ ತೊಳೆದು ಹೊರಟುಹೋಗುತ್ತಿದ್ದರೆ ಏನೂ ಅನ್ನುತ್ತಿರಲಿಲ್ಲ – ಅದು ಸಹಜ ಎನ್ನುವಂತೆ. ಅದಕ್ಕೆ ನನ್ನಲ್ಲಿ ಹಟ ಇನ್ನಷ್ಟು ಬೆಳೆಯುತ್ತಿತ್ತು. ಪ್ರತಿಯೊಂದರಲ್ಲೂ ಅಣ್ಣನೊಂದಿಗೆ ಪೈಪೋಟಿ ಮಾಡುತ್ತಿದ್ದೆ. ಅಣ್ಣನೆಂದರೆ ನನಗೆ ತುಂಬಾ ಇಷ್ಟ. ಅದಕ್ಕೇ ಅವನಂತೆ ವರ್ತಿಸಬೇಕೆಂದುಕೊಳ್ಳುತ್ತಿದ್ದೆ. ಅಣ್ಣನಂತೆ ನಾನು ಕೂಡ ಹೇತುವಾದ ಭಾವನೆಗಳಿಂದ ಪ್ರಭಾವಿತಳಾದೆ.

ವರದಕ್ಷಿಣೆ ತೆಗೆದುಕೊಳ್ಳುವುದೆಂದರೆ ಅಸಹ್ಯ ಆಗುತ್ತಿತ್ತು. ಅದಕ್ಕಿಂತ ದುರಾಚಾರ ಮತ್ತೊಂದಿಲ್ಲ ಎನಿಸುತ್ತಿತ್ತು. ವರದಕ್ಷಿಣೆ ಕೇಳುವವನನ್ನು ಮದುವೆ ಮಾಡಿಕೊಳ್ಳಬಾರದೆಂದು ನಿಶ್ಚಯಿಸಿದೆ. ಅಣ್ಣನ ಸ್ನೇಹಿತ ಭಾಸ್ಕರ ನನ್ನನ್ನು ಇಷ್ಟಪಟ್ಟಾಗ, ನನ್ನ ಷರತ್ತುಗಳ ಪ್ರಕಾರವೇ ಮದುವೆಗೆ ಅಂಗೀಕರಿಸಿದೆ. ಭಾಸ್ಕರ್ ತಾಯಿ ತಂದೆ ಸೌಮ್ಯವಂತರು, ನಿರಾಡಂಬರದ ಜನ. ಹಣವಂತರಲ್ಲ ನಮ್ಮ ಹಾಗೆ. ಆದರೂ ವರದಕ್ಷಿಣೆ ಕೇಳಲಿಲ್ಲ. ಮಗನ ಸಂತೋಷವೇ ಮುಖ್ಯ ಎಂದರು. ನಾವು ಸಾಂಪ್ರದಾಯಿಕವಾಗಲ್ಲದೆ, ನಿರಾಡಂಬರವಾಗಿ ರಿಜಿಸ್ಟರ್ ಮದುವೆ ಮಾಡಿಕೊಂಡೆವು. ನಾನು ಉದ್ಯೋಗ ಮಾಡುತ್ತೀನಿ ಎಂದರೆ ಅವರು ಎದುರು ಹೇಳಲಿಲ್ಲ. ನಮ್ಮ ಮದುವೆಯಾದ ಮೇಲೆ ಅವರೂ ನಮ್ಮ ಬಳಿಯೇ ಬಂದರು.

ಮೊದಲೇ ಹೆಣ್ಣು ಮಗು ಹುಟ್ಟಿತೆಂದು ಮನೆಯಲ್ಲಿ ಅವರಿಗೆ ಸ್ವಲ್ಪ ನಿರುತ್ಸಾಹವಾದುದನ್ನು ಗಮನಿಸಿ, ನಾನು ಸೃಜನಳ ಮೇಲೆ ಮತ್ತಷ್ಟು ಮಮಕಾರ ತೋರಿಸುತ್ತಿದ್ದೆ. ಅವಳನ್ನು ಗಂಡುಮಗನಂತೆಯೇ ಬೆಳೆಸಿದೆ. ಆದರೆ ಕಾಲೇಜಿಗೆ ಸೇರಿದ ಮೇಲೆ ಅವಳಲ್ಲಿ ನಾನು ಊಹಿಸದಿರುವಷ್ಟು ಬದಲಾವಣೆಗಳಾದವು. ಅಲಂಕರಿಸಿಕೊಳ್ಳುವುದರಲ್ಲಿ ಹೆಚ್ಚು ಆಸಕ್ತಿ ತೋರಿಸುತ್ತಿದ್ದಳು. ನನ್ನ ಬಳಿ ಹಣ ಪಡೆದು ಅವಳಿಗೆ ಬೇಕಾದ ಬಟ್ಟೆಬರೆ ಅವಳೇ ಕೊಳ್ಳುತ್ತಿದ್ದಳು. ಪಾರ್ಟಿಗಳು, ಹಬ್ಬಗಳು ಅಂದರೆ ಉತ್ಸಾಹದಿಂದಿರುತ್ತಿದ್ದಳು. ಆಡಂಬರವಾಗಿ ತಯಾರಾಗುತ್ತಿದ್ದಳು. ಬೇಡ ಅಂದರೆ ಗಲಾಟೆ ಮಾಡುತ್ತಿದ್ದಳು. ಅವಳು ತೆಗೆದುಕೊಳ್ಳುತ್ತಿದ್ದ ಪಾಕೆಟ್‌ಮನಿ ಕೂಡ ಜಾಸ್ತೀನೇ. ಎಂ.ಬಿ.ಎ. ಮಾಡಿಸೋಣ ಎಂದು ನಾವಂದುಕೊಂಡರೆ ತಾನು ಹೋಂಸ್ಟೈನ್ಸ್ ಓದುತ್ತೇನೆಂದು ಪಟ್ಟುಹಿಡಿದಳು. ಅವಳ ಯಾವ ಮಾತಿಗೂ ಬೇಡ ಅನ್ನದಿರುವಷ್ಟು ಬಲಹೀನತೆ ಏರ್ಪಟ್ಟಿತು ನನ್ನಲ್ಲಿ. ಅವಳ ಕೋರಿಕೆಯನ್ನು ತೀರಿಸಲು ಮನೆಯಲ್ಲಿ ಯಾರು ಅಭ್ಯಂತರ ಮಾಡಿದರೂ, ಮೊದಲು ನಾನೇ ಸುಮ್ಮನಿರುತ್ತಿರಲಿಲ್ಲ. ಆ ಬಲಹೀನತೆ ಈಗ ನನ್ನ ಕತ್ತು ಬಿಗಿಹಿಡಿದಿದೆ.

*ಮುಖ್ಯವಾಗಿ, ಅಮ್ಮ ಆ ಪಕ್ಷಪಾತ ಹೆಚ್ಚಾಗಿ ಮಾಡುತ್ತಿದ್ದಳು. 'ಅವನು ಗಂಡು ಹುಡುಗ, ನೀನು ಹೆಣ್ಣು ಹುಡುಗಿ' ಎನ್ನುತ್ತ, ಊಟ ಆದ ಮೇಲೆ ತಟ್ಟೆ ತೆಗಿ ಎನ್ನುತ್ತಿದ್ದಳು ನನಗೆ. ಅಣ್ಣ ಕೈ ತೊಳೆದು ಹೊರಟುಹೋಗುತ್ತಿದ್ದರೆ ಏನೂ ಅನ್ನುತ್ತಿರಲಿಲ್ಲ – ಅದು ಸಹಜ ಎನ್ನುವಂತೆ. ಅದಕ್ಕೆ ನನ್ನಲ್ಲಿ ಹಟ ಇನ್ನಷ್ಟು ಬೆಳೆಯುತ್ತಿತ್ತು. ಪ್ರತಿಯೊಂದರಲ್ಲೂ ಅಣ್ಣನೊಂದಿಗೆ ಪೈಪೋಟಿ ಮಾಡುತ್ತಿದ್ದೆ. ಅಣ್ಣನೆಂದರೆ ನನಗೆ ತುಂಬಾ ಇಷ್ಟ. ಅದಕ್ಕೇ ಅವನಂತೆ ವರ್ತಿಸಬೇಕೆಂದುಕೊಳ್ಳುತ್ತಿದ್ದೆ. ಅಣ್ಣನಂತೆ ನಾನು ಕೂಡ ಹೇತುವಾದ ಭಾವನೆಗಳಿಂದ ಪ್ರಭಾವಿತಳಾದೆ.*

ಒಬ್ಬ ಸ್ನೇಹಿತನ ಮಗಳ ಮದುವೆಗೆ ಹೋದಾಗ, ಅವರ ಬಂಧುಗಳು ಅಮೆರಿಕಾದಿಂದ ಬಂದವರು ಸೃಜನಳನ್ನು ನೋಡಿ ಇಷ್ಟಪಟ್ಟರು. ಪಕ್ಕಾ ತೆಲುಗಿನ ಹೆಣ್ಣುಮಗಳಂತೆ ಅಲಂಕರಿಸಿಕೊಂಡ ಸೃಜನ ಅವರಿಗೆ ಎಲ್ಲ ರೀತಿಯಲ್ಲೂ ಮೆಚ್ಚುಗೆಯಾದಳು. ಅವರ ಮಗನಿಗೆ ಮಾಡಿಕೊಳ್ಳುವ ಉದ್ದೇಶದಿಂದ ಹೇಳಿ ಕಳುಹಿಸಿದ್ದರು. ಹುಡುಗಿಯನ್ನು ನೋಡಲು ಬರುವುದಾಗಿ ತಿಳಿಸಿದರು. ಆ ಹುಡುಗ ಎತ್ತರ ಇದ್ದು, ಸೃಜನಳಿಗೆ ಈಡು ಜೋಡಿಯಾಗಿದ್ದ. ಬೇಡವೆನ್ನಲು ಕಾರಣ ಕಾಣಿಸಲಿಲ್ಲ. ಅವಳ ವ್ಯಾಸಂಗ ಮುಗಿಯಲು ಇನ್ನೂ ಕೆಲವು ತಿಂಗಳುಗಳು ಬೇಕಾಗಿತ್ತು. ಆ ವಿಷಯಕ್ಕಾಗಿ ಸಂಕೋಚಿಸಿದೆವು ಅಷ್ಟೆ. ಅವರು 'ನಮ್ಮವರೇ', ಕೈಗೆ ಬಂದ ಸಂಬಂಧ ಬೇರೆ. ಅಮೆರಿಕಾದಲ್ಲಿ ಮೂವತ್ತು ವರ್ಷಗಳಿಂದ ಇದ್ದರೂ ತೆಲುಗು ಭಾಷೆಯನ್ನು ತೆಲುಗುತನವನ್ನು ಮರೆತಿಲ್ಲ. ಹುಡುಗ ಮುತ್ತಿನಂತೆ ಇದ್ದಾನೆ ಎಂದೆಲ್ಲಾ ಸಂತೋಷಿಸಿದರು ನಮ್ಮ ಅತ್ತೆ ಮಾವ.

ಸಂಪ್ರದಾಯದ ಪ್ರಕಾರ ಹುಡುಗಿಯನ್ನು ನೋಡಲು ಅವರು ತಿಥಿ ವಾರ ನಕ್ಷತ್ರ ನೋಡಿ ಇಂತಹ ದಿನ ಇಂತಹ ಟೈಮಿಗೆ ಬರುತ್ತೇವೆಂದು ತಿಳಿಸಿದರು. ನಮ್ಮ ಅತ್ತೆಯವರು ಟಿಫನ್ ಇತ್ಯಾದಿ ಏರ್ಪಾಟು ನೋಡಿಕೊಂಡರು. ಸೃಜನ ಒಳ್ಳೆ ರೇಷ್ಮೆ ಸೀರೆ ಉಟ್ಟು ಒಡವೆ ಹಾಕಿಕೊಂಡು, ಹೂವು ಮುಡಿದು ರೆಡಿಯಾದಳು.

''ಅದೇನೇ, ಸಿನಿಮಾದಲ್ಲಿ ಮದುವಣಗಿತ್ತಿಯಂತೆ ತಯಾರಾಗಿದ್ದೀಯ ?'' ಎಂದೆ ಅವಳ ವೇಷ ನೋಡಿ.

''ಚೆನ್ನಾಗಿ ಮದುವೆ ಕಳೆ ಉಕ್ಕಿ ಹರಿಯುತ್ತಿದ್ದರೆ ಹಾಗೆ ಅನ್ನುತ್ತೀಯಲ್ಲ ?'' ಎಂದರು ನಮ್ಮ ಅತ್ತೆಯವರು.

ಹುಡುಗನ ಅಮ್ಮ ಕೂಡ ಅಗಲವಾದ ಜರಿ ಅಂಚಿನ ಕಂಚಿ ರೇಷ್ಮೆ ಸೀರೆ ಉಟ್ಟು ಕತ್ತಿನ ತುಂಬಾ ಒಡವೆ ಹಾಕಿಕೊಂಡು ಬಂದರು. ನಾನು ಜರಿ ಇಲ್ಲದ ಪೋಚಂಪಲ್ಲಿ ಸೀರೆ ಉಟ್ಟುಕೊಂಡೆ. ತಿಂಡಿ, ಕಾಫಿ ಆದ ಮೇಲೆ ಅಂತರ ರಾಷ್ಟ್ರೀಯ ಪರಿಸ್ಥಿತಿ, ಅಮೆರಿಕಾದಲ್ಲಿನ ಚುನಾವಣೆ, ಜಾಗತೀಕರಣದ ಫಲಿತಾಂಶಗಳು – ಎಲ್ಲ ವಿಷಯಗಳ ಕುರಿತು ಸ್ವಲ್ಪಹೊತ್ತು ಮಾತನಾಡಿದರು. ನಮ್ಮ ಅಭಿಪ್ರಾಯಗಳೂ ಅವರದೂ ಅಷ್ಟಾಗಿ ಹೊಂದಲಿಲ್ಲ. ಹುಡುಗನ ತಂದೆ ಬುಷ್‌ನನ್ನು ಸಮರ್ಥಿಸುತ್ತಿದ್ದರೆ ಭಾಸ್ಕರ್ ವಿಮರ್ಶಿಸಿ ಅದನ್ನು ಸಂಯಮದಿಂದಲೇ ವಿರೋಧಿಸಿದರು.

ನಾನು ಕೂಡ ಏನೋ ಹೇಳಹೊರಟರೆ, ಹುಡುಗನ ತಾಯಿ ಮಧ್ಯೆ ಪ್ರವೇಶಿಸಿ, ಮಗನನ್ನು ಉದ್ದೇಶಿಸಿ, "ಶ್ರೀಕಾಂತ್, ನೀನು ಆ ಹುಡುಗಿ ಜೊತೆ ಏನಾದರೂ ಮಾತನಾಡುತ್ತೀಯಾ ?'' ಎಂದರು. ಆ ಸೂಚನೆಯನ್ನು ಅರಿತು, ''ಸೃಜನಾ, ನೀವಿಬ್ಬರೂ ಮಹಡಿ ಮೇಲೆ ಹೋಗಿ ನಿನ್ನ ರೂಮಿನಲ್ಲಿ ಕುಳಿತು ಮಾತನಾಡಿಕೊಳ್ಳಿ'' ಎಂದೆ. ಇಬ್ಬರೂ ಸಂತೋಷವಾಗಿ ಎದ್ದು ಹೊರಟರು.

ಅಮೆರಿಕಾ ಬಗೆಗಿನ ಹೊಗಳಿಕೆಯನ್ನು ಪಕ್ಕಕ್ಕೆ ಇಟ್ಟು, ಮದುವೆ ವ್ಯವಹಾರಕ್ಕೆ ಇಳಿದರು ಆಕೆ.

''ನಮ್ಮ ಮಗನಿಗೆ ನಿಮ್ಮ ಹುಡುಗಿ ಇಷ್ಟವಾಗಿದ್ದಾಳೆ. ನಿಮ್ಮ ಮಗಳಿಗೆ ಕೂಡ ಅವನು ಇಷ್ಟವಾದಂತೆಯೇ ಇದೆ. ಮದುವೆ ಮುಹೂರ್ತ ಯಾವಾಗ ಇಟ್ಟುಕೊಂಡರೂ, ಮೊದಲು ಅಗತ್ಯ ವಿಷಯಗಳನ್ನು ಮಾತನಾಡಿಕೊಂಡರೆ ಚೆನ್ನಾಗಿರುತ್ತದೆ ಅಲ್ವಾ'' ಎಂದರು.

''ಹಾಗೇ ಆಗಲಿ, ಹೇಳಿ'' ಎಂದೆ ಉತ್ಸಾಹದಿಂದ.

''ನಾವು ಮೂರು ದಶಕಗಳಿಂದಲೂ ಅಮೆರಿಕಾದಲ್ಲಿದ್ದರೂ, ನಮ್ಮ ಸಂಸ್ಕೃತೀನ ದೂರ ಮಾಡಿಕೊಂಡಿಲ್ಲ. ಮದುವೆ ಸಾಂಪ್ರದಾಯಿಕವಾಗಿ ಯಥಾವಿಧಿಯಂತೆ ಮಾಡಿಕೊಡಬೇಕೆಂದು ನಮ್ಮ ಕೋರಿಕೆ. ನಮಗೆ ಇರುವವನು ಅವನು ಒಬ್ಬನೇ. ನಮ್ಮವರು ನಮ್ಮ ಆಚಾರಗಳೆಲ್ಲವನ್ನು ಮರೆತು ಹೋಗಿದ್ದಾರೆ. ಅವುಗಳನ್ನು ಇಂದಿನವರಿಗೆ ತಿಳಿದು ಹೇಳುವ ಅಗತ್ಯ ನಮಗಿದೆಯಲ್ಲವೇ'' ಎಂದರು ಆಕೆ.

ವಾದ ಯಾಕೆ ಬೇಕು ಅಂತ ''ಹೌದು'' ಎಂದೆ.

ಆಕೆ ಮುಂದುವರಿಸಿದರು : ''ಈ ಮಧ್ಯೆ ಇಂಡಿಯಾದಲ್ಲಿ ಮದುವೆಗಳು ಆಧುನಿಕತೆ ಹೆಸರಿನಲ್ಲಿ ಇಷ್ಟಬಂದಂತೆ ಮಾಡುತ್ತಿದ್ದಾರೆ. ಎಲ್ಲಿಯೂ ತೆಲುಗುತನ ಕಾಣಿಸುತ್ತಿಲ್ಲ. ಷಾಮಿಯಾನಗಳು ಹಾಕಿ ಬಫೆ ಡಿನ್ನರ್‌ಗಳು ಕೊಡುವುದು, ಉತ್ತರ ದೇಶದ ಭೋಜನ ಪದಾರ್ಥಗಳನ್ನು ಮಾಡಿಸುವುದು, ಅರ್ಧಗಂಟೆ, ನಲವತ್ತು




ಬೆಕ್ಕೆಂದರೆ ನನಗೆ ತುಂಬಾ ಪ್ರೀತಿ
ಅದನ್ನೆತ್ತಿಕೊಂಡು ಮುದ್ದಿಸುತ್ತಿದ್ದೆ
ಮೈದಡವುತ್ತಿದ್ದೆ
ಅಪ್ಪಿಕೊಳ್ಳುತ್ತಿದ್ದೆ
ಅಷ್ಟೇ ಅಲ್ಲ ಪೂಜಿಸುತ್ತಿದ್ದೆ!

ಒಂದು ದಿನ ಅದು
ಕದ್ದು ಹಾಲು ಕುಡಿಯುತ್ತಿತ್ತು
ನೋಡಿದೆ
ಸಿಟ್ಟು ನೆತ್ತಿಗೇರಿತು
ಮೂಲೆಯಲ್ಲಿದ್ದ ಪೊರಕೆ
ಎತ್ತಿಕೊಂಡು
ಇನ್ನೇನು ಬಡಿಯಬೇಕೆನ್ನುವಷ್ಟರಲ್ಲಿ
ಎಲ್ಲಿಯೋ ತಪ್ಪಿಸಿ
ಓಡಿ ಹೋಯಿತು.

ಅಂದು ರಾತ್ರಿಯಿಡೀ ಕನಸು
'ಮಠದೊಳಗಣ ಬೆಕ್ಕು ಇಲಿಯ ಕಂಡು
ಪುಟನೆಗೆದಂತೆ'!

ಬಳಿಕ ಬೆಕ್ಕ ಕಂಡರೆ
ನನಗೆ ಆಗುವುದೇ ಇಲ್ಲ
ಯಾವಾಗ ಅದು ಸಿಗುವುದೋ ಎಂದು
ಕಾಯುತ್ತಲೇ ಇದ್ದೆ

ಮೊನ್ನೆ ಮೊನ್ನೆ ರಾತ್ರಿ ಬೆಳಗಾಗುವುದರೊಳಗೆ
ಅದು ಪೊಲೀಸರ ಕೈಗೆ
ಸಿಕ್ಕಿ ಬಿತ್ತು.

ಇದೀಗ ಬೆಕ್ಕು
ಕಂಬಿ ಎಣಿಸುತ್ತಿದೆ.
ನನಗೆ ಖುಷಿಯೋ ಖುಷಿ!

**ರಘು ಇಡ್ಕಿದು**
ಉಪನ್ಯಾಸಕರು
ಕೆನರಾ ಪದವಿ ಪೂರ್ವ ಕಾಲೇಜು
ಮಂಗಳೂರು - ೫೭೫೦೦೩

ನಿಮಿಷಗಳಲ್ಲಿ ಹರಕೆಯಂತೆ ಮದುವೆ ಆಯಿತೆನ್ನಿಸುವುದು ಎಲ್ಲ ಮಾಡುತ್ತಿದ್ದಾರೆ ಕೆಲವರು. ನಮಗೆ ಅದೆಲ್ಲಾ ಇಷ್ಟ ಇಲ್ಲಾರೀ. ಇರುವವನು ಒಬ್ಬ. ಅವನ ಮದುವೆ ಚೆನ್ನಾಗಿ, ಲಕ್ಷಣವಾಗಿ ನಡೀಬೇಕು. ಪಾನಕ ಬಿಂದಿಗೆ ಗಳೊಂದಿಗೆ ಎದುರುಗೊಳ್ಳುವುದು ಮೊದಲ್ಗೊಂಡು ಹೆಣ್ಣು ಒಪ್ಪಿಸುವವರೆಗೂ ಎಲ್ಲವೂ ಸಲಕ್ಷಣವಾಗಿ ಮಾಡಿಕೊಡಬೇಕು. ಅಲ್ಲಿನ ಬಂಧುಮಿತ್ರರಿಗೆಲ್ಲ ವಿಡಿಯೋ ತೋರಿಸುವುದಕ್ಕೆ ಚೆನ್ನಾಗಿರುತ್ತೆ ಅಲ್ವಾ ?'' ಎಂದರು.

ಇದೆಲ್ಲ ನನಗೆ ಇಬ್ಬಂದಿತನ ಅನಿಸಿದರೂ ಕಿರುನಗೆ ಬೀರಿ ಸುಮ್ಮನಾದೆನು, ಮನಸ್ಸಿನಲ್ಲಿ ''ನೋಡೋಣ'' ಎಂದುಕೊಂಡು.

ಭಾಸ್ಕರ್ ಮಧ್ಯೆ ಪ್ರವೇಶಿಸಿ, '' ಇದುವರೆಗೂ ನಮ್ಮ ಮನೆಯಲ್ಲಿ ಮದುವೆಗಳು ಬಹಳ ನಿರಾಡಂಬರವಾಗಿ ನಡೆದಿವೆ. ಆ ಪದ್ಧತಿಗಳೆಲ್ಲ ನಮಗೆ ಅಭ್ಯಾಸ ತಪ್ಪಿ ಹೋಗಿದೆ. ಉಡುಗೊರೆ ಯಾವ ವಿಧದಲ್ಲಿ ನಡೆಸಿ ಕೊಡಬೇಕು ನೀವೇ ಹೇಳಿ'' ಎಂದರು. ಶ್ರೀಕಾಂತ್ ತಂದೆ ಹೆಂಡತಿ ಕಡೆ ನೋಡಿದರು ''ನೀನೇ ಹೇಳು'' ಎನ್ನುವಂತೆ.

ಆಗ ಆಕೆ ವಿವರಗಳು ಹೇಳಲು ಮೊದಲು ಮಾಡಿದಳು – ಬೆಳ್ಳಿ ಪಾನಕ ಬಿಂದಿಗೆಗಳು, ಬೆಳ್ಳಿ ಕುಂಕುಮ ಬಟ್ಟಲುಗಳು, ಮದುವೆ ಗಂಡಿಗೆ ವಜ್ರದುಂಗುರ, ಕತ್ತಿಗೆ ಸಣ್ಣ ಚೈನು, ಅತ್ತೆಗೆ, ಹೆಣ್ಣು ಮಗಳಿಗೆ ಸಂದರ್ಭಕ್ಕೆ ತಕ್ಕ ಜರಿ ಅಂಚಿನ ಕಂಚಿ ರೇಷ್ಮೆ ಸೀರೆಗಳು, ಮದುಮಗಳಿಗೆ ಚಂದ್ರಹಾರ, ಡಾಬು, ಕೈಗೆ ವಂಕಿಗಳು, ಕಂಕಣಗಳು, ವಜ್ರದ ಓಲೆ, ವಿವಾಹ ಮಂಟಪ ಅಲಂಕಾರ, ಬೀಗರ ಊಟಕ್ಕೆ ಇರಬೇಕಾದ ಪದಾರ್ಥಗಳು ಎಲ್ಲವನ್ನು ಹೇಳಿದ್ದರು. ನನಗೆ ಜ್ಞಾನ ತಪ್ಪಿತು. ನಮ್ಮ ಅಜ್ಜಿ ಹೇಳಿದ ತನ್ನ ಮದುವೆ ವಿಶೇಷಗಳು ನೆನಪಿಗೆ ಬಂದಿತು ನನಗೆ !

ನಾನೂ ಭಾಸ್ಕರ್ ಮೌನವಾಗಿರುವುದನ್ನು ನೋಡಿ, ಶ್ರೀಕಾಂತ್ ತಂದೆ ಹೆಂಡತಿಯನ್ನು ಸಮರ್ಥಿಸಿ ಕೊಳ್ಳುತ್ತಾ, ''ಇವೆಲ್ಲ ನಮ್ಮ ಸಂಸ್ಕೃತಿಯನ್ನು ಉಳಿಸ ಬೇಕೆಂಬ ತವಕದಿಂದಲೇ. ನಾವು ಮದುವೆಗೆ ಮತ್ತೆ ಬರಬೇಕಲ್ಲವಾ ಅಷ್ಟು ದೂರದಿಂದ! ವಾಪಸ್ಸು ಹೋಗುವುದಕ್ಕೆ ಇಲ್ಲೇ ನೀವು ಪ್ರಯಾಣದ ಏರ್ಪಾಟು ಗಳನ್ನು ಮಾಡಿದರೆ ಚೆನ್ನಾಗಿರುತ್ತೆ'' ಎಂದರು ಬಹಳ ನಿಧಾನವಾಗಿ.

ನಾನೂ ಭಾಸ್ಕರ್ ಮುಖಾಮುಖಿ ನೋಡಿ ಕೊಂಡೆವು.

ಮಧ್ಯದಲ್ಲಿ ನಮ್ಮ ಅತ್ತೆಯವರು, ''ಅಮೆರಿಕಾ ದಲ್ಲಿದ್ದರೂ, ನಮ್ಮ ಸಂಸ್ಕೃತಿಯನ್ನು ಉಳಿಸಬೇಕೆಂದು ಇಷ್ಟು ಶ್ರದ್ಧೆಯಾಗಿ ಆಲೋಚಿಸುತ್ತಿರುವುದಕ್ಕೆ ಸಂತೋಷವಾಗಿದೆಯಮ್ಮಾ'' ಎಂದರು.

ನಮ್ಮ ಮಾವನವರು ನ್ಯೂಸ್‌ಪೇಪರ್ ನೋಡುತ್ತಾ ಕುಳಿತರು.

ಮಕ್ಕಳಿಬ್ಬರೂ ಮಹಡಿಯಿಂದ ಇಳಿದುಬಂದರು. ಇಬ್ಬರೂ ಪ್ರಸನ್ನವಾಗಿ ಇದ್ದಾರೆ. ಈ ಬಾರಿ ಸೋಫಾದಲ್ಲಿ ಪಕ್ಕಪಕ್ಕದಲ್ಲೇ ಕುಳಿತುಕೊಂಡರು. ಇನ್ನು ಹಸೆಮಣೆ ಮೇಲೆ ಕೂತುಕೊಳ್ಳೋದೊಂದು ಬಾಕಿ ಎನ್ನುವಂತಿತ್ತು



ಮುಂದೆ 'ವಿಧಾನಸೌಧ' ವನ್ನೇ ಮಠದವರು ಕೇಳಿದ್ರೆ ಆಗೇನ್ರೀ ಮಾಡೋದು ?!

ಅವರ ವರಸೆ.

''ಏನಮ್ಮಾ, ನಮ್ಮ ಹುಡುಗ ಇಷ್ಟವಾದನಾ ?'' ಎಂದು ಕೇಳಿದರು ಶ್ರೀಕಾಂತ್ ತಾಯಿ.

ಸೃಜನ ಕೆನ್ನೆ ಮೇಲೆ ಗುಳಿ ಬೀಳುವಂತೆ ನಕ್ಕಳು.

''ಇನ್ನು ಹೋಗಿಬರುತ್ತೇವೆ. ಮಿಕ್ಕ ವಿವರಗಳನ್ನು ನಂತರ ಮಾತನಾಡಿಕೊಳ್ಳೋಣ'' ಎನ್ನುತ್ತಾ ಸೋಫದಿಂದ ಎದ್ದರು ಶ್ರೀಕಾಂತ್ ತಾಯಿ. ಎಲ್ಲರೂ ಎದ್ದುನಿಂತೆವು. ಅವರನ್ನು ಗೇಟ್‌ವರೆಗೂ ಸಾಗಹಾಕಿ ಒಳಗೆ ಬಂದೆವು.

ಸೃಜನಳಲ್ಲಿ ಉತ್ಸಾಹ ಉಕ್ಕಿ ಹರಿಯುತ್ತಿರುವಂತಿದೆ. ''ಹಿ ಈಸ್ ಸಚ್ ಎ ಚಾರ್ಮಿಂಗ್ ಫೆಲೋ !'' ಎಂದಳು ನಾವು ಕೇಳುವ ಮೊದಲೇ.

''ನಿನಗೆ ತುಂಬಾ ಹಿಡಿಸಿದ ಎಂದಾಯಿತು !'' ಎಂದರು ಭಾಸ್ಕರ್.

''ಆಫ್‌ಕೋರ್ಸ್ !'' ಎಂದಳು ಸೃಜನ.

''ಆದರೆ............'' ಎಂದು ಅಷ್ಟಕ್ಕೆ ಮಾತು ನಿಲ್ಲಿಸಿದೆ.

''ಏನು ?'' ಎನ್ನುವಂತೆ ಎಲ್ಲರೂ ನನ್ನ ಕಡೆ ಆಚ್ಚರಿಯಿಂದ ನೋಡಿದರು.

''ಅವರು ಒಂದು ಥರಾ ನಿಧಾನಸ್ಥರಂತೆ, ದುರಾಸೆ ಕೋರರಂತೆ ಕಾಣಿಸುತ್ತಾರೆ'' ಎಂದೆ.

''ಅದೇನಮ್ಮಾ, ಅವರು ಅಮೆರಿಕಾದಲ್ಲಿದ್ದಾರೆ. ಅವರಿಗೆ ನಿಧಾನ ಏನು! ದುರಾಸೆಗಾರರಾಗಿ ಇರುವುದಕ್ಕೆ ಅವರಿಗೇನು ಕಡಿಮೆ !'' ಎಂದಳು ಸೃಜನ ಕೂಡಲೇ ಅವರನ್ನು ಸಮರ್ಥಿಸುತ್ತಾ.

''ಏನೋ, ಮದುವೆ ಸ್ವಲ್ಪ ಅದ್ದೂರಿಯಾಗಿ, ಅವರ ಅಂತಸ್ತಿಗೆ ತಕ್ಕಂತೆ ಘನವಾಗಿ ನಡೆಸಬೇಕೆಂದು ಕೋರಿ ಕೊಳ್ಳುತ್ತಿದ್ದಾರೇನೋ'' ಎಂದರು ಅತ್ತೆಯವರು.

''ಅದಿರಲಿ, ನಮ್ಮ ಮದುವೆ ಎಷ್ಟು ನಿರಾಡಂಬರ ವಾಗಿ, ಅಭ್ಯುದಯಕರವಾಗಿ ನಡೆಯಿತು. ನಿಮಗೆ ಗೊತ್ತಿಲ್ಲವಾ ? ಇವರು ಕೇಳಿದಷ್ಟು ಆಡಂಬರವಾಗಿ ಮದುವೆ ಮಾಡಿ ನಮಗೆ ಇಲ್ಲದಿರೋ ಅಂತಸ್ತನ್ನು ದೊಡ್ಡದು ಮಾಡಿ ಊರಿಗೆಲ್ಲಾ ಸಾರಬೇಕಾ ?'' ಎಂದೆ.

''ಏನು, ನಾವು ಅಷ್ಟು ಇಲ್ಲದೆ ಇರೋವರಾ ?'' ಎದುರು ಪ್ರಶ್ನೆ ಹಾಕಿದಳು ಸೃಜನ.

''ಅಮೆರಿಕದಲ್ಲಿ ಇದ್ದು ಉದ್ಯೋಗ ಮಾಡುತ್ತಿರುವ ಆ ಮದುವೆ ಹುಡುಗ ಏನೂ ಗೊತ್ತಿಲ್ಲದವನಂತೆ ವರೋಪಚಾರ ವಿಷಯ ತಂದೆತಾಯಿಗಳ ಮೇಲೆ ಹಾಕಿ ಬಿಡುವುದೇನು ? ಅಮೆರಿಕಕ್ಕೆ ಹೋಗಿ ಏನು ಅಭ್ಯುದಯ ಸಾಧಿಸಿದನಂತೆ !'' ಎಂದೆ ಮೈ ಉರಿದು.

ಕೂಡಲೇ ಕೋಪದಿಂದ ''ನಿನ್ನ ಅರ್ಥಹೀನ ಭಾವನೆಗಳಿಂದ ನನ್ನನ್ನು ಕೊಲ್ಲಬೇಡ !'' ಎಂದಳು ಸೃಜನ.

''ಅಲ್ಲವೇ''... ಎಂದು ನಾನು ವಿವರಿಸಿ ಹೇಳುವಷ್ಟರಲ್ಲಿ ಸೃಜನ ''ಶ್ರೀಕಾಂತ್ ಅಸಲು ಎಷ್ಟು ಆಸೆ ಪಡುತ್ತಿದ್ದಾರೆ ಗೊತ್ತಾ - ಸಾಂಪ್ರದಾಯಿಕವಾಗಿ ಮದುವೆ ಮಾಡಿಕೊಳ್ಳಬೇಕೂಂತ ! ಯಾವ ಚಿಕ್ಕ ಆಚಾರವನ್ನೂ ಬಿಡದೆ ಗ್ರಾಂಡಾಗಿ ಮಾಡಿಕೊಳ್ಳಬೇಕು ಎನ್ನುತ್ತಿದ್ದಾನೆ'' ಎಂದಳು.

ಮೊದಲಬಾರಿ ಸೃಜನಳನ್ನು ಖಂಡಿಸುತ್ತಾ ''ಆಸೆ ಪಟ್ಟರೆ ಸರಿಹೋಗುತ್ತಾ? ಅವರಮ್ಮ ಹೇಳಿದ್ದೆಲ್ಲ ಮಾಡಬೇಕೆಂದರೆ ಎಷ್ಟು ಲಕ್ಷಗಳಾಗುತ್ತವೆ ಗೊತ್ತಾ? ಆದರೂ, ಏಕೆ ಆ ಅನಗತ್ಯ ಖರ್ಚುಗಳು !'' ಎಂದೆ.

''ಏನಮ್ಮಾ ಹಾಗೆ ಲೆಕ್ಕ ಹಾಕುತ್ತಿದ್ದೀಯ! ನೀವಿಬ್ಬರೂ ಸಂಪಾದಿಸುವುದೆಲ್ಲ ಯಾರಿಗಾಗಿ ? ಅಮೆರಿಕದ ಸಂಬಂಧ ಎಂದರೆ ಸಾಮಾನ್ಯಾನಾ !'' ಎಂದಳು ಸೃಜನ.

ಅಮೆರಿಕ ಎಂದರೆ ಎಷ್ಟು ಮೋಜು ! ಮೇಲಾಗಿ ಮನಸ್ಸಿನಲ್ಲಿ ಬೆಳೆಯುತ್ತಿರುವ ಸಂಪ್ರದಾಯದ ಒಲವು !

ಹಿಂದೊಮ್ಮೆ ನಾನು ನನ್ನ ತಂದೆತಾಯಿಯನ್ನು ಎದುರಿಸಿ ಮಾತನಾಡಿದ್ದೆ. ದೊಡ್ಡವರ ಮಾತನ್ನು ಕೇಳದೆ, ನನ್ನ ಹಕ್ಕುಗಳಿಗಾಗಿ ಹೋರಾಡಿದ್ದೆ. ಆದರೆ, ಆ ಹೋರಾಟದ ಹಿಂದೆ ಸ್ವಾಭಿಮಾನ ಇತ್ತು. ಆರ್ಥಿಕವಾಗಿ ಯಾರ ಮೇಲೂ ಹೊರೆಯಾಗಬಾರದು ಎಂಬ ದೃಷ್ಟಿಕೋನ ಇತ್ತು. ತಂದೆತಾಯಿಯರ ಬಳಿ ಖರ್ಚು ಮಾಡಿಸಬೇಕೆಂದರೆ ಮನಸ್ಸು ಮುದುಡಿಕೊಳ್ಳುತ್ತಿತ್ತು. ಆಡಂಬರದಿಂದ ಜೀವಿಸುವುದು ಅಮಾನವೀಯತೆ ಅನ್ನಿಸುತ್ತಿತ್ತು. ಮದುವೆ ಒಂದು ಸಂಭ್ರಮವೆ ಅಲ್ಲ, ಬಾಧ್ಯತೆ ಎನಿಸುತ್ತಿತ್ತು.

ಇವರ ಮದುವೆ ಸಂಭ್ರಮ ಮೂರು ದಿನಕ್ಕೆ ಮುಗಿಯುವುದಿಲ್ಲ ಎಂಬ ನಂಬಿಕೆ ಏನಿದೆ ? ಸೃಜನ ಎಲ್ಲರಂತೆಯೇ ಇಂದಿನ ಧನ ಸಂಸ್ಕೃತಿಗೆ ಬಲಿಯಾಗುತ್ತಿದ್ದಾಳೆಂಬ ಬಾಧೆ ಹತ್ತಿತ್ತು.

ಈ ಯುವ ಜನತೆಯನ್ನು ವಸ್ತು ವ್ಯಾಮೋಹದಿಂದ, ಆಡಂಬರಗಳಿಂದ ಹೇಗೆ ಹೊರಬರುವಂತೆ ಮಾಡಬೇಕು ? ಈಗಲೂ ಈ ಪ್ರಶ್ನೆಗೆ ಉತ್ತರ ಹುಡುಕುತ್ತಲೇ ಇದ್ದೇನೆ.

ಕನ್ನಡಕ್ಕೆ : ಎಂ. ಜಿ. ಶುಭಮಂಗಳ
[illegible]
[illegible]
ಗೋಕುಲ ಮೊದಲನೇ ಹಂತ, ಬೆಂಗಳೂರು - ೫೬೦ ೦೫೪

# ಪಲ್ಲಟ

ರಾಜಣ್ಣನ ಮನಸ್ಸು ವ್ಯಗ್ರಗೊಂಡಿತ್ತು. ಧೋ ಎಂದು ಸುರಿಯುತ್ತಿದ್ದ ಮಳೆಯ ಅಬ್ಬರದಂತೆ ಮನಸ್ಸು ಹೊಯ್ದಾಡುತ್ತಿತ್ತು. ತನ್ನ ಸಣ್ಣ ಪೆಟ್ಟಿಗೆ ಅಂಗಡಿಯೊಳಗೆ ಪಟಪಟನೆ ಹನಿಯುತ್ತಿದ್ದ ನೀರು ರಾಜಣ್ಣನಿಗೆ ಸುನಾಮಿಯ ಅಲೆಗಳಂತೆ ತೋರುತ್ತಿತ್ತು. ಎಂದೋ ಇಪ್ಪತ್ತು ವರ್ಷಗಳ ಹಿಂದೆ ತನ್ನೂರಿನಲ್ಲಿ ಇಂತಹ ಮಳೆ ನೋಡಿದ್ದ ರಾಜಣ್ಣನಿಗೆ ಒಂದು ವಾರದಿಂದಲೂ ಎಡೆಬಿಡದೆ ಹೊಯ್ಯುತ್ತಿದ್ದ ಈ ಕುಂಭದ್ರೋಣ ಮಳೆ ಒಂದು ಹೊಸ ಅನುಭವವೇ. ಸೋರುತ್ತಿದ್ದ ತನ್ನ ಅಂಗಡಿಯನ್ನು ರಿಪೇರಿ ಮಾಡಿಸಲೂ ರಾಜಣ್ಣನಿಗೆ ಮನಸ್ಸಿರಲಿಲ್ಲ. ಯಾವುದೇ ವಸ್ತು ನಮ್ಮ ಕೈಬಿಟ್ಟು ಹೋಗುವುದು ಖಚಿತವಾದಾಗ ಅದರ ಬಗ್ಗೆ ಒಂದು ರೀತಿ ನಿರ್ಲಿಪ್ತತೆ ಅಥವಾ ನಿರ್ಲಕ್ಷ್ಯ ಮೂಡುವುದು ಸಹಜವೇ ಎಂದು ಮನದಲ್ಲೇ ನೆನೆದ ರಾಜಣ್ಣ ಎಫ್. ಎಂ. ನಲ್ಲಿ ಗುನುಗುನಿಸುತ್ತಿದ್ದ ಹಾಡಿಗೆ ಮನದಲ್ಲೇ ತಾಳ ಹಾಕುತ್ತ ನಡೆದು ಬಂದ ಹಾದಿಯನ್ನು ಮೆಲುಕುಹಾಕುತ್ತಾ ಕುಳಿತ.

* * *

ಇಪ್ಪತ್ತು ವರ್ಷಗಳಾಯಿತು ರಾಜಣ್ಣ ಈ ಸಣ್ಣ ಅಂಗಡಿಯಲ್ಲಿ ಕುಳಿತು. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಫೇಲಾಗಿ ಪರಿತಪಿಸುತ್ತಿದ್ದ ರಾಜಣ್ಣನಿಗೆ ತಂದೆಯ ಆಕಸ್ಮಿಕ ಸಾವಿಗಿಂತಲೂ, ಅವರು ಬಿಟ್ಟುಹೋದ ಸಾಂಸಾರಿಕ ಜವಾಬ್ದಾರಿ ಸಹಿಸಲಸಾಧ್ಯವಾಗಿತ್ತು. ಬಾಲ್ಯದಿಂದಲೂ ಸುಖವನ್ನೇ ಕಾಣದ ರಾಜಣ್ಣನಿಗೆ ತನ್ನ ತಂಗಿಯರ ಪ್ರೀತಿ ವಾತ್ಸಲ್ಯಗಳೊಂದಿಗೆ ತಾಯಿಯ ಉತ್ಕಟ ಪ್ರೇಮವೂ ಆಧಾರ ಸ್ತಂಭವಾಗಿತ್ತು. ಆದರೆ ಇನ್ನೂ ಜೀವನದಲ್ಲಿ ಈಜುವುದನ್ನೇ ಕಲಿಯದವನಿಗೆ ನಾವಿಕನ ಹೊಣೆಗಾರಿಕೆಯನ್ನೊಪ್ಪಿಸಿ ತಂದೆ ತೀರಿಕೊಂಡಿದ್ದರು. ಬಾಡಿಗೆಗಿದ್ದ ಮುರುಕಲು ಮನೆ, ಪಾತ್ರೆ ಪಡಗುಗಳು ಬಿಟ್ಟರೆ, ಬೇರಾವ ಆಸ್ತಿಯನ್ನೂ ಅಪ್ಪ ಸಂಪಾದಿಸಿರಲಿಲ್ಲ. ಕುಡಿತ, ಸಿಗರೇಟಿನ ಚಟಗಳಿಲ್ಲದಿದ್ದರೂ, ಬಂದ ಹಣವನ್ನೆಲ್ಲಾ ನೀರಿನಂತೆ ಖರ್ಚು ಮಾಡುವ ಅಪ್ಪನ ಗುಣ, ರಾಜಣ್ಣನಿಗೆ ಚಿಕ್ಕ ವಯಸ್ಸಿನಲ್ಲೆ ಒಂದು ರೀತಿಯ ಎಚ್ಚರಿಕೆ ಗಂಟೆಯಾಗಿತ್ತು.

ಶೆಟ್ಟರ ಮಂಡಿಯಲ್ಲಿ ಲೆಕ್ಕಪತ್ರ ಬರೆಯುತ್ತಿದ್ದ ಶಂಕರಪ್ಪ ತನ್ನ ಯಜಮಾನರ ಬಳಿ ಒಳ್ಳೆ ಹೆಸರು ಸಂಪಾದಿಸಿದ್ದರು. ಯಾವುದೇ ಸಂಸಾರ ತಾಪತ್ರಯಗಳಿದ್ದರೂ, ತನ್ನ ಧಣಿಯ ಬಳಿ ಕೈ ಚಾಚಲು ಶಂಕರಪ್ಪನಿಗೆ ಹಿಂಜರಿಯುವಂತಿರಲಿಲ್ಲ. ಜಿಪುಣಾಗ್ರೇಸರರೆಂದು ಹೆಸರು ಪಡೆದಿದ್ದರೂ ಅಕ್ಕಿ ಮಂಡಿ ಶ್ರೀನಿವಾಸ ಶೆಟ್ಟರು, ತಮ್ಮ ಬಳಿ ಕೆಲಸ ಮಾಡುವವರ ಬಗ್ಗೆ ಅಪಾರ ಕಾಳಜಿ ವಹಿಸುತ್ತಿದ್ದರು. ಕೆಲವೊಮ್ಮೆ ಶಂಕರಪ್ಪ ಯಾವುದೋ ಕೆಲಸದ ಮೇಲೆ ಹೊರ ಊರುಗಳಿಗೆ ಹೋದಾಗ, ಶೆಟ್ಟರೇ ಖುದ್ದಾಗಿ ಅವರ ಮನೆಗೆ ಬಂದು ಯೋಗಕ್ಷೇಮ ವಿಚಾರಿಸುತ್ತಿದ್ದರು.

''ನಿಮ್ಮೆಜಮಾನ್ರು ಎಲ್ಲಾ ಸರಿ, ತುಂಬಾ ನಿಷ್ಠಾವಂತ, ಆದ್ರೆ ಕೈಯಲ್ಲಿ ಹಣ ನಿಲ್ಲೋಲ್ಲ ನೋಡಿ, ಮಕ್ಕಳೊಂದಿಗ ಅಂತೇನಾದ್ರೂ ಹಣ ಕೊಟ್ರೆ ಏನೋ ಮಾಡಿ ಎಲ್ಲಾ ಖರ್ಚು ಮಾಡಿಬಿಡ್ತಾನೆ'' ಎಂದು ಆಗಾಗ್ಗೆ ತನ್ನ ತಾಯಿಯ ಬಳಿ ಹೇಳುತ್ತಿದ್ದುದು ರಾಜಣ್ಣನಿಗೆ ನೆನಪಾಯಿತು.

ಕೆಲವೊಮ್ಮೆ ವ್ಯಕ್ತಿಯ ಬಾಲ್ಯ ಜೀವನವೂ ಅವನ ಗುಣಾವಗುಣಗಳನ್ನು ನಿರ್ಧರಿಸುತ್ತದೆ ಎಂಬ ಸತ್ಯವನ್ನು ರಾಜಣ್ಣ ತನ್ನ ತಂದೆಯಿಂದಲೇ ಕಲಿತಿದ್ದ. ತಮ್ಮ ಬಾಲ್ಯದಲ್ಲಿ ತೀವ್ರ ಬಡತನ, ದಾರಿದ್ರ್ಯಗಳನ್ನು ಅನುಭವಿಸಿದ್ದ ಶಂಕರಪ್ಪನಿಗೆ ಒಮ್ಮೆ ಹಣ ಕೈಗೆ ಬಂದರೆ ಸಿರಿ ಸಿಕ್ಕಂತಾಗುತ್ತಿತ್ತು. ತಾನು ಕಷ್ಟಪಟ್ಟಂತೆ ತನ್ನ ಹೆಂಡತಿ ಮಕ್ಕಳು ಪಡಬಾರದೆಂಬ ಉದ್ದೇಶದಿಂದ ಬಂದ ಹಣವನ್ನೆಲ್ಲಾ ನೀರಿನಂತೆ ಪೋಲು ಮಾಡುತ್ತಿದ್ದ ಶಂಕರಪ್ಪ ಎಂದಿಗೂ ಕೆಟ್ಟ ಚಟಗಳಿಗೆ ಬಲಿಯಾಗಿರಲಿಲ್ಲ. ಏನೇ ಖರ್ಚು ಮಾಡಿದರೂ ಮಕ್ಕಳಿಗೆ ಬಟ್ಟೆ, ರೇಡಿಯೋ, ಟೇಪ್ ರಿಕಾರ್ಡರ್ ಮುಂತಾದವುಗಳನ್ನು ತರುವುದಕ್ಕೇ ಎಲ್ಲವನ್ನೂ ಪೋಲುಮಾಡುತ್ತಿದ್ದ. ಇನ್ನೂ ಹೆಚ್ಚು ಹಣ ಬಂದರೆ ತಿರುಪತಿಗೆ ಹೋಗಿ ಹುಂಡಿಗೆ ಹಣ ಸುರಿದು ಬರುವುದು ಒಂದು ರೀತಿಯ ಚಟವೇ ಆಗಿತ್ತು. ತನ್ನ ತಂದೆ ದೇವತಾಕಾರ್ಯಗಳಿಗೆ ಖರ್ಚುಮಾಡುತ್ತಿದ್ದ ರೀತಿ, ದೇವಸ್ಥಾನಗಳಿಗೆ ನೀಡುತ್ತಿದ್ದ ಕಾಣಿಕೆಗಳನ್ನು ಕಂಡು ರಾಜಣ್ಣನಿಗೆ ಎಷ್ಟೋ ಬಾರಿ ಖೇದವಾಗುತ್ತಿತ್ತು. 'ಈ ದೇವಾಲಯದ ಹುಂಡಿಗಳಿಗೆ ಸುರಿಯುವ ಹಣವನ್ನು ಉಳಿಸಿದರೆ ಭವಿಷ್ಯದಲ್ಲಿ ಉಪಯೋಗವಾಗಬಹುದಲ್ಲಾ' ಎಂಬ ಯೋಚನೆ ಆಗಲೇ ರಾಜಣ್ಣನ ಮನಸ್ಸಿನಲ್ಲಿ ಕೊರೆಯುತ್ತಿತ್ತು. ಮೂವರು ಮಕ್ಕಳ ಓದಿನ ಖರ್ಚು ನಿಭಾಯಿಸದೇ ಎಷ್ಟೋ ಸಲ ಶೆಟ್ಟರ ಬಳಿ ಅಂಗಲಾಚಿದ್ದನ್ನು ರಾಜಣ್ಣ ಮರೆತಿರಲಿಲ್ಲ.

''ಮಕ್ಕಳ ವಿದ್ಯಾಭ್ಯಾಸ ತಪ್ಪಿಸಬೇಡ ಶಂಕರಪ್ಪ, ಮುಂದೆ ಅವರೇ ನಿಂಗೆ ಆಸರೆಯಾಗೋದು'' ಅಂತ ಬುದ್ಧಿವಾದ ಹೇಳಿ ಶೆಟ್ಟರು ಎಷ್ಟೋ ಸಲ ಪರೀಕ್ಷೆಯ ಶುಲ್ಕಕ್ಕೆ ಹಣ ನೀಡಿದ್ದನ್ನು ನೆನೆದು ರಾಜಣ್ಣ ಮನಸ್ಸಿನಲ್ಲೇ ಶೆಟ್ಟರಿಗೆ ವಂದಿಸಿದ.

* * *

''ಏನಪ್ಪಾ ಮರಿ, ಹೇಗಿದೆ ನಿನ್ ವ್ಯಾಪಾರ'' ಎಂಬ ಕರ್ಕಶ ದನಿ ರಾಜಣ್ಣನನ್ನು ಎಚ್ಚರಿಸಿತು. ಮಳೆಯ ರಭಸ



ಸಾ. ದಿವಾಕರ

ಕಡಿಮೆಯಾಗುತ್ತಿದ್ದು, ತಾನು ಮನದಲ್ಲೇ ವಂದಿಸುತ್ತಿದ್ದ ಶೆಟ್ಟರು ಅಂಗಡಿಯೆದುರು ನಿಂತಿದ್ದರು.

''ಏನು ಯಾವ್ದೋ ಕನಸು ಕಾಣ್ತಾ ಇದ್ಯಾ, ನಾನ್ ಬಂದು ಎಷ್ಟೊತ್ತಾಯ್ತು ಗೊತ್ತಾ. ಏನೂ ಯೋಚ್ನೆ ಮಾಡ್ಬೇಡ ಮರಿ, ಕಾಲ ಕೂಡಿಬಂದ್ರೆ ಎಲ್ಲಾ ಸರಿ ಹೋಗುತ್ತೆ. ಒಂದು ಡಜನ್ ಬಾಳೆ ಹಣ್ಣು ಕೊಡು, ಹಂಗೇ ಎಲೆ ಅಡಿಕೇನೂ ಕೊಡು'' ಎಂದ ಶೆಟ್ಟರು ರಾಜಣ್ಣನ ಉಭಯಕುಶಲೋಪರಿ ವಿಚಾರಿಸಲಾರಂಭಿಸಿದ್ದರು.

''ಅಂಥಾದ್ದೇನೂ ಯೋಚ್ನೆ ಇಲ್ಲಾ ಶೆಟ್ಟರೆ, ತಂಗೀರಿಬ್ರೂ ಹೇಗೋ ಪಿ.ಯು.ಸಿ. ಪಾಸು ಮಾಡಿದ್ದಾರೆ. ಈ ಕಾಲ್ದಲ್ಲಿ ಕೆಲಸ ಎಲ್ಲಿ ಸಿಗುತ್ತೆ ಹೇಳಿ. ಸದ್ಯಕ್ಕೆ ಮನೇಲೇ ಏನೊ ಮಾಡಿಕೊಂಡು ಪುಡಿಗಾಸು ಸಂಪಾದಿಸ್ತಾ ಇದ್ದಾರೆ. ಇನ್ನು, ಅಮ್ಮನ ಕಾಯಿಲೆ ನಿಮಗೆ ಗೊತ್ತೆ ಇದೆ. ಅದು ವಾಸಿಯಾಗೋದಲ್ಲ. ಜೀವನಪೂರ್ತಿ ಕಷ್ಟವೇ ಆಗೋಯ್ತು ನಮ್ಮಮ್ಮಂಗೆ'' ಎಂದು ಹೇಳುತ್ತಲೇ ರಾಜಣ್ಣನ ಕಣ್ಣುಗಳು ಒದ್ದೆಯಾಗಿದ್ದವು.

''ಅಷ್ಟಕ್ಕೆಲ್ಲಾ ಅತ್ರೆ ಹೇಗೆ ಮರಿ, ನೋಡು ನಿಮ್ಮಪ್ಪ ಕೂಡ ನಿಮ್ಮ ತಾಯೀನ ಇಷ್ಟು ಸುಖವಾಗಿಟ್ಟಿರಲಿಲ್ಲ. ಮನೆ ಮಠ ಇಲ್ಲದಿದ್ರೇನು, ನೆಮ್ಮದಿ ಇದೆಯಲ್ಲಾ ಆಕೆಗೆ. ಇನ್ನು ಮಕ್ಕಳ ಮದುವೆ ಇತ್ಯಾದಿ ಹೇಗೋ ನಡೆಯುತ್ತೆ, ದೇವರಿದ್ದಾನೆ ಬಿಡು'' ಎಂಬ ಸಮಾಧಾನದ ಮಾತುಗಳೊಂದಿಗೆ ಶೆಟ್ಟರು ತಮ್ಮ ಹಾದಿ ಹಿಡಿದಿದ್ದರು.

ಸಾಂತ್ವನದ ಮಾತುಗಳನ್ನಾಡಿದರೂ, ಶೆಟ್ಟರ ಪರಿಸ್ಥಿತಿ ರಾಜಣ್ಣನಿಗೆ ಅರ್ಥವಾಗುತ್ತಿತ್ತು. ಮೊದಲಿನಂತೆ ಅವರು ಕೇಳಿದಾಗ ಸಹಾಯ ಮಾಡುವ ಸ್ಥಿತಿಯಲ್ಲಿರಲಿಲ್ಲ. ೨೦ ವರ್ಷಗಳ ಹಿಂದೆ ತಾನು ಚಿಕ್ಕವನಾಗಿದ್ದಾಗ ಊರಿನಲ್ಲಿ ೩೦ಕ್ಕೂ ಹೆಚ್ಚು ಅಕ್ಕಿ ಗಿರಣಿಗಳಿದ್ದವು. ಈಗ ಬೆರಳೆಣಿಕೆಯಷ್ಟೂ ಇಲ್ಲದಿರುವುದನ್ನು ನೆನೆದು ರಾಜಣ್ಣನಿಗೆ ಖೇದವಾಯಿತು. ಇಡೀ ರಾಜ್ಯದಿಂದ, ಹೊರ ರಾಜ್ಯಗಳಿಂದ ವರ್ತಕರು ಇಲ್ಲಿ ಬಂದು ವ್ಯಾಪಾರ ವಹಿವಾಟು ನಡೆಸುತ್ತಿದ್ದರು. ದಿನಕ್ಕೆ ಏನಿಲ್ಲಾ ಎಂದರೂ ೨೦೦ಕ್ಕೂ ಹೆಚ್ಚು ಲಾರಿಗಳು ಒಂದರ ಹಿಂದೊಂದು ಮೆರವಣಿಗೆ ಹೋಗುತ್ತಿದ್ದುದು ರಾಜಣ್ಣನಿಗೆ ನೆನಪಾಗದಿರಲಿಲ್ಲ. ಈಗ ಅವೆಲ್ಲವೂ ಗತವೈಭವವಾಗಿದ್ದವು. ಒಂದಿಬ್ಬರನ್ನು ಬಿಟ್ಟರೆ, ಎಲ್ಲಾ ಗಿರಣಿ ಮಾಲೀಕರು ಬಹುತೇಕ ಕಿರಾಣಿ ವ್ಯಾಪಾರಸ್ಥರಾಗಿಬಿಟ್ಟಿದ್ದರು. ಕೆಲವರು ಊರನ್ನೇ ತೊರೆದದ್ದೂ ಉಂಟು. ಶೆಟ್ಟರು ಪಾಪರ್ ಆಗದಿದ್ದರೂ, ಒಂದು ಕಿರಾಣಿ ಅಂಗಡಿ ನಡೆಸಿಕೊಂಡು ಜೀವನ ನಡೆಸುತ್ತಿದ್ದರು.

ತನ್ನ ಜೀವನದಂತೆಯೇ ರಾಜಣ್ಣ ಊರಿನ ಬೆಳವಣಿಗೆಯಲ್ಲೂ, ಸಾಮಾಜಿಕ ಸ್ಥಿತಿಗತಿಗಳಲ್ಲೂ ಹಲವಾರು ಬದಲಾವಣೆಗಳನ್ನು ಕಂಡಿದ್ದ. ರಾಜಕೀಯ ಸ್ವರೂಪ ಬದಲಾಗಿತ್ತು. ಒಂದು ಸ್ವಂತ ಮನೆಯನ್ನೂ ಮಾಡಿಕೊಳ್ಳದೆ ೧೭ ವರ್ಷ ಪುರಸಭಾಧ್ಯಕ್ಷರಾಗಿ, ಜನಾನುರಾಗಿಯಾಗಿದ್ದ ಕೃಷ್ಣಪ್ಪನವರಂತಹ ಧೀಮಂತರನ್ನು ಕಂಡ ಊರು, ಈಗ ಭ್ರಷ್ಟ ಪುಡಾರಿಗಳ ತಾಣವಾಗಿತ್ತು. ಹಾಲಿ ಅಧ್ಯಕ್ಷರು ಒಂದು ಬಡಾವಣೆಯನ್ನೇ ತಮ್ಮದಾಗಿಸಿಕೊಂಡಿರುವುದನ್ನು ನೆನೆದು ರಾಜಣ್ಣನ ಮನಸ್ಸು ಒಂದು ಕ್ಷಣ ಕುದಿಯಿತು. ೨೦ ಸಾವಿರ ಜನಸಂಖ್ಯೆ ಇದ್ದ ನಾಲ್ಕು ಬೀದಿಗಳ ಊರು ಈಗ ಹಲವಾರು ಬಡಾವಣೆಗಳ ಒಂದು ಲಕ್ಷ ಜನರ ಪಟ್ಟಣವಾಗಿತ್ತು. ಅದಕ್ಕೆ ಸರಿಯಾಗಿ ಮಾರುಕಟ್ಟೆಯೂ ಬೆಳೆಯಲೇಬೇಕಲ್ಲ! ಪಕ್ಕದ ಸರ್ಕಾರಿ ಕಾರ್ಖಾನೆಗೆ ಹೊರಗಿನಿಂದ ಬಂದ ಕಾರ್ಮಿಕರೇ ಊರಿನ ಬೆಳವಣಿಗೆಗೆ ಕಾರಣರಾಗಿದ್ದರು. ಹಾಗೆಯೇ ಹಲವಾರು ಸಲ್ಲದ ಬದಲಾವಣೆಗಳಿಗೂ ಕಾರಣರಾಗಿದ್ದರು. ತನ್ನೊಂದಿಗೆ ಓದಿದವರಲ್ಲಿ ಬಹುತೇಕ ಸ್ನೇಹಿತರು ಅಂಗಡಿ ವ್ಯಾಪಾರವನ್ನೇ ನಂಬಿ ಬದುಕುತ್ತಿದ್ದುದು, ರಾಜಣ್ಣನಿಗೆ ಒಂದು ರೀತಿಯಲ್ಲಿ ಸಹಕಾರಿಯಾಗಿತ್ತು. ಹಣಕಾಸಿನ ಮುಗ್ಗಟ್ಟು ಬಂದಾಗ ಯಾರಾದರೂ ನೆರವಾಗುತ್ತಿದ್ದರು.

ಆದರೂ ರಾಜಣ್ಣನಿಗೂ ತನ್ನ ಊರಿನ ಬಗ್ಗೆ ಬಾಲ್ಯದಲ್ಲಿದ್ದ ಹೆಮ್ಮೆ ಹಾಗೆಯೇ ಉಳಿದಿರಲಿಲ್ಲ. ಜೊತೆಗೆ ತನಗೇ ೩೩ ವರ್ಷ. ವಿವಾಹದ ಯೋಚನೆಗಳನ್ನೂ ಮಾಡುವಂತಿರಲಿಲ್ಲ. ಇನ್ನು ೨೫ ದಾಟಿದ್ದರೂ ತಂಗಿಯರಿಬ್ಬರಿಗೂ ವಿವಾಹವಾಗಿರಲಿಲ್ಲ. ಗಂಡು ಹುಡುಕುವುದಕ್ಕಿಂತಲೂ, ಮದುವೆ ಮಾಡುವುದು ಹೇಗೆಂಬುದೇ ದೊಡ್ಡ ಸಮಸ್ಯೆಯಾಗಿತ್ತು. ಜೀವನ ನಡೆಸುವ ಯೋಗ್ಯತೆ ಇಲ್ಲದ ಗಂಡುಗಳೂ ವರದಕ್ಷಿಣೆ ಕೇಳುವ ವಿಷಯದಲ್ಲಿ ಹೀರೋಗಳಂತೆ ವರ್ತಿಸುತ್ತಿದ್ದುದು ರಾಜಣ್ಣನಿಗೆ ಅಸಹ್ಯ ಹುಟ್ಟಿಸುತ್ತಿತ್ತು. ತಂಗಿಯರೂ ಎಂದೂ ಮದುವೆ ಮಾಡೆಂದು ಪೀಡಿಸುತ್ತಿರಲಿಲ್ಲ. ತಮ್ಮ ಕೈಲಾದ ಮಟ್ಟಿಗೆ ಮನೆಯಲ್ಲೇ ಕುಳಿತು ಸಂಪಾದಿಸುತ್ತಿದ್ದುದು, ಸಂಸಾರ ತೂಗಿಸಲು ಸರಿಹೋಗುತ್ತಿತ್ತು.

* * *

ಕಳೆದ ಇಪ್ಪತ್ತು ವರ್ಷಗಳಲ್ಲಿ ಊರಿನಲ್ಲಾದ ಬದಲಾವಣೆಗಳು ಅಭಿವೃದ್ಧಿಯ ದೃಷ್ಟಿಯಿಂದ ಸ್ವಾಗತಾರ್ಹವಾಗಿದ್ದರೂ, ರಾಜಣ್ಣನಿಗೆ ತಾನು ಕಂಡ ಬಾಲ್ಯದ ಸಣ್ಣ ಊರು ಹೀಗೇಕಾಯಿತು, ಎಂಬುದೇ ಮುಖ್ಯ ಪ್ರಶ್ನೆಯಾಗಿತ್ತು. ತಾನೂ ಒಂದು ರೀತಿಯಲ್ಲಿ ಈ ಬದಲಾವಣೆಗಳಿಗೆ ಕಾರಣವಾಗಿರುವುದನ್ನು ನೆನೆದು ಖೇದವೂ ಉಂಟಾಗಿತ್ತು. ಇತ್ತೀಚಿನ ದಿನಗಳ ಕೆಲವು ಘಟನಾವಳಿಗಳು ರಾಜಣ್ಣನ ಪಾಪಪ್ರಜ್ಞೆಯನ್ನು ಬಡಿದೆಬ್ಬಿಸಿದ್ದವು. ತನ್ನ ಬಾಲ್ಯದಿಂದಲೂ ಆಡಿ, ನಲಿದಾಡಿ ಬೆಳೆದಿದ್ದ ಹಳೆಯ ಬೀದಿಯಲ್ಲಿದ್ದ ಮನೆಯನ್ನು ಅನಿವಾರ್ಯವಾಗಿ ತೊರೆಯುವ ಸಂದರ್ಭ ಬಂದಾಗಲೂ, ರಾಜಣ್ಣ ದಿಟ್ಟತನದಿಂದ ವಿರೋಧಿಸಿದ್ದ. ಮನೆಯನ್ನು ಖಾಲಿ ಮಾಡುವ ತುರ್ತು ಸಂದರ್ಭವೇನೂ ಇರಲಿಲ್ಲವಾದರೂ, ಕೆಲದಿನಗಳ ಹಿಂದೆ ನಡೆದ ಕೋಮು ಗಲಭೆಗಳು ಊರಿನಲ್ಲಿ ಪಾರಂಪರಿಕವಾಗಿ ಬೆಳೆದುಬಂದಿದ್ದ ಸೌಹಾರ್ದತೆಯನ್ನು ಸ್ವಲ್ಪಮಟ್ಟಿಗೆ ಕದಡಿತ್ತು.

''ಕಾಶ್ಮೀರದಲ್ಲಿ ನಮ್ಮವರನ್ನು ಕೊಚ್ಚಿಹಾಕುತ್ತಿದ್ದಾರೆ. ಅಲ್ಲಿ ನಮ್ಮ ಜನರಿಗೇ ಪ್ರವೇಶವಿಲ್ಲದಾಗಿದೆ. ಶ್ರೀನಗರದಲ್ಲಿ ನಮ್ಮ ತ್ರಿವರ್ಣ ಧ್ವಜ ಹಾರುವಂತಿಲ್ಲ. ಸರ್ಕಾರ ವೋಟುಗಳಿಗಾಗಿ ಅವರ ವಿರುದ್ಧ ಯಾವುದೇ ಕ್ರಮ ಕೈಗೊಳ್ಳುತ್ತಿಲ್ಲ. ಕಾಶ್ಮೀರ ನಮ್ಮದಾಗಬೇಕಾದರೆ, ನಾವು ಈ ಬಾಬರನ ಸಂತಾನವನ್ನು ಹೊರಗಟ್ಟಬೇಕು. ನಮ್ಮ ಆರಾಧ್ಯ ದೈವ ಜನಿಸಿದ ಸ್ಥಳದಲ್ಲಿ ಮಸೀದಿ ನಿರ್ಮಿಸಿರುವವರನ್ನು ನಾವು ಸದೆಬಡಿಯದಿದ್ದರೆ, ನಮಗೆ ಉಳಿಗಾಲವಿಲ್ಲ. ನಾವು ನರಸತ್ತ ಕ್ರಿಮಿಗಳಂತಾಗಿದ್ದೇವೆ. ಅದಕ್ಕೇ ನಮ್ಮನ್ನು ಶೋಷಣೆ ಮಾಡಲಾಗುತ್ತಿದೆ. ಈ ದೇಶವನ್ನು ಹಿಂದೂ ರಾಷ್ಟ್ರವನ್ನಾಗಿ ಮಾಡುವುದೇ ನಮ್ಮ ಅಂತಿಮ ಧ್ಯೇಯವಾಗಬೇಕು'' ಎಂದೆಲ್ಲಾ ಕೇಸರಿ ಪಡೆಯ ಸೀತಾರಾಂ, ಸುಮಾರು ೧೮ ವರ್ಷಗಳ ಹಿಂದೆ ಮಾಡಿದ ಭಾಷಣವನ್ನು ರಾಜಣ್ಣ ಮರೆತಿರಲಿಲ್ಲ.

ದೇಶಾದ್ಯಂತ ಕೋಮು ದಳ್ಳುರಿ ದಹಿಸುತ್ತಿದ್ದ ಕಾಲವದು. ರಾಷ್ಟ್ರೀಯ ನಾಯಕರು ರಾಷ್ಟ್ರಾದ್ಯಂತ ರಥಯಾತ್ರೆ ಕೈಗೊಂಡು, ರಾಮಮಂದಿರದ ನಿರ್ಮಾಣಕ್ಕಾಗಿ ಪ್ರಚಾರ ಮಾಡುತ್ತಿದ್ದರು. ಅಪಾರ ಸಂಖ್ಯೆಯ ಜನ ಈ ಕೈಂಕರ್ಯಕ್ಕೆ ಧನ ಸಹಾಯ ಮಾಡುತ್ತಿದ್ದರು. ರಥಯಾತ್ರೆಯ ಬಿಸಿ ರಾಜಣ್ಣನ ಊರಿಗೂ ಮುಟ್ಟದಿರಲಿಲ್ಲ. ಊರಿನಲ್ಲಿ ಈ ಪ್ರಚಾರ ಕಾರ್ಯಕ್ಕೆ ತಕ್ಕನಾದ ಸಂದರ್ಭವಾಗಲೀ, ಸಾಮಾಜಿಕ ಕ್ಷೋಭೆಯಾಗಲೀ ಇರಲಿಲ್ಲ. ಕೇಸರಿ ಪಡೆಯ ಕೆಲವು ಯುವಕರನ್ನು ಬಿಟ್ಟರೆ ಯಾರೂ ಈ ಪ್ರಚಾರದಲ್ಲಿ ಪಾಲ್ಗೊಳ್ಳುತ್ತಿರಲಿಲ್ಲ. ಎಷ್ಟಾದರೂ ಯಾವುದೇ ಮತೀಯ ಭಾವನೆಗಳಿಲ್ಲದೆ ನೂರಾರು ವರ್ಷ ಸೌಹಾರ್ದತೆಯಿಂದ ಬಾಳಿದ್ದ ಊರಲ್ಲವೇ. ಕನ್ನಡ ರಾಜ್ಯೋತ್ಸವವಾಗಲೀ, ಸ್ವಾತಂತ್ರ್ಯೋತ್ಸವವಾಗಲೀ, ಅವುಗಳಲ್ಲಿ ಎಲ್ಲ ಧರ್ಮೀಯ ಜನರೂ ಒಂದಾಗಿ ಪಾಲ್ಗೊಂಡು, ಭುವನೇಶ್ವರಿ, ಭಾರತಾಂಬೆಯ ಮೆರವಣಿಗೆ ಮಾಡುತ್ತಿದ್ದುದು ಇಲ್ಲಿನ ವೈಶಿಷ್ಟ್ಯವಾಗಿತ್ತು. ಮೊಹರಂ ಹಬ್ಬದಲ್ಲಿ, ಉರುಸ್‌ನಲ್ಲಿ ಹಿಂದೂಗಳೂ ಪಾಲ್ಗೊಂಡರೆ, ಧರ್ಮರಾಯನ ಕರಗ, ಗಣೇಶ ಚತುರ್ಥಿಯಲ್ಲಿ ಮುಸ್ಲಿಮರು ಪಾಲ್ಗೊಳ್ಳುತ್ತಿದ್ದರು. ಕ್ರಿಸ್‌ಮಸ್ ಬಂತೆಂದರೆ ಇಡೀ ಊರಿನ ಜನತೆ ಚರ್ಚಿನ ಮುಂದಿರುತ್ತಿತ್ತು.

ರಾಜಣ್ಣನ ಮನೆ ಇದ್ದ ಬೀದಿಯಲ್ಲಿ ಸುಮಾರು ಇನ್ನೂರಕ್ಕೂ ಹೆಚ್ಚು ಮನೆಗಳಿದ್ದವು. ಅವುಗಳಲ್ಲಿ ಬಹುತೇಕ ಮನೆಗಳು ಮುಸ್ಲಿಮರದೇ ಆಗಿದ್ದವು. ಅಂದಿನ ಕಾಲದಲ್ಲಿ ಮುಸ್ಲಿಮರಿಗೆ ಈಗಿರುವಂತೆ ಛತ್ರಗಳಿರುತ್ತಿರಲಿಲ್ಲ. ಮದುವೆ, ಮುಂಜಿ ಏನೇ ಆದರೂ ರಸ್ತೆಯಲ್ಲೇ ಶಾಮಿಯಾನ ಹಾಕಿ ಮಾಡುತ್ತಿದ್ದರು. ಹಿಂದಿನ ದಿನವೇ ಬಂದು ''ನಮ್ಮಿಂದ ತೊಂದ್ರೆ ಆದ್ರೆ ಕ್ಷಮಿಸಿ'' ಎಂದು ಹೇಳುವುದೇ ಅಲ್ಲದೆ, ಆಹ್ವಾನವನ್ನೂ ನೀಡುತ್ತಿದ್ದರು. ಆ ಬೀದಿಯಲ್ಲಿದ್ದ ಕೆಲವೇ ಸಸ್ಯಾಹಾರಿ ಕುಟುಂಬಗಳಿಗೆ ಇದು ಸಾಮಾನ್ಯ ಸಂಗತಿಯಾಗಿಬಿಟ್ಟಿತ್ತು. ಅಪ್ಪನಿಗೆ ಯಾವುದೇ ಸಮಸ್ಯೆ ಬಂದರೂ, ಬೀದಿಯ ಜನರೆಲ್ಲಾ ಬಂದು ನೆರವಾಗುತ್ತಿದ್ದುದನ್ನು, ದೀಪಾವಳಿ ಬಂದರೆ ಎಲ್ಲರೂ ಸೇರಿ ಪಟಾಕಿ ಹಚ್ಚುತ್ತಿದ್ದುದನ್ನು ರಾಜಣ್ಣ ಇನ್ನೂ ಮರೆತಿರಲಿಲ್ಲ.

ಇಂತಹ ಪರಿಸರದಲ್ಲಿ ಬೆಳೆದ ನಾನು ಏಕಾಏಕಿ ಇಟ್ಟಿಗೆ ಹೊತ್ತು ತಿರುಗಿದ್ದೇಕೆ ಎಂಬ ಪ್ರಶ್ನೆ ರಾಜಣ್ಣನನ್ನು ನಿರಂತರವಾಗಿ ಕಾಡುತ್ತಿತ್ತು. ತನ್ನ ಮಗ ಓದಿ ಉತ್ತಮ ನೌಕರಿ ಗಳಿಸುತ್ತಾನೆ ಎಂಬ ಆಶಯ ಹೊತ್ತಿದ್ದ ಅಪ್ಪನಿಗೆ ದ್ರೋಹ ಮಾಡಿಬಿಟ್ಟೆನೇ ಎಂಬ ಅನುಮಾನವೂ ಬಾರದಿರಲಿಲ್ಲ. ಆ ಸೀತಾರಾಂ ನಮ್ಮೂರಿಗೆ ಬಾರದಿದ್ದರೆ, ಈ ಊರಿನ ಚರ್ಯೆಯೇ ಬೇರೆಯಾಗಿರುತ್ತಿತ್ತು ಎಂದು ಅನೇಕ ಬಾರಿ ಸಂಕಟಪಟ್ಟಿದ್ದ. ಮನೆಯಲ್ಲಿ ಸುಳ್ಳು ಹೇಳಿ, ಶಾಲೆಗೆ ಚಕ್ಕರ್ ಹೊಡೆದು, ಇಟ್ಟಿಗೆಗಳನ್ನು ಹೊತ್ತುಕೊಂಡು ಹಳ್ಳಿ ಹಳ್ಳಿಗೆ, ಮನೆ ಮನೆಗೆ ತಿರುಗಿ, ಐದು ರೂಪಾಯಿ ವಸೂಲಿ ಮಾಡಿದ ಆ ದಿನಗಳು ರಾಜಣ್ಣನ ಜೀವನದ ಗತಿಯನ್ನೇ ಬದಲಾಯಿಸಿದ್ದವು. ರಾಮಮಂದಿರ ನಿರ್ಮಾಣವೊಂದೇ ಮುಖ್ಯ ಧ್ಯೇಯವಾಗಿದ್ದ ಆ ಅವಧಿಯಲ್ಲಿ ಆತ್ಮವಿಮರ್ಶೆ ಮಾಡಿಕೊಳ್ಳುವ ವ್ಯವಧಾನವೂ ಇರಲಿಲ್ಲವೆಂದು ರಾಜಣ್ಣ ಈಗ ನೆನೆಯುತ್ತಿದ್ದ.

ತಾನು ಚಿಕ್ಕಂದಿನಲ್ಲಿ ಅಪ್ಪನ ಜೊತೆ ಹೋಗುತ್ತಿದ್ದ ಊರಿನ ಶ್ರೀರಾಮ ದೇಗುಲ ಇಂದಿಗೂ ಅದೇ ಪುರಾತನ ದೇವಾಲಯವಾಗಿಯೇ ಇರುವುದನ್ನು ನೋಡಿದಾಗಲೆಲ್ಲ, ರಾಜಣ್ಣನಿಗೆ ತನ್ನ ಬಾಲ್ಯದ ತಪ್ಪಿನ ಅರಿವಾಗುತ್ತಿತ್ತು. ಆದರೆ ಆಗಿನ ಪರಿಸ್ಥಿತಿಯೂ ಹಾಗೇ ಇತ್ತು. ಪ್ರತಿದಿನ ಶಾಖೆಯಲ್ಲಿ ವ್ಯಾಯಾಮ, ಪ್ರಾರ್ಥನೆಗಳಿಗಿಂತಲೂ, ಮುಸ್ಲಿಮರ ವಿರುದ್ಧದ ಭಾಷಣಗಳೇ ಹೆಚ್ಚಾಗಿರುತ್ತಿತ್ತು. ಸಮಾಜವನ್ನು ಕಾಡುತ್ತಿರುವ ಅನೇಕ ಸಮಸ್ಯೆಗಳನ್ನು ಹೇಗಾದರೂ ಪರಿಹರಿಸಿಕೊಳ್ಳಬಹುದು, ಮೊದಲು ನಮ್ಮ ರಾಷ್ಟ್ರ ಹಿಂದೂ ರಾಷ್ಟ್ರವಾಗಬೇಕು ಎಂಬ ಸೀತಾರಾಂ ಮತ್ತು ರಾಷ್ಟ್ರೀಯ ನಾಯಕರ ಘೋಷಣೆಗಳು ಮನದಲ್ಲಿ ನಾಟಬಿಟ್ಟಿದ್ದವು. ಈ ರೋಷಭರಿತ ಮಾತುಗಳನ್ನು ಕೇಳಿದಾಗೆಲ್ಲಾ ಹದಿ ಹರೆಯದ ಬಿಸಿರಕ್ತ ಕುದಿಯುತ್ತಿತ್ತು. ಗಾಂಧಿಯ ಬಗ್ಗೆ, ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ, ವಿಚಾರವಾದಿಗಳ ಬಗ್ಗೆ ಅಸಡ್ಡೆ ಮೂಡಲಾರಂಭಿಸಿತ್ತು. ಮಧ್ಯ ರಾತ್ರಿ ಹನ್ನೆರಡು ಗಂಟೆಯವರೆಗೆ ಸಭೆಗಳನ್ನು ಮಾಡಲಾಗುತ್ತಿತ್ತು. ನಾಳಿನ ಕಾರ್ಯಕ್ರಮ ಹೇಗಿರಬೇಕು, ಯಾವ ಘೋಷಣೆಗಳನ್ನು, ಯಾವ ಸ್ಥಳಗಳಲ್ಲಿ ಕೂಗಬೇಕೆಂದು ಹೇಳಿಕೊಡಲಾಗುತ್ತಿತ್ತು. ಒಂದು ವೇಳೆ ಮುಸ್ಲಿಮರೇನಾದರೂ ಆಕ್ರಮಣ ಮಾಡಿದರೆ ಸ್ವಯಂ ರಕ್ಷಣೆಗೆ ಬೇಕಾದ ತಂತ್ರಗಾರಿಕೆಯನ್ನೂ ಹೇಳಿಕೊಡಲಾಗುತ್ತಿತ್ತು. ಸ್ನೇಹಿತರೊಡನೆ ಓದುತ್ತೇನೆಂದು ಹೇಳಿ ಈ ಕಾರ್ಯಕ್ರಮಗಳಲ್ಲಿ ಭಾಗಿಯಾಗುತ್ತಿದ್ದ ತನ್ನ ಅಂದಿನ ದಿನಗಳು ರಾಜಣ್ಣನಿಗೆ ಭೀಕರ ದಿನಗಳಂತೆ ಈಗ ಗೋಚರಿಸುತ್ತಿತ್ತು.

ರಾಜಣ್ಣ ಒಂದೆರಡು ಬಾರಿ ಪೊಲೀಸರ ಕೈಗೂ ಸಿಕ್ಕಿಬಿದ್ದಿದ್ದ. ಶಾಲಾ ಹುಡುಗನೆಂದು ಹೇಳಿ ಬಿಡುಗಡೆ ಮಾಡಿದ್ದರು. ಆ ದಿನಗಳಲ್ಲಿ ಕೇಸರಿ ಪಡೆಯ ನಾಯಕರು ಭಗತ್ ಸಿಂಗ್‌ನ ಸಾಹಸವನ್ನು ಕೊಂಡಾಡುತ್ತಾ ತಮ್ಮ ಹೋರಾಟಗಳನ್ನು ಆತನ ಹೋರಾಟಕ್ಕೆ ಸಮೀಕರಿಸುತ್ತಿದ್ದುದು ರಾಜಣ್ಣನಂಥವರಿಗೆ ಸ್ಫೂರ್ತಿ ನೀಡುತ್ತಿತ್ತು. ಬಾಬ್ರಿ ಮಸೀದಿ ಧ್ವಂಸವಾಗುವ ಹಿಂದಿನ ದಿನದ ಸಭೆಯಲ್ಲಿ, ಘಟನೆಯಾದ ಬಳಿಕ ಗಲಭೆಯಾದಲ್ಲಿ ಯಾವ ಯಾವ ಮುಸ್ಲಿಂ ಕೇರಿಗಳ ಮೇಲೆ ಆಕ್ರಮಣ ಮಾಡಬೇಕೆಂಬುದನ್ನು ಆಯೋಜಿಸಲಾಗಿತ್ತು. ತಾನಿರುವ ರಸ್ತೆಯಲ್ಲಿಯೇ ಬಹುತೇಕ ಮುಸ್ಲಿಮರಿದ್ದು, ತನ್ನೊಡನೆ ಸೋದರಭಾವದಿಂದ ಬಾಳ್ವೆ ನಡೆಸುತ್ತಿರುವುದನ್ನು ನೆನೆದು ಆಗಲೇ ರಾಜಣ್ಣನಿಗೆ, ತಾನು ನಡೆಯುತ್ತಿರುವ ಹಾದಿ ತಪ್ಪಿರಬಹುದೇನೋ ಎಂಬ ಭಾವನೆ ಮೂಡತೊಡಗಿತ್ತು. ಆದರೂ ನಾಯಕರ ವಿರುದ್ಧ ಮಾತನಾಡುವ ಧೈರ್ಯವಿರಲಿಲ್ಲ. ಅಚ್ಚರಿಯ ಸಂಗತಿಯೆಂದರೆ, ಬಾಬ್ರಿ ಮಸೀದಿ ಧ್ವಂಸವಾದ ಸುದ್ದಿ ಊರಲ್ಲಿ ಸಂಚಲವನ್ನೇನೂ ಉಂಟುಮಾಡಲಿಲ್ಲ. ಯಾವ ಘಟನೆಯೂ ಸಂಭವಿಸಲಿಲ್ಲ ಎಂಬಂತೆ ಊರು ಮಾಮೂಲಿನಂತೆಯೇ ಇತ್ತು. ಇದಕ್ಕೆ ಪೊಲೀಸರ ಮುನ್ನೆಚ್ಚರಿಕೆ ಕ್ರಮವೂ ಕಾರಣವಾಗಿತ್ತು ಎಂಬುದು ರಾಜಣ್ಣನಿಗೆ ನಂತರ ತಿಳಿದುಬಂದಿತ್ತು.

ಆದರೆ ರಾಜಣ್ಣನ ಜೀವನದಲ್ಲಿ ಇನ್ನೂ ಹೆಚ್ಚು ಭೀಕರವಾದ ಘಟನೆ ನಡೆದುಹೋಗಿತ್ತು. ಮಗ ಸರಿಯಾಗಿ ಓದುತ್ತಿಲ್ಲ, ಪಡ್ಡೆ ಹುಡುಗರೊಡನೆ ಓಡಾಡುತ್ತಿದ್ದಾನೆ, ಕೇಸರಿ ಪಡೆ ಸೇರಿದ್ದಾನೆ, ಪೊಲೀಸರ ಕೆಂಗಣ್ಣಿಗೆ ಗುರಿಯಾಗಿದ್ದಾನೆ ಎಂಬ ವಿಷಯ ಶಂಕರಪ್ಪನಿಗೆ ತಿಳಿಯಲು ಹೆಚ್ಚು ಸಮಯ ಬೇಕಾಗಿರಲಿಲ್ಲ. ಒಂದೆಡೆ ಸಾಲದ ಬಾಧೆ, ಮಕ್ಕಳನ್ನು ಓದಿಸುವ ಚಿಂತೆ, ಕೈಗೆ ನಿಲುಕದ ಸಂಪಾದನೆ, ಹೆಂಡತಿಯ ಅನಾರೋಗ್ಯ, ಜೊತೆಗೆ ಮಗನ ಈ ವರ್ತನೆಗೆ ಬೇಸತ್ತು ಶಂಕರಪ್ಪ ಹಾಸಿಗೆ ಹಿಡಿದಿದ್ದ. ತಾನು ಮಾಡಿದ ತಪ್ಪಿನಿಂದಲೇ ಅಪ್ಪನಿಗೆ ಹೀಗಾಗಿದೆ ಎಂದು ರಾಜಣ್ಣನಿಗೆ ಮನವರಿಕೆಯಾಗಿದ್ದರೂ, ಅಪ್ಪನ ಬಾಯಿಂದ ಒಮ್ಮೆಯೂ ಆ ಮಾತು ಹೊರಡದಿದ್ದುದು ರಾಜಣ್ಣನ ಪಾಪಪ್ರಜ್ಞೆಯನ್ನು ಬಡಿದೆಬ್ಬಿಸಿತು. ಒಳಗೊಳಗೇ ಹಲುಬಿದ. ತಾಯಿಯ ಹತ್ತಿರವೂ ತನ್ನ ದುಃಖವನ್ನು ಹೇಳಿಕೊಂಡ. ಆದರೆ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ನಪಾಸಾಗಿದ್ದು ಇಡೀ ಕುಟುಂಬಕ್ಕೆ ದೊಡ್ಡ ಬರಸಿಡಿಲು ಬಡಿದಂತಾಗಿತ್ತು. ತಂದೆಯನ್ನು ಕಳೆದುಕೊಳ್ಳಲು ಇದೊಂದೇ ಕಾರಣ ಸಾಕಾಗಿತ್ತು. ರಾಮ ಮಂದಿರಕ್ಕೆ ಇಟ್ಟಿಗೆ ಹೊತ್ತ ಕೈಗಳಿಂದಲೇ ತಂದೆಯ ಅಸ್ಥಿ ಹೊರುವ ಪರಿಸ್ಥಿತಿ ಬಂದೊದಗಿದ್ದು ರಾಜಣ್ಣನ ಜೀವನದ ಗತಿಯನ್ನೇ ಬದಲಾಯಿಸಿತ್ತು.

* * *

ತನ್ನ ಗತ ಜೀವನದ ನೆನಪುಗಳಿಂದ ಹೊರ ಬರುವಷ್ಟರಲ್ಲಿ ಬೆಳಕು ಹರಿದಿತ್ತು. ಗಡಿಬಿಡಿಯಿಂದ ಎದ್ದವನೇ ಅಂಗಡಿಗೆ ಓಡಿದ ರಾಜಣ್ಣನಿಗೆ ತಾನು ರಾತ್ರಿಯೆಲ್ಲಾ ಶಪಿಸುತ್ತಿದ್ದ ಸೀತಾರಾಂ ಎದುರಾಗಿದ್ದ.

''ಏನ್ ರಾಜಣ್ಣ ಊರೆಲ್ಲ ಹೊತ್ತಿ ಉರೀತಾ ಇದೆ, ನೀನು ಮಾತ್ರ ನಿರ್ಲಿಪ್ತನಾಗಿದ್ದೀಯಲ್ಲಾ, ನಿಂಗೇನೂ ನಮ್ಮವರ ಬಗ್ಗೆ ಕಾಳಜಿ ಇಲ್ವಾ ?'' ಸೀತಾರಾಂನ ವ್ಯಂಗ್ಯಕ್ಕೆ ಏನು ಹೇಳಬೇಕೆಂದು ರಾಜಣ್ಣನಿಗೆ ತೋಚಲಿಲ್ಲ.

''ನಮ್ಮ ಮನೆ ಬೆಂಕೀನೇ ಆರಿಸೊಕ್ಕಾಗ್ತಿಲ್ಲ, ಊರ್ನಲ್ಲೇನಾದ್ರೆ ನಂಗೇನು ಬಿಡಿ ಸಾರ್'' ಎಂದಷ್ಟೇ ಹೇಳಿ ನುಣುಚಿಕೊಳ್ಳಲು ಬಯಸಿದ.

''ಹಾಗಂದ್ರೆ ಹೇಗಪ್ಪಾ, ಮೊನ್ನೆ ನಡೆದ ಸಭೆಯಲ್ಲಿ ನಮ್ಮ ಲೀಡರ್ ರಗಾಡಿಯಾ ಹೇಳಿದ್ದನ್ನ ಕೇಳ್ಲಿಲ್ವಾ. ಆ ಹೊಸ ಪುಸ್ತಕದ ಬಗ್ಗೆ ಅಷ್ಟು ದೊಡ್ಡ ಲಕ್ಚರ್ ಕೊಟ್ಟಿದ್ದು ಯಾಕಂತೀಯ ? ಆ ಬಾಬರ್ ಸಂತಾನದೋರು ನಮ್ಮ ಮೇಲೆ ಎಷ್ಟು ರೀತಿಯಲ್ಲಿ ಅನ್ಯಾಯ ಮಾಡಿದ್ದಾರೆ ಅಂತ ಹೇಳ್ಲಿಲ್ವಾ. ಇವತ್ತಿಗೂ ನೋಡು ಎಲ್ಲಾ ಕಡೆ ಬಾಂಬು ಹಾಕ್ತಾನೇ ಇದ್ದಾರೆ. ಕಾಶ್ಮೀರದಲ್ಲಿ ನಮ್ಮವರನ್ನು ಕೊಲ್ತಾನೇ ಇದ್ದಾರೆ. ಔರಂಗಜೇಬನ ಸಂತಾನ ಇನ್ನೂ ಸತ್ತಿಲ್ಲ ಅಂತ ತಾನೇ ಆ ಕಾದಂಬರಿಯಲ್ಲಿ ಹೇಳಿರೋದು. ನಮ್ಮೂರಲ್ಲೇ ನೋಡು, ಆ ಈಶ್ವರನ ಗುಡಿ ಕೆಡವಿ ಮಸೀದಿ ಕಟ್ಟಿದ್ದಾರೆ. ನಾವು ಇಷ್ಟು ವರ್ಷ ತಿಳೀದೆ ಸುಮ್ನಿದ್ವಿ. ಈ ಪುಸ್ತಕ ಓದಿದ ಮೇಲೇನೆ ನಮ್ಮ ಗುರುಗಳು ಸಂಶೋಧನೆ ಮಾಡಿ ಕಂಡುಹಿಡಿದಿದ್ದಾರೆ. ಅಲ್ಲಿ ಐವತ್ತು ವರ್ಷಗಳ ಹಿಂದೆ ಸಣ್ಣ ಈಶ್ವರನ ಗುಡಿ ಇತ್ತಂತೆ, ಅವರ ತಾತಾನೇ ಅಲ್ಲಿ ಪೂಜೆ ಮಾಡ್ತಿದ್ರಂತೆ. ಅವರು ಸತ್ತಮೇಲೆ ಅದು ಪಾಳು ಗುಡಿ ಆಯ್ತಂತೆ. ಹಾಗಂತ ಇವರು ಅಲ್ಲಿ ಮಸೀದಿ ಕಟ್ಟಿಬಿಡೋದಾ.'' ಸೀತಾರಾಂನ ಭಾಷಣ ರಾಜಣ್ಣನ ತಲೆ ಚಿಟ್ಟು ಹಿಡಿಸುವಂತಿತ್ತು. ಸುಮ್ಮನಿದ್ದರೆ ಹೀಗೆ ತಲೆ ತಿನ್ನುತ್ತಾನೆಂದೂ ಅರಿವಾಯಿತು.

''ಇದ್ರೆ ಏನಂತೆ, ಇಷ್ಟು ವರ್ಷ ನಾವೂ ಅದೇ ಮಸೀದಿಯೊಂದಿಗೇ ಜೀವನ ಮಾಡ್ತಾನೇ ಇರ್ಲಿಲ್ವಾ, ಅದೇ ಬೀದೀಲಿ ನಾವು ಮನೆ ಮಾಡ್ಕೊಂಡು ಇಲ್ವಾ, ಈಗ್ಯಾಕೆ ಅದನ್ನ ದೊಡ್ಡ ವಿಷಯ ಮಾಡ್ತೀರಿ. ನಿಮ್ಮ ಮಾತು ಕೇಳಿ ಇಟ್ಟಿಗೆ ಹೊತ್ತು ಈಗ ಮಣ್ಣು ಹೊರೋ ಪರಿಸ್ಥಿತಿಗೆ ಬಂದಿದ್ದೀನಿ. ನನ್ನಂಥೋರು ಎಷ್ಟೋ ಜನ ಇದ್ದಾರೆ. ನಾವು ಮನೆ ಮನೆಗೆ ಹೊತ್ತು ತಿರುಗಿದ ಇಟ್ಟಿಗೆ ಏನಾಯ್ತು ಅಂತ ನಿಮಗೇನಾದ್ರೂ ಗೊತ್ತಾ. ಹಾಯಾಗಿರೋ ಜನರನ್ನ ಯಾಕೆ ಕೆರಳಿಸ್ತೀರಿ ? ಊರ್ನಲ್ಲಿ ಇರೋ ರಾಮಮಂದಿರಾನೇ

ಉದ್ಧಾರ ಮಾಡೋಕೆ ನಿಮ್ಗಿಂದ ಆಗಿಲ್ಲ. ಅವನಾರೋ ಟೋಪೀನಾಥ, ನಿಮ್ಮ ಸಂಘದ ಲಕ್ಷ ರೂಪಾಯಿ ತಿಂದು ಓಡಿಹೋದ. ಇನ್ನೊಬ್ಬ ಮನೆ ಕಟ್ಟಿಕೊಂಡ. ನೀವು ದೊಡ್ಡ ಬಂಗಲೆ ಕಟ್ಟಿಕೊಂಡು ಐಷಾರಾಮ ಜೀವನ ಮಾಡ್ತಾ ಇದ್ದೀರಿ. ನಿಮ್ಮ ಹಿಂದೆ ಇದ್ದೋರೆಲ್ಲಾ ಏನಾದ್ರು ಅಂತ ನಿಮ್ಗೇನಾದ್ರೂ ಗೊತ್ತಿದ್ಯಾ ಸೀತಾರಾಂ ಅವರೇ ?'' ತನ್ನ ಇಷ್ಟು ವರ್ಷದ ಆಕ್ರೋಶ ಒಮ್ಮೆಲೇ ರಾಜಣ್ಣನಿಂದ ಹೊರಹೊಮ್ಮಿತ್ತು.

''ಆ ಪುರಾಣ ಎಲ್ಲಾ ಯಾಕಯ್ಯಾ ಈಗ, ನಮ್ಮ ಧರ್ಮ ಉಳೀಬೇಕಂತ ತಾನೇ ನಾವಿದೆಲ್ಲಾ ಮಾಡ್ತಿರೋದು. ನಾಳೆ ನಮ್ಮ ದೇಶದಲ್ಲಿ ನಮಗೇ ಜಾಗ ಇಲ್ದೇ ಇರೋ ಹಾಗೆ ಮಾಡಿಬಿಡ್ತಾರೆ. ಅಷ್ಟೊಂದು ಭಾರೀ ಸಂಖ್ಯೇಲಿ ಮತಾಂತರ ನಡೀತಾ ಇದೆ. ನಮ್ಮ ಹಸುಗಳನ್ನೆಲ್ಲಾ ಸುಮ್ಮನೆ ಕೊಂದುಹಾಕ್ತಿದ್ದಾರೆ. ದೇವಸ್ಥಾನಗಳನ್ನೆಲ್ಲಾ ಕೆಡವಿಹಾಕ್ತಿದ್ದಾರೆ. ವಾರಾಣಸಿಯನ್ನೆ ಬಿಟ್ಟಿಲ್ಲ, ಅಲ್ಲಿ ಬಾಂಬ್ ಹಾಕಿದ್ದು ನಿಂಗೇನೂ ಗೊತ್ತಿಲ್ವೇ. ನಮ್ಮೂರಲ್ಲೇ ನೋಡು ಇಡೀ ಪಟೇಲ್ ಕಾಂಪೌಂಡನ್ನೇ ಆಕ್ರಮಿಸಿದ್ದಾರೆ. ಅಲ್ಲಿ ನುಸುಳೋಕೂ ನಿಂಗೆ ಜಾಗ ಇಲ್ಲ, ಅದೊಂದು ಮಿನಿ ಪಾಕಿಸ್ತಾನ್ ಥರ ಆಗಿದೆ. ಆ ಏರಿಯಾದಲ್ಲಿ ಒಂದು ಸೈಟು ತೊಗೋ ನೋಡೋಣ. ಯಾವುದ್ರಲ್ಲೂ ನಮ್ಮ ಜೊತೆ ಬೆರೆಯೋದಿಲ್ಲ. ಅವರದೇ ಸಾಮ್ರಾಜ್ಯ ಆಗಿದೆ. ಈಗ ನೋಡು ಪಟೇಲ್ ಕಾಂಪೌಂಡ್‌ನಲ್ಲಿ ಗಪ್ ಚುಪ್ ಅಂತಿದ್ದಾರೆ. ಅವರ ಅಟಾಟೋಪ ಎಲ್ಲಾ ನಿಂತ್ಹೋಗಿದೆ. ಹೀಗೇ ಪಾಠ ಕಲಿಸ್ದೇ ಇದ್ರೆ ನಮಗೇ ಠಿಕಾಣಿ ಇರಲ್ಲ. ನಾವು ಎಚ್ಚೆತ್ತುಕೊಳ್ದೇ ಇದ್ರೆ ನಾಳೆ ಇಲ್ಲಿ ಅಂಗಡಿ ಇಡೋಕೂ ನಿಂಗೆ ಜಾಗ ಸಿಗೋದಿಲ್ಲ'' ಸೀತಾರಾಂನ ಭಾಷಣ ಅಂಗಡಿಯವರೆಗೂ ನಡೆದೇ ಇತ್ತು.

ಇವರು ಮಾಡಿರೋ ಗಾಯತ್ರಿ ಬಡಾವಣೆಯಲ್ಲಿ ಹಸು ಸಾಕೋರಿಗೆ, ಮಾಂಸಾಹಾರಿಗಳಿಗೆ, ಸೈಟು ಕೊಡೋಲ್ಲ ಅಂತ ಹೇಳಿ ಒಂದೇ ಸಮುದಾಯದವರನ್ನು ಕೂಡಿಹಾಕುವುದೇ ಅಲ್ಲದೆ, ಅನೇಕ ಹಿಂದೂಗಳನ್ನೇ ದೂರವಿಟ್ಟಿರುವ ವಿಷಯ ಬಾಯಿಗೆ ಬಂದರೂ, ಇನ್ನು ಮಾತಿಗಿಳಿದರೆ ವ್ಯಾಪಾರ ನಡೆಯೋಲ್ಲ ಎಂದರಿತ ರಾಜಣ್ಣ ''ನೀವಿನ್ನು ಹೊರಡಿ ಸಾರ್ ಸಂಜೆ ಸಿಕ್ತೀನಿ'' ಎಂದು ಹೇಳಿ ಕಳಚಿಕೊಂಡಿದ್ದ.

* * *

ಸೀತಾರಾಂ ಪ್ರಸ್ತಾಪಿಸಿದ್ದ ಪಟೇಲ್ ಕಾಂಪೌಂಡಿನಲ್ಲಿ ನಡೆದ ಗಲಭೆ ಇಡೀ ಊರಿನ ವಾತಾವರಣವನ್ನೇ ಕಲುಷಿತಗೊಳಿಸಿತ್ತು. ಕರ್ಫ್ಯೂ ವಿಧಿಸಿದ್ದರಿಂದ ಒಂದು ವಾರ ವ್ಯಾಪಾರ ನಡೆದಿರಲಿಲ್ಲ. ಎಲ್ಲರದೂ ಅದೇ ಪರಿಸ್ಥಿತಿ. ತಂದಿಟ್ಟಿದ್ದ ಬಾಳೆ ಹಣ್ಣು, ವೀಳ್ಯದೆಲೆ, ಎಲ್ಲಾ ಕೊಳೆತುಹೋಗಿತ್ತು. ಸಾವಿರಾರು ರೂಪಾಯಿ ನಷ್ಟ, ಯಾರಿಗೆ ಹೇಳುವುದು. ತ್ಯಾಗ ಮಾಡೋದಕ್ಕೂ ಏನಾದರೂ ಇರಬೇಕಲ್ಲವೇ ಎನಿಸಿ ರಾಜಣ್ಣ ನಿಟ್ಟುಸಿರು ಬಿಟ್ಟ. ತನ್ನ ಬಾಲ್ಯದಲ್ಲಿ ಗೆಳೆಯರೊಂದಿಗೆ ಆಡಿ ಬೆಳೆದ ಪಟೇಲ್ ಕಾಂಪೌಂಡ್ ಇಂದು ಸ್ಮಶಾನವಾಗಿದ್ದನ್ನು ಕಂಡು ರಾಜಣ್ಣನ ಮನ ಕಲಕಿತ್ತು.

''ಕ್ಯಾ ರಾಜಾ ಬೇಟಾ, ತುಂ ಭಿ ಹಮಾರೆ ಸಾಥ್ ಇತ್‌ನೇ ಸಾಲ್ ಜಿಂದಗೀ ಗುಜಾರಾ ಹೈ. ಹಮೆ ಕ್ಯೂ ಐಸಾ ಹುವಾ'' ಎಂಬ ಖಾಲಿದ್ ಸಾಹೇಬರ ಮಾತಿಗೆ ರಾಜಣ್ಣನ ಬಳಿ ಉತ್ತರವೇ ಇರಲಿಲ್ಲ.

''ಬೇಜಾರು ಮಾಡಿಕೋಬೇಡಿ ಸಾರ್, ಯಾರೋ ಕಿಡಿಗೇಡಿಗಳ ತಪ್ಪಿಗೆ ನಾವೆಲ್ಲ ಶಿಕ್ಷೆ ಅನುಭವಿಸಬೇಕು ನೋಡಿ, ಎಲ್ಲಾ ಸರಿ ಹೋಗುತ್ತೆ'' ಎಂದು ಹೇಳಿದ ರಾಜಣ್ಣನಿಗೆ ಮಾತುಗಳೇ ಹೊರಡಲಿಲ್ಲ.

ಖಾಲಿದ್ ಸಾಹೇಬರು ಒಂದು ಕಾಲದಲ್ಲಿ ಪುರಸಭೆ ಅಧ್ಯಕ್ಷರಾಗಿದ್ದವರು. ರಾಜ್ಯೋತ್ಸವ, ಗಣೇಶನ ಹಬ್ಬ, ಯಾವುದೇ ಸಡಗರವಾದರೂ ಅವರದೇ ಮುಂದಾಳತ್ವ ಇರುತ್ತಿತ್ತು. ಊರಿನ ದೇವಸ್ಥಾನಗಳ ಜೀರ್ಣೋದ್ಧಾರಕ್ಕೂ ಅಪಾರ ವಂತಿಗೆ ನೀಡಿದ್ದವರು. ರಂಜಾನ್ ಬಂತೆಂದರೆ ಜಾತಿ ಮತ ನೋಡದೆ ಸಾವಿರಾರು ಬಡವರಿಗೆ ದಾನ ಧರ್ಮ ಮಾಡಿ, ಊಟ ಹಾಕುತ್ತಿದ್ದರು. ಕಳೆದ ವಾರ ನಡೆದ ಕೋಮುಗಲಭೆಗಳಲ್ಲಿ ಖಾಲಿದ್ ಸಾಹೇಬರ ಮನೆ ಧೂಳೀಪಟವಾಗಿತ್ತು. ಬಂಧನಕ್ಕೊಳಗಾಗಿದ್ದ ಅವರ ಮಗನನ್ನು ಬಳ್ಳಾರಿಯ ಜೈಲಿಗೆ ಅಟ್ಟಲಾಗಿತ್ತು. ಯಾರದೋ ತಪ್ಪು, ಯಾರಿಗೋ ಶಿಕ್ಷೆ ಎನ್ನುವಂತಾಗಿತ್ತು ಊರಿನ ಪರಿಸ್ಥಿತಿ.

ಕಂಡ ಕಂಡವರನ್ನೆಲ್ಲಾ ಪೊಲೀಸರು ಅರೆಸ್ಟ್ ಮಾಡುತ್ತಿದ್ದರು. ಗಲಭೆಗೆ ಕಾರಣರಾದ ನಾಯಕರು ಆರಾಮವಾಗಿ ತಿರುಗಾಡಿಕೊಂಡೇ ಇದ್ದರೂ, ಅಮಾಯಕರು ಬಲಿಯಾಗಿದ್ದರು. ಸೌಹಾರ್ದತೆಗೆ ಹೆಸರಾಗಿದ್ದ ಊರು ದ್ವೇಷದ ಜ್ವಾಲೆಗೆ ಸಿಲುಕಿತ್ತು. ಸ್ನೇಹಿತರಾಗಿದ್ದವರು ಬದ್ಧ ವೈರಿಗಳಾಗಿದ್ದರು. ಮಂದಿರ ಮಸೀದಿಗಳು ದ್ವೇಷ ಹರಡುವ ತಾಣಗಳಾಗಿದ್ದವು. ಇಷ್ಟಕ್ಕೂ ಗಲಭೆಯಾಗಲು ಕಾರಣವೇ ಇರಲಿಲ್ಲ. ಒಂದು ಕುಟುಂಬದವರಂತೆ ಬಾಳುತ್ತಿದ್ದ ಜನತೆಯಲ್ಲಿ ವೈಷಮ್ಯ ಹುಟ್ಟಿಸಲು ಒಂದು ಸಾಹಿತ್ಯ ಕೃತಿ ಆಧಾರವಾದದ್ದು ರಾಜಣ್ಣನಿಗೆ ಸಹಿಸಲಸಾಧ್ಯವಾಗಿತ್ತು. ಎಂದೂ ಯಾವುದೇ ಸಾಹಿತ್ಯವನ್ನು ಓದದ ಕೇಸರಿ ಪಡೆಗಳಿಗೆ ಈ ಕೃತಿ ಧರ್ಮಗ್ರಂಥವಾಗಿ ಪರಿಣಮಿಸಿದ್ದು ಇಡೀ ಗಲಭೆಗಳಿಗೆ ನಾಂದಿ ಹಾಡಿತ್ತು. ಐವತ್ತು ವರ್ಷಗಳಿಂದ ಯಾರ ಗ್ರಹಿಕೆಗೂ ಬಾರದಿದ್ದ ಶಿವನ ದೇವಾಲಯ ಧ್ವಂಸವಾಯಿತೆಂದು ಉದ್ಭವಿಸಿದ್ದು ಈ ಕೃತಿಯ ಪ್ರಚಾರದ ನಂತರವೇ. ಇದೇ ರೀತಿ ಜಿಲ್ಲೆಯಾದ್ಯಂತ ಅನೇಕ ಮಸೀದಿಗಳನ್ನು, ಚರ್ಚುಗಳನ್ನು ಪತ್ತೆಹಚ್ಚಿರುವುದಾಗಿ ಸೀತಾರಾಂ ಹೇಳುತ್ತಿದ್ದುದು ನೆನಪಾಗಿ ರಾಜಣ್ಣನ ಮನಸ್ಸು ಮತ್ತೂ ಖಿನ್ನವಾಗಿತ್ತು.

''ಈ ನೋಟಿಸ್ ತೊಗೊಂಡು ಇಲ್ಲೊಂದು ಸಹಿ ಮಾಡಿ ಸಾರ್'' ಎಂದು ಪುರಸಭೆಯ ಅಧಿಕಾರಿ ಕರೆದಾಗಲೇ ರಾಜಣ್ಣ ತನ್ನ ಚಿಂತನಾ ಲೋಕದಿಂದ ಹೊರಬಂದಿದ್ದ. ಸಹಿ ಮಾಡಿ ಕೊಟ್ಟು ನೋಟಿಸನ್ನು ಪಡೆದ ರಾಜಣ್ಣನಿಗೆ ನೋಟೀಸ್ ಏತಕ್ಕಾಗಿ ಬಂದಿದೆ ಎಂದು ತಿಳಿದಿತ್ತು. ತಾನು ಅಂಗಡಿ ಇಟ್ಟಿದ್ದ ರಸ್ತೆಯನ್ನು ಅಗಲ ಮಾಡಲು ಪುರಸಭೆ ಮೂರು ತಿಂಗಳ ಹಿಂದೆಯೇ ನೋಟೀಸು ನೀಡಿತ್ತು. ಈಗ ಅಂತಿಮ ನೋಟೀಸ್ ಬಂದಿರಬಹುದೆಂಬ ರಾಜಣ್ಣನ ಊಹೆ ಹುಸಿಯಾಗಲಿಲ್ಲ. ಇನ್ನು ಒಂದು ತಿಂಗಳೊಳಗೆ ಅಂಗಡಿ ತೆಗೆಯದಿದ್ದರೆ, ಪುರಸಭೆಯವರೇ ಎಲ್ಲಾ ಒತ್ತುವರಿ ಕಟ್ಟಡಗಳನ್ನು ಒಡೆದುಹಾಕುವುದು ಖಚಿತವಾಗಿತ್ತು.

ರಸ್ತೆ ಅಗಲೀಕರಣ ಯಾರಿಗಾಗಿ ಎಂಬ ಪ್ರಶ್ನೆ ರಾಜಣ್ಣನನ್ನು ಸದಾ ಕಾಡುತ್ತಿತ್ತು. ಈ ವಿಷಯದಲ್ಲಿ ನ್ಯಾಯಾಲಯದ ಮೊರೆ ಹೋಗುವಂತೆಯೂ ಇರಲಿಲ್ಲ. ಶ್ರೀಮಂತರೇನೋ ತಮ್ಮ ಮನೆಗಳನ್ನು ತಾವೇ ಕೆಡವಿ ಹೊಸ ಬಡಾವಣೆಗಳಿಗೆ ಹೋಗಲಾರಂಭಿಸಿದ್ದರು. ಮೂರು ತಿಂಗಳ ಹಿಂದೆ ಅಗಲೀಕರಣವನ್ನು ವಿರೋಧಿಸಿ ನಡೆಸಿದ್ದ ಹೋರಾಟಗಳೆಲ್ಲಾ ವ್ಯರ್ಥ ಆಯಿತೇನೋ ಎನಿಸತೊಡಗಿತ್ತು. ತನ್ನ ಜೀವನಾಧಾರವಾದ ಅಂಗಡಿ ಕೈಬಿಟ್ಟುಹೋಗುವುದನ್ನು ನೆನೆಯಲೂ ರಾಜಣ್ಣನಿಗೆ ಭಯವಾಗುತ್ತಿತ್ತು. ಒಬ್ಬ ತಂಗಿಯ ಮದುವೆಗಾಗಿ ವರನ ಶೋಧದಲ್ಲಿದ್ದ ರಾಜಣ್ಣನಿಗೆ ಜಂಘಾಬಲ ಉಡುಗಿಹೋಗಿತ್ತು. ಇಪ್ಪತ್ತು ವರ್ಷಗಳಿಂದ ತನ್ನ ಜೀವನವನ್ನು ರೂಪಿಸಲು ನೆರವಾಗಿದ್ದ ಪೆಟ್ಟಿಗೆ ಅಂಗಡಿ ಕೈಬಿಟ್ಟು ಹೋಗುವುದೇ ಅಲ್ಲದೆ, ಮುಂದಿನ ದಾರಿ ಏನೆಂದು ತೋಚದ ಸ್ಥಿತಿಯಲ್ಲಿ ಸಿಲುಕಿದ್ದ ರಾಜಣ್ಣನಿಗೆ ದಿಕ್ಕು ತೋಚದಂತಾಗಿತ್ತು.

* * *

ಊರಿನಲ್ಲಿ ಹೆಚ್ಚಾಗುತ್ತಿದ್ದ ವಾಹನಗಳು ಮತ್ತು ಜನದಟ್ಟಣೆಗೆ ಸರಿದೂಗಲು ರಸ್ತೆಗಳನ್ನು ಅಗಲ ಮಾಡಬೇಕೆಂಬ ಪುರಸಭೆಯ ತೀರ್ಮಾನ ಇಡೀ ಊರಿನ ವ್ಯಾಪಾರಸ್ಥರನ್ನು ರೊಚ್ಚಿಗೆಬ್ಬಿಸಿತ್ತು. ಆಗಲೇ ತರಕಾರಿ ಮಾರುಕಟ್ಟೆಯನ್ನು ಖಾಲಿ ಮಾಡಿಸಿ, ಊರಾಚೆಯ ಹೊಸ ಸಂತೆ ಮೈದಾನಕ್ಕೆ ವರ್ಗಾಯಿಸಲಾಗಿತ್ತು. ಊರಿನಿಂದ ಎರಡು ಕಿಲೊಮೀಟರ್ ದೂರದಲ್ಲಿ ಅಂಗಡಿ ಹಾಕುವ ಬದಲು ಮನೆ ಮನೆಗೆ ಹೋಗಿ ಮಾರುವುದನ್ನು ಅನೇಕರು ರೂಢಿಸಿಕೊಂಡಿದ್ದರು. ಆದರೂ ಹಲವಾರು ವರ್ಷಗಳಿಂದ ತಮ್ಮ ಸಣ್ಣ ಪುಟ್ಟ ಅಂಗಡಿಗಳನ್ನೇ ನಂಬಿ ಬಾಳಿದ್ದ ಅನೇಕರಿಗೆ ಪುರಸಭೆಯ ತೀರ್ಮಾನ ಆಘಾತಕರವಾಗಿತ್ತು. ರಸ್ತೆ ಅಗಲೀಕರಣವನ್ನು ವಿರೋಧಿಸಲು ಸಮಿತಿಯೊಂದನ್ನೂ ರಚಿಸಲಾಗಿತ್ತು. ತಮ್ಮ ಹೋರಾಟದಿಂದ ಗೆಲುವು ಸಾಧಿಸಬಹುದೆಂಬ ಆಶಾಭಾವನೆ ಇದ್ದರೂ ಈ ವಿಷಯದಲ್ಲಿ ಸರ್ವೋಚ್ಚ ನ್ಯಾಯಾಲಯವೂ ಮಧ್ಯೆ ಪ್ರವೇಶಿಸುವುದಿಲ್ಲವೆಂದು ತಿಳಿದಾಗ ನಿರಾಸೆಯ ಕಾರ್ಮೋಡ ಕವಿದಿತ್ತು.

ಆದರೂ ರಾಜಣ್ಣ ಮತ್ತು ಅವನ ಸ್ನೇಹಿತರು ಸಮಿತಿಯ ನೇತೃತ್ವದಲ್ಲಿ ಸುದೀರ್ಘ ಹೋರಾಟ ನಡೆಸಿದ್ದರು. ಸೀತಾರಾಂ ಅವರ ಕೇಸರಿ ಪಡೆಯೂ ಬೆಂಬಲ ನೀಡಿತ್ತು. ರಾಜಣ್ಣನ ಅಂಗಡಿ ಇದ್ದ ಬೀದಿಯಲ್ಲಿ ರಸ್ತೆಯಂಚಿನಲ್ಲಿ ನಿರ್ಮಿಸಿದ್ದ ಒಂದು ದರ್ಗಾವನ್ನು ಒಡೆಯಲು ಮುಸ್ಲಿಂ ಬಾಂಧವರು ವಿರೋಧಿಸಿದ್ದರೆ, ಅದೇ ರಸ್ತೆಯಲ್ಲಿನ ಗಣೇಶ ಗುಡಿಯನ್ನು ಉಳಿಸಿಕೊಳ್ಳಲು ಹಿಂದೂ ಸಂಘಟನೆಗಳು ಹಾರಾಡುತ್ತಿದ್ದವು. ಈ ರೀತಿಯಲ್ಲಾದರೂ ದೇವರು ರಕ್ಷಣೆಗೆ ಬರಬಹುದೆಂಬ ರಾಜಣ್ಣನ ನಂಬಿಕೆ ಹುಸಿಯಾಗಿತ್ತು. ಧಾರ್ಮಿಕ ಪೂಜಾ ಸ್ಥಳಗಳನ್ನು ಹೊರತುಪಡಿಸಿ ಉಳಿದೆಲ್ಲಾ ಒತ್ತುವರಿಯನ್ನು ತೆರವುಗೊಳಿಸಲು ಪುರಸಭೆ ತೀರ್ಮಾನಿಸಿತ್ತು. ಈ ತೀರ್ಮಾನದ ನಂತರದಲ್ಲಿ ಸೀತಾರಾಂ ಮುಂತಾದವರು ಹೋರಾಟದಿಂದ ಹಿಂದೆ ಸರಿದಿದ್ದು, ಇಡೀ ಹೋರಾಟಕ್ಕೆ ಹಿನ್ನಡೆ ಉಂಟಾಗಿತ್ತು. ತದನಂತರದಲ್ಲಿ ನಡೆದ ಕೋಮು ಗಲಭೆಗಳು ಈ ವಿಷಯವನ್ನೇ ಮರೆಮಾಚಿದ್ದವು.

ಶತಮಾನಗಳ ಹಿಂದೆ ಇತಿಹಾಸದಲ್ಲಿ ನಡೆದಿರಬಹುದಾದ ಕೆಲವು ಘಟನೆಗಳನ್ನೇ ವೈಭವೀಕರಿಸಿ, ಒಂದು ಸಮುದಾಯವನ್ನೇ ಆಕ್ರಮಣಕಾರರನ್ನಾಗಿ ಚಿತ್ರಿಸುವ ಸಾಹಿತ್ಯ ಕೃತಿಗಳಲ್ಲಿ, ನಮ್ಮ ಪಾಡೇಕೆ ಚಿತ್ರಿತವಾಗುವುದಿಲ್ಲ ಎಂಬ ಚಿಂತೆ ರಾಜಣ್ಣನನ್ನು ಕಾಡದಿರಲಿಲ್ಲ. ಜಾಗತೀಕರಣ ಎಂಬ ವಿಷ ವರ್ತುಲದಲ್ಲಿ ಅಭಿವೃದ್ಧಿ ಎಂದರೆ ಅಮಾಯಕರ, ಕಾರ್ಮಿಕರ, ಬಡ ಜನತೆಯ ಶೋಷಣೆಯೇ ಆಗಿರುತ್ತದೆ ಎಂಬ ಕಾರ್ಮಿಕ ನಾಯಕರೊಬ್ಬರ ಮಾತುಗಳು ನಿಜವೆನಿಸಿತು. ಊರಿನಲ್ಲಿ ಕೆರೆಯನ್ನು ಒತ್ತುವರಿ

ಮಾಡಿಕೊಂಡು ಗೃಹ ನಿರ್ಮಾಣ ಸಂಘ ಮಾಡಿ, ಲಕ್ಷಾಂತರ ರೂಪಾಯಿಗಳನ್ನು ಸಂಪಾದಿಸಿದವರು, ಹಳೆಯ ಸಂತೆ ಮೈದಾನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಬಂಗಲೆಗಳನ್ನು ನಿರ್ಮಿಸಿಕೊಂಡಿರುವವರು, ದೇವಸ್ಥಾನಗಳ ಜೀರ್ಣೋದ್ಧಾರದ ಹೆಸರಿನಲ್ಲಿ ವೈಭವಯುತ ರಾಜಗೋಪುರ ನಿರ್ಮಿಸಿ ರಸ್ತೆಗಳನ್ನು ಕಬಳಿಸಿದವರು ಐಷಾರಾಮ ಜೀವನ ನಡೆಸುತ್ತಿರುವುದನ್ನು ಕಣ್ಣಾರೆ ಕಂಡಿದ್ದ ರಾಜಣ್ಣನಿಗೆ ಧಾರ್ಮಿಕ ಪೂಜಾ ಸ್ಥಳಗಳು ಕ್ಷೇಮವೆಂದು ಖಚಿತವಾದ ಕೂಡಲೇ, ತನ್ನಂತಹ ನೂರಾರು ಒಡನಾಡಿಗಳನ್ನು ಮರೆತ ನಾಯಕರ ಬಗ್ಗೆ ಜಿಗುಪ್ಸೆ ಹುಟ್ಟಿತ್ತು. ಈ ಜನರು ಕಾರುಗಳಲ್ಲಿ ಓಡಾಡಲೆಂದೇ ರಸ್ತೆ ಅಗಲೀಕರಣ ಅವಶ್ಯವೇನೋ ಎನಿಸಿತು.

ನೂರಾರು ವರ್ಷಗಳ ಕಾಲ ಸಹೋದರರಂತೆ ಬಾಳಿದ್ದ ಊರ ಜನತೆಯಲ್ಲಿ ದ್ವೇಷದ ವಿಷಬೀಜ ಬಿತ್ತುವುದರ ಮೂಲಕ, ಮನಸ್ಸುಗಳನ್ನು ಒಡೆಯುವ ಕೆಲಸ ಮಾಡಿದ್ದ ಸೀತಾರಾಂರಂತಹವರ ಬಗ್ಗೆ ರಾಜಣ್ಣನಿಗೆ ಅಸಡ್ಡೆ ಮೂಡಿತು. ಬಹುಶಃ ಜಾಗತೀಕರಣ ಪ್ರಕ್ರಿಯೆಯ ಶೋಷಣೆಗೆ ಪೂರಕವಾಗಿಯೇ ಈ ಕೃತ್ಯಗಳೆಲ್ಲಾ ನಡೆಯುತ್ತಿದೆಯೇನೋ ಎಂದು ರಾಜಣ್ಣ ಯೋಚಿಸತೊಡಗಿದ್ದ. ಊರಿನಲ್ಲಿ ಇನ್ನೊಂದೆಡೆ ಬಾಡಿಗೆ ನೀಡಿ ಅಂಗಡಿ ಪ್ರಾರಂಭಿಸುವ ಶಕ್ತಿ ಇಲ್ಲದಿದ್ದ ರಾಜಣ್ಣನಿಗೆ, ಪುರಸಭೆಯವರು ಊರ ಹೊರಗೆ ಸಂತೆ ಮೈದಾನದ ಸಂಕೀರ್ಣದಲ್ಲಿ ಮಳಿಗೆಗಳನ್ನು ನಿರ್ಮಿಸಿಕೊಡುವುದರ ಬಗ್ಗೆ ಎನಿತು ವಿಶ್ವಾಸವೂ ಉಳಿದಿರಲಿಲ್ಲ. ಬ್ಯಾಂಕಿನಲ್ಲಿ, ಮಾರವಾಡಿಯ ಬಳಿ, ಸ್ನೇಹಿತರ ಬಳಿ ಮಾಡಿದ್ದ ಸಾಲಗಳನ್ನು ತೀರಿಸುವುದೇ ರಾಜಣ್ಣನ ಮುಂದಿನ ದೊಡ್ಡ ಸವಾಲಾಗಿತ್ತು. ತಂಗಿಯರ ಮದುವೆ, ತನ್ನ ಭವಿಷ್ಯ, ತಾಯಿಯ ಆರೋಗ್ಯ, ಮುಂದಿನ ದಿನಗಳ ಜೀವನ ಇವೆಲ್ಲವೂ ಕನ್ನಡಿಯೊಳಗಿನ ಗಂಟಿನಂತೆ ಭಾಸವಾಗತೊಡಗಿತ್ತು. ಬೆಂಗಳೂರಿಗೆ ಹೋಗಿ ದಿನಗೂಲಿ ಮಾಡುವುದೊಂದೇ ರಾಜಣ್ಣನ ಮುಂದಿನ ಹಾದಿಯಾಗಿತ್ತು. ದೇಶದಾದ್ಯಂತ ಸಾವಿಗೆ ಶರಣಾಗುತ್ತಿರುವ ರೈತರಲ್ಲಿ ತಾನೂ ಒಬ್ಬನಾಗಲು ರಾಜಣ್ಣ ಯೋಚಿಸಿದನಾದರೂ, ಮನಸ್ಸು ಒಪ್ಪಲಿಲ್ಲ.

''ನಾವು ಎಚ್ಚೆತ್ತುಕೊಳ್ದೇ ಇದ್ರೆ ನಾಳೆ ಇಲ್ಲಿ ಅಂಗಡಿ ಇಡೋಕೂ ನಿಂಗೆ ಜಾಗ ಸಿಗೋದಿಲ್ಲ'' ಎಂಬ ಸೀತಾರಾಂನ ಮಾತುಗಳು ಯಾರಿಗೆ ಅನ್ವಯಿಸುತ್ತವೆ ಎಂದು ಯೋಚಿಸುತ್ತಲೇ ರಾಜಣ್ಣ ಮನೆಯೆಡೆಗೆ ನಡೆದಿದ್ದ. ಪಲ್ಲಟಗೊಂಡ ಜೀವನದಿಯಲ್ಲಿ, ಹರಿಗೋಲಿಲ್ಲದ ನಾವೆಗೆ ನಾವಿಕನಾಗಲು ಮುನ್ನಡೆದಿದ್ದ.

ನಾ. ದಿವಾಕರ
ನಂ. ೫೦೪, 'ಚಿರಂತನ', ೧೩ನೇ ಕ್ರಾಸ್, ೨ನೇ ಹಂತ, ಶ್ರೀರಾಂಪುರ, ಮೈಸೂರು - ೫೭೦೦೨೩

# ಹೊಸ್ತಿಲು



ನನ್ನೆದುರಿಗೆ ಒಂದು ಭವ್ಯ ಕಟ್ಟಡ ಇದೆ.

ಎದುರುಗಡೆಯ ಗೋಡೆಯಲ್ಲಿ ಇಕ್ಕಟ್ಟಾದ ಬಾಗಿಲೊಂದು ತೆರೆದು ನಿಂತಿದೆ. ಆ ಬಾಗಿಲ ಹಿಂದೆ ಬರೀ ಕತ್ತಲು, ಬರೀ ಖಿನ್ನತೆ, ಎತ್ತರದ ಹೊಸ್ತಿಲ ಬಳಿ ಹುಡುಗಿಯೊಬ್ಬಳು ನಿಂತಿದ್ದಾಳೆ.

ಆ ಕರಾಳ ಕತ್ತಲೆ ಕೊರೆವ ಚಳಿಯನ್ನು ಉಸಿರಿಸುತ್ತಿದೆ. ರಕ್ತನಾಳಗಳನ್ನು ಹೆಪ್ಪುಗಟ್ಟಿಸುವ ಚಳಿಯಿಂದ ಕೂಡಿದ ಆ ಕಟ್ಟಡದ ಗರ್ಭದಾಳದಿಂದ ಒಂದು ನಿಧಾನವಾದ, ಕೃಶವಾದ ಧ್ವನಿ ಕೇಳುತ್ತದೆ.

''ನೀನು, ನೀನು ಈ ಹೊಸ್ತಿಲನ್ನು ದಾಟಬಯಸುವೆಯಾ ? ಈ ಹೊಸ್ತಿಲು ದಾಟಿದರೆ ನಿನಗಾಗಿ ಒಳಗಡೆ ಏನು ಕಾದಿದೆಯೆಂಬುದು ನಿನಗೆ ಗೊತ್ತಿದೆಯೆ ?''

''ನನಗೆ ಗೊತ್ತಿದೆ'' ಆ ಹುಡುಗಿ ಉತ್ತರಿಸುತ್ತಾಳೆ.

''ಚಳಿ, ಹಸಿವು, ದ್ವೇಷ, ತಿರಸ್ಕಾರ, ಅಣಕ, ಅವಹೇಳನ, ನೋವು, ಸೆರೆ, ಬೇನೆ, ಬಳಲಿಕೆ, ರೋಗ ಮತ್ತು ಸಾವು'' ಧ್ವನಿ ಹೇಳಿತು.

''ನನಗೆ ಗೊತ್ತಿದೆ'' ಹುಡುಗಿ ನುಡಿದಳು.

''ಪೂರ್ಣ ಪರಾಧೀನತೆ, ಅನಾಥತೆ, ಏಕಾಂತತೆ'' ಧ್ವನಿ ಎಚ್ಚರಿಸಿತು.

''ನನಗೆ ಗೊತ್ತಿದೆ. ನಾನು ಅದಕ್ಕೆ ಸಿದ್ಧಳಾಗಿದ್ದೇನೆ. ಎಲ್ಲ ಕಷ್ಟಗಳನ್ನು ಸಹಿಸಬಲ್ಲೆ, ಎಲ್ಲ ಪೆಟ್ಟುಗಳನ್ನು ತಾಳಬಲ್ಲೆ, ಬಾಳ ಬಲ್ಲೆ, ಎಲ್ಲ ನೋವುಗಳೆದುರು ನಿಲ್ಲಬಲ್ಲೆ, ಗೆಲ್ಲಬಲ್ಲೆ'' ಹುಡುಗಿ ಹೇಳಿದಳು.

''ಕಷ್ಟಗಳ ಸುರಿಮಳೆ. ಬರೀ ವೈರಿಗಳಿಂದಷ್ಟೇ ಅಲ್ಲ, ಬಂಧುಗಳಿಂದಲೂ ಬರಬಹುದು. ಗೆಳೆಯರಿಂದಲೂ ಕೂಡಾ.''

''ಹೌದು... ಅವರೆಲ್ಲರಿಂದಲೂ...''

''ಒಳ್ಳೇದು. ಆತ್ಮತ್ಯಾಗಕ್ಕೆ ನೀನು ಸಿದ್ಧಳಿರುವೆಯಾ ?''

''ಸಿದ್ಧಳಿರುವೆ.''

''ಅಜ್ಞಾತ ಕಾರಣಕ್ಕಾಗಿಯೂ ಆತ್ಮತ್ಯಾಗಕ್ಕಾಗಿ ಸಿದ್ಧಳಾಗಿರುವೆಯಾ ? ಸರ್ವನಾಶವಾಗುವವಳು ನೀನೊಬ್ಬಳೇ. ಮತ್ತಾರೂ ಅಲ್ಲ... ನಿನ್ನ ತ್ಯಾಗಕ್ಕಾಗಿ, ನಿನ್ನ ಅಗಲಿಕೆಗಾಗಿ, ನಿನ್ನ ನೆನಪಿಗಾಗಿ ಒಂದು ಒಳಿತಿನ ಮಾತು, ಒಂದು ಕರುಣೆಯ ಹೃದಯ ನಿನಗಾಗಿ ಇರುವುದಿಲ್ಲ.''

''ನನಗೆ ಕೃತಜ್ಞತೆಯ ಮಾತೂ ಬೇಕಿಲ್ಲ. ಕರುಣೆಯ ಹೃದಯವೂ ಬೇಕಿಲ್ಲ. ಕೀರ್ತಿ, ಕನಕ, ಸುಖ, ಸಮೃದ್ಧಿ ನನಗೇನೊಂದೂ ಬೇಕಿಲ್ಲ.''

''ಹಾಗಾದರೆ ನೀನೊಂದು ಅಪರಾಧ ಮಾಡಲು ಸಿದ್ಧಳಿರುವೆಯಾ ?'' ಧ್ವನಿ ಕೇಳಿತು.

ಹುಡುಗಿ ತಲೆ ತಗ್ಗಿಸಿದಳು ಮತ್ತು ಹೇಳಿದಳು, ''ಆಗಲಿ, ಅಪರಾಧ ಮಾಡಲು ಸಿದ್ಧಳಿರುವೆ.''

ತನ್ನ ಪ್ರಶ್ನೆಗಳನ್ನು ಮುಂದುವರಿಸುವ ಮೊದಲು ಒಂದು ಗಳಿಗೆ ಆ ಧ್ವನಿ ಮೌನಗೊಂಡಿತು. ಮತ್ತೆ ಮಾತನಾಡತೊಡಗಿತು, ''ನಿನ್ನ ಈಗಿನ ಎಲ್ಲ ನಂಬಿಕೆಗಳಲ್ಲಿ ನೀನು ವಿಶ್ವಾಸ ಕಳೆದುಕೊಳ್ಳಬಹುದೆಂದು ನಿನಗೆ ತಿಳಿದಿದೆಯೆ ? ನಿನ್ನ ತಾರುಣ್ಯವನ್ನು ವ್ಯರ್ಥವಾಗಿ ಹಾಳು ಮಾಡಿಕೊಂಡ ಮಹಾ ತಪ್ಪು ಮಾಡಿದೆಯೆಂದು ಪಶ್ಚಾತ್ತಾಪ ಪಡುವ ಸ್ಥಿತಿ ನಿನ್ನದಾಗಬಹುದೆಂಬ ಕಲ್ಪನೆ ನಿನಗಿದೆಯೆ ?''

''ಅದೂ ಕೂಡಾ ನನಗೆ ಗೊತ್ತಿದೆ. ಆದರೂ ನಾನು ಹೊಸ್ತಿಲು ದಾಟಬಯಸುತ್ತೇನೆ. ಒಳಗೆ ಹೆಜ್ಜೆ ಇಡಬಯಸುತ್ತೇನೆ.''

''ಹಾಗಾದರೆ ಹೊಸ್ತಿಲು ದಾಟು. ಒಳಗೆ ಬಾ.''

ಹುಡುಗಿ ಹೊಸ್ತಿಲು ದಾಟಿದಳು... ಮತ್ತು ಅವಳ ಬೆನ್ನ ಹಿಂದೆಯೇ ಭಾರವಾದ ಪರದೆ ಬಿದ್ದಿತು.

''ಅವಳೊಬ್ಬ ಶತಮೂರ್ಖಳು !'' ಅವಳ ಬೆನ್ನ ಹಿಂದೆ ಬಂದ ಕ್ಷೀಣ ಧ್ವನಿ ಕೇಳಿಬಂತು.

''ಅಲ್ಲ, ಅವಳೊಬ್ಬ ಸಂತಳು !'' ಎಲ್ಲಿಂದಲೋ ಒಂದು ಉತ್ತರ ತೂರಿಬಂತು.

ಮೂಲ ಕಥೆ : ಇವಾನ್ ಟರ್ಗೆನೆವ್
ಕನ್ನಡಕ್ಕೆ : ಟಿ. ವಿ. ಮಾಗಳದ
ಮನೆ 'ನಿಸರ್ಗ', ಹಿರೇಮಲ್ಲೂರ ಈಶ್ವರನ್ ಪಿಯು ಕಾಲೇಜ್ ಎದುರಿಗೆ
೮ನೇ ಕ್ರಾಸ್, ಕಲ್ಯಾಣ ನಗರ, ಧಾರವಾಡ - ೫೮೦೦೦೭

# ಹನ್ನೊಂದನೆಯ ಪಂಚವಾರ್ಷಿಕ ಯೋಜನೆಯ ಗುರಿ ಮತ್ತು ಕಠಿಣ ಸವಾಲುಗಳು

ಸ್ವಾತಂತ್ರ್ಯಾನಂತರ ದೇಶದ ಸರ್ವಾಂಗೀಣ ಅಭಿವೃದ್ಧಿಗಾಗಿ ಪಂಚವಾರ್ಷಿಕ ಯೋಜನೆಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಅದರಂತೆ ಈವರೆಗೆ ಹತ್ತು ಪಂಚವಾರ್ಷಿಕ ಯೋಜನೆಗಳ ಕಾರ್ಯಾವಧಿ ಮುಗಿದಿದ್ದರೂ ಅವುಗಳಿಂದಾಗಿ ನಿರೀಕ್ಷಿತ ಅಭಿವೃದ್ಧಿಯೇನನ್ನೂ ಕಾಣಲಿಲ್ಲ. ಈಗ ಹನ್ನೊಂದನೆ ಪಂಚವಾರ್ಷಿಕ ಯೋಜನೆಗೆ ರಾಷ್ಟ್ರೀಯ ಅಭಿವೃದ್ಧಿ ಪರಿಷತ್ತಿನಿಂದ ಮಂಜೂರಾತಿ ಸಿಕ್ಕಿದೆ. ಕಳೆದ ಏಪ್ರಿಲ್ ೨೦೦೭ರಿಂದಲೇ ಕಾರ್ಯಾರಂಭ ಮಾಡಿದೆ. ಇದು ಮುಂದಿನ ೨೦೧೨ ಮಾರ್ಚ್ ೩೧ಕ್ಕೆ ಮುಗಿಯಲಿದೆ.

ಮುಂಬರುವ ೫ ವರ್ಷಗಳಲ್ಲಿ ದೇಶದ ಸಂಪೂರ್ಣ ಚಿತ್ರಣವನ್ನೇ ಬದಲಿಸುವ ಹೆಗ್ಗುರಿಯನ್ನಿಟ್ಟುಕೊಂಡು ಈ ಯೋಜನೆಯ ಕಾರ್ಯಸೂಚಿಯನ್ನು ತಯಾರಿಸಲಾಗಿದೆ. ಈ ಅವಧಿಯಲ್ಲಿ ದೇಶದ ಆರ್ಥಿಕ ಅಭಿವೃದ್ಧಿ ದರದ ಗುರಿಯನ್ನು ಶೇಕಡಾ ೯-೧೦ರವರೆಗೆ ಇಟ್ಟುಕೊಳ್ಳಲಾಗಿದೆ. ೧೧ನೇ ಪಂಚವಾರ್ಷಿಕ ಯೋಜನೆಯ ಅಂದಾಜು ವೆಚ್ಚ ೩೬,೪೪,೭೧೮ ಕೋಟಿ ರೂಪಾಯಿಗಳು. ಈ ಮೊತ್ತ ೧೦ನೇ ಯೋಜನೆಗಿಂತ ಶೇಕಡಾ ೧೨೦ರಷ್ಟು ಅಧಿಕವಾಗಿದೆ. ಹನ್ನೊಂದನೆ ಯೋಜನೆಗಾಗಿ ಬಜೆಟ್ಟಿನಲ್ಲಿ ೧೪,೮೮,೧೪೭ ಕೋಟಿ ರೂಪಾಯಿಗಳನ್ನು ನಿಗದಿಪಡಿಸಲಾಗಿದೆ. ಇದರ ಶೇಕಡಾ ೪೦ರಷ್ಟು ಭಾಗವನ್ನು ಕೇಂದ್ರ ಮಂತ್ರಿ ಮಂಡಲದ ನಿಗದಿತ ಯೋಜನೆಗಳ ಮೇಲೆ ಖರ್ಚು ಮಾಡಲಾಗುವದು. ೧೦ನೇ ಯೋಜನೆಯಲ್ಲಿ ಈ ಭಾಗ ಶೇಕಡಾ ೩೮ರಷ್ಟಿತ್ತು. ೧೦ನೇ ಯೋಜನೆಯಲ್ಲಿ ರಾಜ್ಯಗಳ ಭಾಗ ಶೇಕಡಾ ೩೭ರಷ್ಟಿದ್ದದ್ದು ಇದು ಈಗ ೧೧ನೇ ಯೋಜನೆಯಲ್ಲಿ ಶೇಕಡಾ ೨೨.೮ರಷ್ಟಾಗಿದೆ. ೧೧ನೇ ಪಂಚವಾರ್ಷಿಕ ಯೋಜನೆಯ ಗುರಿಯನ್ನು ರಾಷ್ಟ್ರೀಯ ಸಮಗ್ರ ವಿಕಾಸದ ತತ್ವದ ಮೇಲೆ ಕೇಂದ್ರೀಕರಿಸಲಾಗಿದೆ. ಇದಕ್ಕಾಗಿ ಒಟ್ಟು ೨೭ ಗುರಿಗಳನ್ನು ಇಟ್ಟುಕೊಳ್ಳಲಾಗಿದೆಯಂತೆ. ಇದರಲ್ಲಿ ೧೩ ಗುರಿಗಳನ್ನು ಸಾಧಿಸುವುದು ರಾಜ್ಯಗಳ ಜವಾಬ್ದಾರಿಯಾಗಿರುತ್ತದೆ. ರಾಷ್ಟ್ರಮಟ್ಟದ ಗುರಿಯನ್ನು ಸಾಧಿಸುವದರಲ್ಲಿ ೬ ಕ್ಷೇತ್ರಗಳಿಗೆ ಮಹತ್ವವನ್ನು ನೀಡಲಾಗಿದೆ. ಅವುಗಳೆಂದರೆ, ಆದಾಯ ಮತ್ತು ಬಡತನ, ಶಿಕ್ಷಣ, ಆರೋಗ್ಯ, ಮಹಿಳೆ ಮತ್ತು ಮಕ್ಕಳ ಕಲ್ಯಾಣ, ರಚನಾತ್ಮಕ ಪ್ರಗತಿ ಮತ್ತು ಪರ್ಯಾವರಣ. ಆದಾಯ ಮತ್ತು ಬಡತನದಲ್ಲಿ ಅಭಿವೃದ್ಧಿ ಪ್ರಮಾಣವನ್ನು ಶೇಕಡ ೯-೧೦ರಷ್ಟಾಗಿರಬೇಕೆಂದು ಗುರಿಯನ್ನು ನಿಗದಿಪಡಿಸಿಕೊಳ್ಳಲಾಗಿದೆ. ಕೃಷಿಯಲ್ಲಿನ ಪ್ರಗತಿ ದರವನ್ನು ಪ್ರತಿವರ್ಷ ಶೇಕಡ ೪ರಷ್ಟು ನಿಗದಿಗೊಳಿಸಲಾಗಿದೆ. ೧.೪ ಕೋಟಿ ಹೊಸ ಉದ್ಯೋಗಾವಕಾಶಗಳನ್ನು ಸೃಷ್ಟಿಸುವುದು, ನಿರುದ್ಯೋಗಿ ಪದವೀಧರರಿಗೆ ಉದ್ಯೋಗಾವಕಾಶಗಳನ್ನು ಒದಗಿಸಿಕೊಟ್ಟು ಅವರ ಸಂಖ್ಯೆಯನ್ನು ಶೇಕಡ ೩೦ರಷ್ಟು ಹೆಚ್ಚಳ ಮಾಡುವುದು, ಬಡವರ ಸಂಖ್ಯೆಯಲ್ಲಿ ಶೇಕಡ ೫ರಷ್ಟು ಕಡಿಮೆಗೊಳಿಸುವುದು, ಕೂಲಿಕಾರರ ಆದಾಯದಲ್ಲಿ ೧೦ರಷ್ಟು ಹೆಚ್ಚಿಸುವುದು – ಮುಂತಾದ ಗುರಿಗಳನ್ನು ಇರಿಸಿಕೊಳ್ಳಲಾಗಿದೆ.

ಶಿಕ್ಷಣದ ಗುರಿಯಲ್ಲಿ ಅನೇಕ ಮಹತ್ವಪೂರ್ಣವಾದ ನಿರ್ಧಾರಗಳನ್ನು ಅಳವಡಿಸಿಕೊಳ್ಳಲಾಗಿದೆ. ೨೦೧೧-೧೨ ರೊಳಗೆ ಮಧ್ಯದಲ್ಲೆ ಶಾಲೆ ಬಿಡುವಂಥ ಪ್ರಾಥಮಿಕ ಶಾಲಾ ಮಕ್ಕಳ ಸಂಖ್ಯೆಯಲ್ಲಿ ಶೇಕಡ ೩೦ರಷ್ಟು ಕಡಿತಗೊಳಿಸುವದು, ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸುವದು, ಸಾಕ್ಷರತೆಯ ಪ್ರಮಾಣವನ್ನು ಶೇಕಡ ೮೫ರಷ್ಟು ಹೆಚ್ಚಿಸುವದು, ಪ್ರಾಥಮಿಕ ಶಿಕ್ಷಣದಲ್ಲಿ ಲಿಂಗ ಭೇದದ ತಾರತಮ್ಯ ಶೇಕಡ ೧೦ಕ್ಕೆ ಇಳಿಸುವದು, ಉಚ್ಚ ಶಿಕ್ಷಣ ಕಲಿಯುವವರ ಸಂಖ್ಯೆಯನ್ನು ಶೇಕಡ ೧೦ರಿಂದ ೧೫ಕ್ಕೆ ಏರಿಸುವದು ಮುಂತಾದವುಗಳು ಶಾಮೀಲಾಗಿವೆ.

> ೧೧ನೇ ಪಂಚವಾರ್ಷಿಕ ಯೋಜನೆಯ ಮುಂದಿರುವ ಒಂದು ದೊಡ್ಡ ಸವಾಲು ಏನೆಂದರೆ ಮಹತ್ತರ ಪ್ರಮಾಣದ ವಿದೇಶಿ ಬಂಡವಾಳವನ್ನು ಅವಲಂಬಿಸಿರುವದು. ಇದರಿಂದ ದೇಶದ ಜಿಡಿಪಿಯಲ್ಲಿ ಶೇಕಡಾ ೪೦ರಷ್ಟು ಭಾಗ ವಿದೇಶಿ ವ್ಯಾಪಾರ ಮತ್ತು ವಿದೇಶಿ ಬಂಡವಾಳದಾರರದೇ ಆಗಿದೆ. ಹಾಗಾಗಿ ಅಮೆರಿಕಾ ಮತ್ತು ಪಾಶ್ಚಿಮಾತ್ಯ ದೇಶಗಳಲ್ಲಿ ಕುಂಠಿತಗೊಂಡಿರುವ ಆರ್ಥಿಕ ಅಭಿವೃದ್ಧಿ ಭಾರತಕ್ಕೆ ಧಕ್ಕೆ ಉಂಟುಮಾಡಬಲ್ಲದು. ನಮ್ಮ ದೇಶದ ಆರ್ಥಿಕ ತಜ್ಞರು ಹೇಳುತ್ತಾರೆ – ಹನ್ನೊಂದನೆ ಯೋಜನೆಯ ಗುರಿ ತಲುಪುವಲ್ಲಿ ಎದುರಾಗುವ ಕಠಿಣ ಪರಿಸ್ಥಿತಿಯನ್ನೆದುರಿಸಲು ಈಗಿನಿಂದಲೇ ಸರ್ವ ಪ್ರಯತ್ನಗಳನ್ನು ದ್ವಿಗುಣಗೊಳಿಸಬೇಕಾಗಿದೆ, ಎಂದು. ನಿರ್ಯಾತದ ಗುರಿಯನ್ನು ತಲುಪುವಲ್ಲಿ ಗಮನ ಹರಿಸಬೇಕಾಗಿದೆ. ಕಚ್ಚಾ ತೈಲಗಳ ಬೆಲೆ ಏರಿಕೆಯಿಂದಾಗುವ ದುಷ್ಪರಿಣಾಮಗಳನ್ನು ಎದುರಿಸಲು ಅತಿ ಶೀಘ್ರವಾಗಿ ಬದಲಿ ಉಪಾಯಗಳತ್ತ ಯೋಜಿಸಬೇಕಾಗಿದೆ.
>
> **ಎಂ.ಬಿ. ಸಾಯ್ಕ್**

ಆರೋಗ್ಯಕ್ಕೆ ಸಂಬಂಧಪಟ್ಟಂತೆ ಇಟ್ಟಿರುವ ಗುರಿಗಳಲ್ಲಿ ಮಕ್ಕಳ ಮರಣದ ಸಂಖ್ಯೆಯನ್ನು ಶೇಕಡಾ ೨೮ಕ್ಕೆ ಇಳಿಸುವದು, ತಾಯಂದಿರ ಸಾವಿನ ಸಂಖ್ಯೆಯನ್ನು ಸಾವಿರಕ್ಕೆ ಒಂದರಷ್ಟು ಇಳಿಸುವದು, ಪ್ರಜನನ ದರವನ್ನು ೨.೧ಕ್ಕೆ ಇಳಿಸುವದು, ೨೦೦೯ರೊಳಗೆ ಎಲ್ಲರಿಗೂ ಕುಡಿಯುವ ನೀರು ಸಿಗುವಂತೆ ನೋಡಿಕೊಳ್ಳುವದು, ನ್ಯೂನಪೋಷಣೆಯಿಂದ ಬಳಲುತ್ತಿರುವ ೩ ವರ್ಷದೊಳಗಿನ ಮಕ್ಕಳ ಸಂಖ್ಯೆಯನ್ನು ಅರ್ಧಕ್ಕೆ ತಂದು ನಿಲ್ಲಿಸುವದು, ಮಹಿಳೆ ಮತ್ತು ಬಾಲಿಕೆಯರಲ್ಲಿ ರಕ್ತದ ಕೊರತೆಯಿಂದಾಗಿ ಸಾಯುತ್ತಿರುವವರ ಈಗಿನ ಸಂಖ್ಯೆಯನ್ನು ಅರ್ಧಕ್ಕೆ ಇಳಿಸುವದು ಶಾಮೀಲಾಗಿವೆ. ಅದರಂತೆ ಮಹಿಳಾ ಮತ್ತು ಮಕ್ಕಳ ಕಲ್ಯಾಣದ ಗುರಿ - ಇತ್ತೀಚಿನ ವರ್ಷಗಳಲ್ಲಿ ಗಂಡು - ಹೆಣ್ಣಿನ ಲಿಂಗಾನುಪಾತದಲ್ಲಿ ಬಹಳ ಅಂತರವಿದೆ. ಅದಕ್ಕಾಗಿ ೨೦೧೧-೧೨ರವರೆಗೆ ಈ ಅನುಪಾತದಲ್ಲಿ ೯೩೫ರ ಪ್ರಮಾಣದಲ್ಲಿ ಏರಿಕೆಯಾಗುವಂತೆ ಮಾಡುವದು, ಮುಂದೆ ೨೦೧೬-೧೭ರವರೆಗೆ ೯೫೦ಕ್ಕೆ ಏರಿಕೆಯಾಗುವಂತೆ ಮಾಡುವದರತ್ತ ಗಮನ ಹರಿಸುವದು. ಸರಕಾರಿ ಯೋಜನೆಗಳಲ್ಲಿ ಮಹಿಳೆಯರಿಗೆ ಶೇಕಡಾ ೩೩ರಷ್ಟು ಮೀಸಲಾತಿ ಒದಗಿಸುವದು. ಮಕ್ಕಳು ಯಾರಿಗೂ ಹೊರೆಯಾಗದಂಥ ವಾತಾವರಣವನ್ನು ನಿರ್ಮಿಸಿ ಅವರನ್ನು ರಕ್ಷಿಸುವದು. ಮಹಿಳೆಯರಿಗೆ ಎಲ್ಲಾ ವಿಧದಲ್ಲೂ ಯೋಗ್ಯ ಸಂರಕ್ಷಣೆಯನ್ನು ನೀಡುವದು ಮತ್ತು ಸರಕಾರದ ಎಲ್ಲ ಯೋಜನೆಗಳಲ್ಲಿ ಮಹಿಳೆಯರನ್ನು ತೊಡಗಿಸಿಕೊಳ್ಳುವಂತೆ ನೋಡಿಕೊಳ್ಳುವುದು ಶಾಮೀಲಾಗಿವೆ. ಅಷ್ಟೇ ಅಲ್ಲ, ಮಹಿಳೆಯರ ಉನ್ನತಿಗಾಗಿ ಐದು ವಿಧಗಳ ಲಿಂಗ ಸಮಾನತೆಯ ಸೂತ್ರಗಳನ್ನು ಸಹ ಅಳವಡಿಸಲಾಗಿದೆ. ಈ ಸೂತ್ರದಂತೆ ಒಂದು - ಹಣಕಾಸಿನ ಅಧಿಕಾರ, ಎರಡು ಸಾಮಾಜಿಕ ಸಮಾನತೆ, ಮೂರು ರಾಜಕೀಯ ಸಮಾನತೆ, ನಾಲ್ಕು ಮಹಿಳೆಯರಿಗೆ ಸಂಬಂಧಿಸಿದ ಎಲ್ಲ ಕಾನೂನುಗಳನ್ನು ಜಾರಿಗೊಳಿಸುವದು ಮತ್ತು ಮಹಿಳೆಯರಿಗೆ ಸಂಬಂಧಿಸಿದ ಎಲ್ಲ ಯೋಜನೆಗಳನ್ನು ಕಾರ್ಯಗತಗೊಳಿಸುವಂತೆ ಕ್ರಮಕೈಗೊಳ್ಳುವುದು.

೧೧ನೇ ಪಂಚವಾರ್ಷಿಕ ಯೋಜನೆಯಲ್ಲಿ ಗ್ರಾಮೀಣಾಭಿವೃದ್ಧಿಗೆ ಒತ್ತುಕೊಡಲಾಗಿದೆ. ೨೦೦೯ರೊಳಗೆ ಗ್ರಾಮೀಣ ವಿಭಾಗದಲ್ಲಿ ವಾಸವಿರುವ ಎಲ್ಲ ಬಿಪಿಎಲ್ ಕಾರ್ಡುದಾರರಿಗೂ ವಿದ್ಯುತ್ ಸೌಲಭ್ಯ ದೊರಕಿಸಿಕೊಡುವದರೊಂದಿಗೆ ೨೪ ಗಂಟೆಯೂ ವಿದ್ಯುತ್ ಸೌಕರ್ಯ ಸಿಗುವಂತೆ ನೋಡಿಕೊಳ್ಳುವದು. ಅಷ್ಟೇ ಅಲ್ಲ ೨೦೦೯ರೊಳಗೆ ಬಯಲು ಪ್ರದೇಶದ ೧೦೦೦ ಜನ ಸಂಖ್ಯೆಯುಳ್ಳ ಪ್ರದೇಶ ಮತ್ತು ಗುಡ್ಡಗಾಡು

ಪ್ರದೇಶಗಳಲ್ಲಿ ೫೦೦ ರಷ್ಟು ಜನಸಂಖ್ಯೆ ಇರುವ ಪ್ರದೇಶಗಳನ್ನೆಲ್ಲ ಮುಖ್ಯ ರಸ್ತೆಯೊಂದಿಗೆ ಜೋಡಿಸುವದು. ೨೦೧೫ರೊಳಗೆ ದೇಶದ ಎಲ್ಲಾ ಹಳ್ಳಿಗಳನ್ನು ಮುಖ್ಯ ರಸ್ತೆಯೊಂದಿಗೆ ಜೋಡಿಸಿ ಸಂಪರ್ಕ ಕಲ್ಪಿಸುವುದು. ೨೦೧೨ರೊಳಗೆ ದೇಶದ ಎಲ್ಲ ಹಳ್ಳಿಗಳಿಗೂ ಟೆಲಿಫೋನ್ ಸಂಪರ್ಕ ಕಲ್ಪಿಸುವದು ಮತ್ತು ಬ್ರಾಂಡ್‌ಬ್ಯಾಂಡ್ ಕನೆಕ್ಷನ್ ದೊರಕಿಸಿಕೊಡುವದು. ೨೦೧೨ರೊಳಗೆ ಎಲ್ಲ ಭೂಮಿಹೀನರಿಗೂ ನೆಲವನ್ನು ದೊರಕಿಸಿಕೊಡುವುದು. ೨೦೧೬-೧೭ರೊಳಗೆ ಎಲ್ಲ ಬಡವರಿಗೂ ಮನೆಮಾಡಿ ಕೊಡುವದೂ ಸಹ ೧೧ನೇ ಪಂಚವಾರ್ಷಿಕ ಯೋಜನಯಲ್ಲಿ ಶಾಮೀಲಾಗಿದೆ. ಈ ಎಲ್ಲ ಅಭಿವೃದ್ಧಿ ಕಾರ್ಯಗಳ ಮೂಲಕ ದೇಶದ ಪ್ರಗತಿ ದರವನ್ನು ಕಾಯಂ ಆಗಿ ಶೇಕಡಾ ೯-೧೦ರ ಹತ್ತಿರದಲ್ಲಿಯೇ ಇರುವಂತೆ ನೋಡಿಕೊಳ್ಳುವ ಎಲ್ಲ ವ್ಯವಸ್ಥೆಗಳನ್ನು ಮಾಡಲಾಗಿದೆ. ಒಟ್ಟಾರೆ ೧೧ನೇ ಪಂಚವಾರ್ಷಿಕ ಯೋಜನೆಯಲ್ಲಿ ಅತಿ ಮಹತ್ವಾಕಾಂಕ್ಷೆಯ ಗುರಿಯನ್ನು ನಿಗದಿಪಡಿಸಿಕೊಳ್ಳಲಾಗಿದೆ. ಹಿಂದಿನ ಎಲ್ಲ ೧೦ ಪಂಚವಾರ್ಷಿಕ ಯೋಜನೆಗಳಿಗೆ ಹೋಲಿಸಿದಲ್ಲಿ ಈ ಯೋಜನೆಯ ಭವಿಷ್ಯ ಉಜ್ವಲವಾಗಿದೆ. ಈ ಯೋಜನೆಯನ್ನು ಸಾಕಾರಗೊಳಿಸುವಲ್ಲಿ ಸ್ವತಃ ಯೋಜನಾ ಆಯೋಗವೇ ಹೆಚ್ಚು ಮುತುವರ್ಜಿ ವಹಿಸಿದೆ. ಇಂದಿನ ಮಾದರಿಯಲ್ಲಿ ಅಭಿವೃದ್ಧಿಯಿದ್ದಗೂ ಬಡತನ ತೊಲಗುತ್ತಿಲ್ಲ. ಅನುಸೂಚಿತ ಜಾತಿ, ಜನಜಾತಿ ಮತ್ತು ದುರ್ಬಲ ವರ್ಗಗಳಿಗೆ ಅಭಿವೃದ್ಧಿಯ ಪ್ರಯೋಜನವಾಗುತ್ತಿಲ್ಲ. ಲಿಂಗ ತಾರತಮ್ಯ ಈಗಲೂ ದೊಡ್ಡ ಸಮಸ್ಯೆಯೇ ಆಗಿದೆ. ಈ ಎಲ್ಲ ಸವಾಲುಗಳು ೧೧ನೇ ಪಂಚವಾರ್ಷಿಕ ಯೋಜನೆಯಲ್ಲಿ ಪರಿಹಾರಕ್ಕಾಗಿ ಕಾದುಕುಳಿತಿವೆ.

೧೧ನೇ ಪಂಚವಾರ್ಷಿಕ ಯೋಜನೆಯ ಮುಂದಿರುವ ಒಂದು ದೊಡ್ಡ ಸವಾಲು ಏನೆಂದರೆ ಮಹತ್ತರ ಪ್ರಮಾಣದ ವಿದೇಶಿ ಬಂಡವಾಳವನ್ನು ಅವಲಂಬಿಸಿರುವದು. ಇದರಿಂದ ದೇಶದ ಜಿಡಿಪಿಯಲ್ಲಿ ಶೇಕಡಾ ೪೦ರಷ್ಟು ಭಾಗ ವಿದೇಶಿ ವ್ಯಾಪಾರ ಮತ್ತು ವಿದೇಶಿ ಬಂಡವಾಳದಾರರದೇ ಆಗಿದೆ. ಹಾಗಾಗಿ ಅಮೆರಿಕಾ ಮತ್ತು ಪಾಶ್ಚಿಮಾತ್ಯ ದೇಶಗಳಲ್ಲಿ ಕುಂಠಿತಗೊಂಡಿರುವ ಆರ್ಥಿಕ ಅಭಿವೃದ್ಧಿ ಭಾರತಕ್ಕೆ ಧಕ್ಕೆ ಉಂಟು ಮಾಡಬಲ್ಲದು. ನಮ್ಮ ದೇಶದ ಆರ್ಥಿಕ ತಜ್ಞರು ಹೇಳುತ್ತಾರೆ – ಹನ್ನೊಂದನೆ ಯೋಜನೆಯ ಗುರಿ ತಲುಪುವಲ್ಲಿ ಎದುರಾಗುವ ಕಠಿಣ ಪರಿಸ್ಥಿತಿಯನ್ನೆದುರಿಸಲು ಈಗಿನಿಂದಲೇ ಸರ್ವ ಪ್ರಯತ್ನಗಳನ್ನು ದ್ವಿಗುಣಗೊಳಿಸಬೇಕಾಗಿದೆ ಎಂದು. ನಿರ್ಯಾತದ ಗುರಿಯನ್ನು ತಲುಪುವಲ್ಲಿ ಗಮನ ಹರಿಸಬೇಕಾಗಿದೆ. ಕಚ್ಚಾ ತೈಲಗಳ ಬೆಲೆ ಏರಿಕೆಯಿಂದಾಗುವ ದುಷ್ಪರಿಣಾಮಗಳನ್ನು ಎದುರಿಸಲು ಅತಿ ಶೀಘ್ರವಾಗಿ ಬದಲಿ ಉಪಾಯಗಳತ್ತ ಯೋಜಿಸಬೇಕಾಗಿದೆ. ಈ ಎಲ್ಲ ಪ್ರಯತ್ನಗಳಲ್ಲಿ ನಾವು ಎಷ್ಟು ಸಫಲರಾಗುತ್ತೇವೋ ಅಷ್ಟರಮಟ್ಟಿಗೆ ೧೧ನೇ ಪಂಚವಾರ್ಷಿಕ ಯೋಜನೆಯೂ ಫಲಪ್ರದವಾಗಲಿದೆ.


ಎಂ.ಬಿ. ನಾಯ್ಕ್
'ರಂಗಸ್ವಾಮಿ ಪ್ರಸನ್ನ', ಮೊದಲನೇ ಮುಖ್ಯರಸ್ತೆ
ಹತ್ತನೇ ಅಡ್ಡ ರಸ್ತೆ, ಶಾಂತಿ ನಗರ, ಹಾಸನ - ೫೭೩೨೦೧


## ಬೇಡಲಿಲ್ಲ ಬೆಳದಿಂಗಳು

ಜೀವನದ ತುಂಬ ಬೆಳದಿಂಗಳು ನಾ ಬೇಡಲಿಲ್ಲ
ಅದೊಂದು ರಾತ್ರಿಯುದ್ದಕ್ಕೂ ನೀ ಬೆಳದಿಂಗಳಾಗಿದ್ದೆ ಅಷ್ಟೆ ಸಾಕು

ಅನಾಥಳಂತೆ ನಿತ್ಯ ಅಲೆವಾಗಲೂ ನಾ ಬೇಡಲಿಲ್ಲ
ಅದೊಂದು ದಿನ ನೀಳ ತೋಳಲಿ ರಕ್ಷಣೆ ನೀಡಿದ್ದೆಯಲ್ಲ ಅಷ್ಟೆ ಸಾಕು

ಸದಾ ಸನಿಹ ಇರಲೇ ಬೇಕೆಂದು ನಾ ಬೇಡಲಿಲ್ಲ
ಅದೊಂದು ಅದೃಷ್ಟದ ಕದ ತೆರೆದ ಸಮಯ ಸನಿಹ ನೀನಿದ್ದೆ ಅಷ್ಟೆ ಸಾಕು

ವಿಶ್ವವ್ಯಾಪಿ ನೀ ನನ್ನವನಾಗೆಂದು ನಾ ಬೇಡಲಿಲ್ಲ
ಅದೊಂದು ಉದ್ದಸಾಲಿನಲಿ ನನ್ನ ಹೆಸರಿಗೂ ಜಾಗ ನೀಡಿದ್ದೆ ಅಷ್ಟೆ ಸಾಕು

ಮನಸ್ಸು ಬಿಚ್ಚಿ ಮಾತಾಡಲು ನಾ ಹೇಳಲಿಲ್ಲ
ಬಿರುಗಾಳಿ ಲೆಕ್ಕಿಸದೇ ಬಡವಿಗೆ ಮನಸ್ಸು ನೀಡಿದ್ದೆ ಅಷ್ಟೆ ಸಾಕು

ಸವಿ - ಸವಿಯಲು ಜೊತೆಬೇಕೆಂದು ನಾ ಬೇಡಲಿಲ್ಲ
ಏಳು ಜನ್ಮಕೂ ಮಿಕ್ಕುವಂತೆ ನೆನಪುಗಳ ನೀಡಿದ್ದೆ ಅಷ್ಟೆ ಸಾಕು

ಪ್ರೇಮಗೀತೆಯ ಹಾಡೆಂದು ನಾ ಬೇಡಲಿಲ್ಲ
ಪ್ರತಿ ಪಲ್ಲವಿಗೂ ನಮ್ಮದೇ ಅನುರಣನ ನೀಡಿದ್ದೆ ಅಷ್ಟೆ ಸಾಕು


■ **ಶಾರದಾ ಮುಳ್ಳೂರ**
ಪಿ.ಡಬ್ಲ್ಯು.ಡಿ. ಕ್ವಾರ್ಟರ್ಸ್
ಜಮಖಂಡಿ - ೫೮೭೩೦೧
ಬಾಗಲಕೋಟೆ ಜಿಲ್ಲೆ




# ರಾ. ಚಿಂ. ಢೇರೆಯವರ ಜೊತೆ ಸಂದರ್ಶನ



ಡಾ|| ರಾಮಚಂದ್ರ ಚಿಂತಾಮಣ್ ಢೇರೆ

**ನಿಮ್ಮ ಅಧ್ಯಯನಗಳನ್ನು ಕರ್ನಾಟಕದಲ್ಲಿ ಹೊಸತಲೆಮಾರಿನ ಅನೇಕ ಸಂಶೋಧಕರು ಬಳಸುತ್ತಿದ್ದಾರೆ. ನಾಥ, ಶಾಕ್ತ ಮುಂತಾದ ಪಂಥಗಳ ಮೇಲೆ ಕೆಲಸ ಮಾಡುವವರಿಗೆ ಅವು ಒಳ್ಳೆಯ ಆಕರ ಗ್ರಂಥಗಳು. ನಿಮ್ಮ ಸಂಶೋಧನೆಯ ವಿಶೇಷತೆಯೆಂದರೆ ಸಮುದಾಯದ ತಿಳಿವಳಿಕೆಯನ್ನು ಬಳಸಿಕೊಳ್ಳುವಲ್ಲಿನ ಶ್ರದ್ಧೆ. ಇದಕ್ಕೆ ಪ್ರೇರಣೆಯೇನು ?**

ಬಹುಶಃ ನನ್ನ ಪರಿಸರವೇ ಪ್ರೇರಣೆಯಿರಬೇಕು. ನಾನು ಹುಟ್ಟಿದ ಹಳ್ಳಿಯಲ್ಲಿ ಅಪೂರ್ವವಾದ ಗ್ರಾಮೀಣ ಸಂಸ್ಕೃತಿಯಿತ್ತು. ಇಡೀ ಊರು ಒಂದು ಕುಟುಂಬದಂತೆ. ಹಬ್ಬ ಹುಣ್ಣಿಮೆಗಳಲ್ಲಿ ಉತ್ಸವದ ವಾತಾವರಣ ನಿರ್ಮಾಣವಾಗುತ್ತಿತ್ತು. ಜನಪದ ಸಂಸ್ಕೃತಿಯ ಉಪಾಸಕರಾದ ಗೊಂದಲಿಗರು, ವಾಘೆಯರು, ಪೂಜಾರಿಗಳು ಅಲ್ಲಿದ್ದರು. ಎತ್ತಿನ ಚಕ್ಕಡಿ ಹೊರತು ಬೇರೆ ವಾಹನವಿರಲಿಲ್ಲ. ೩-೪ ಮನೆಗಳ ಬ್ರಾಹ್ಮಣರ ಹೊರತು ಉಳಿದವರಾರೂ ಕಲಿತಿರಲಿಲ್ಲ. ಬ್ರಾಹ್ಮಣ ಹೆಂಗಸರಿಗೂ ಓದು ಬರಹ ಬರುತ್ತಿರಲಿಲ್ಲ. ಆದರೆ ಬಹುಶ್ರುತತೆ ಸಾಕಷ್ಟಿತ್ತು. ಶ್ರವಣದಿಂದ ಸಿಗುವ ವಿದ್ಯೆಯಿತ್ತು. ಅಜ್ಜಿಗೆ ಜಾನಪದ ಸಾಹಿತ್ಯದ ಪರಿಚಯ ಚೆನ್ನಾಗಿತ್ತು. ಆಕೆ ಗುಡಿಯಲ್ಲಿ ಮತ್ತು ಬೇರೆಯವರ ಮನೆಯಲ್ಲಿ ಸಂತ ವಿಜಯ, ಸಂತ ಲೀಲಾಮೃತ, ಭಕ್ತವಿಜಯ, ಭಕ್ತ ಲೀಲಾಮೃತ, ಪಾಂಡವ ಪ್ರತಾಪ, ಶಿವಲೀಲಾಮೃತ, ರಾಮವಿಜಯ, ಹರಿವಿಜಯ – ಇವುಗಳ ಪುರಾಣ ಪಠಣ ಮಾಡುತ್ತಿದ್ದಳು. ನನಗೆ ಸಂತಕಥೆ ಮತ್ತು ದೇವಕಥೆಗಳ ಜ್ಞಾನ ಸಿಕ್ಕಿದ್ದೇ ಈ ಪಠಣಗಳಿಂದ. ಪುರಾಣ ಓದಿಯೇ ಶಬ್ದ ಸಮೃದ್ಧಿಯಾಯಿತು. ಲೋಕ ಪರಂಪರೆಯ ಸಂಸ್ಕಾರವು ಹಬ್ಬ ಉತ್ಸವಗಳಿಂದ ದೊರಕಿತು. ಅದನ್ನು ಸಂಶೋಧನೆಯಲ್ಲಿ ಯಥಾವಕಾಶ ಬಳಸಿದ್ದೇನೆ.

**ನೀವು ಕ್ರಮಬದ್ಧವಾಗಿ ಶಾಲೆ ಕಾಲೇಜಿಗೆ ಹೋಗಿ ಶಿಕ್ಷಣ ಪಡೆಯಲಿಲ್ಲ ಎಂದು ಕೇಳಿರುವೆ. ಯಾಕಾಗಿ ?**

ಐದು ವರುಷದವನಿರುವಾಗಲೆ ಅಪ್ಪ ಅಮ್ಮ ಇಬ್ಬರೂ ತೀರಿಕೊಂಡರು. ಅಪ್ಪ ಪ್ಲೇಗಿಗೆ ಬಲಿಯಾದಾಗ ಅಮ್ಮನ ವಯಸ್ಸು ೨೦. ಅಪ್ಪನ ಸಾವಿನ ನಂತರ ಅಮ್ಮ ಸತಿ ಹೋಗಬೇಕೆಂದು ನಿಶ್ಚಯಿಸಿದಳು. ಅನ್ನ, ನೀರು ತೊರೆದಳು. ಆಗ ಅಜ್ಜಿ ನಮ್ಮನ್ನು ಆಕೆಯ ಎದುರಿಗೆ ತಂದು, 'ಈ ಮಕ್ಕಳಿಗಾಗಿಯಾದರೂ ನೀನು ಬದುಕಬೇಕು' ಎಂದಳು. 'ಯಾವ ಕಳಕಳಿಯಿಂದ ನೀನಿದನ್ನು ಹೇಳುತ್ತಿದ್ದೀಯೊ ಅದುವೇ ನನ್ನ ಮಕ್ಕಳನ್ನು ಸಂರಕ್ಷಿಸುತ್ತದೆ. ನನ್ನ ಹಾದಿಯಲ್ಲಿ ಹೋಗಲು ನನ್ನನ್ನು ಬಿಡು' ಎನ್ನುವುದು ಅಮ್ಮನ ಉತ್ತರವಾಗಿತ್ತು. ಅಪ್ಪ ಸತ್ತ ಹದಿಮೂರನೇ ದಿನಕ್ಕೆ ಆಕೆ ಪ್ರಾಣಬಿಟ್ಟಳು. ಆನಂತರ ನನ್ನನ್ನು ಅಜ್ಜಿ ಮತ್ತು ಸೋದರ ಮಾವ ಬೆಳೆಸಿದರು. ಮಾವ ಟಿ.ಬಿ.ಯಾಗಿ ತೀರಿಕೊಂಡ. ನನ್ನ ದಾಯಾದಿ ಅಜ್ಜನೊಬ್ಬ 'ಈ ಹಳ್ಳಿಯಲ್ಲಿ ಮಕ್ಕಳ ಉದ್ಧಾರವಾಗುವದಿಲ್ಲ' ಎಂದು ಪುಣೆಯಲ್ಲಿ ನಮ್ಮ ಶಿಕ್ಷಣಕ್ಕೆ ವಸತಿಗೆ ವ್ಯವಸ್ಥೆ ಮಾಡಿದ. ನಾವು ಹಳ್ಳಿ ತೊರೆದು ಪುಣೆಗೆ ಬಂದೆವು. ಆಗ ಪುಣೆಯ ಮುನ್ಸಿಪಲ್ ಶಾಲೆಯಲ್ಲಿ ಆದರ್ಶ ಶಿಕ್ಷಕರಿದ್ದರು. ಅವರ ಬಟ್ಟೆ ಶುಭ್ರ. ವಾಣಿ ಶುದ್ಧ. ಹೈಸ್ಕೂಲಿಗೆ ಹೋದಾಗ ಅಲ್ಲಿನ ಶಿಕ್ಷಕರು 'ನೀನು ಇಂಥವರ ಶಿಷ್ಯನಲ್ಲವೇ?' ಎಂದು ಗುರುತಿಸಿ ಪ್ರವೇಶ [illegible]. ಪ್ರಾಥಮಿಕ ಶಿಕ್ಷಣ ಮುಗಿಸಿದ ನಂತರ [illegible] ಮಾಡಬೇಕಾಯಿತು. ಹಗಲು ಒಂದು [illegible] ಕೆಲಸ ಮಾಡುತ್ತಿದ್ದೆ. ರಾತ್ರಿ ಶ್ರೀ ಕರ್ವೆಯವರು ನಡೆಸುತ್ತಿದ್ದ ಸರಸ್ವತೀ ಮಂದಿರವೆಂಬ ರಾತ್ರಿಶಾಲೆಗೆ ಹೋಗುತ್ತಿದ್ದೆ. ಅಲ್ಲಿ ಎಸ್.ಎಸ್.ಸಿ.ವರೆಗಿನ ಶಿಕ್ಷಣ ಪಡೆದೆ. ಮುಂದೆ ಬಾಹ್ಯ ಪರೀಕ್ಷೆಯ ಅನುಕೂಲವಾಗಿದ್ದರಿಂದ ಬಿ.ಎ. ಆದೆ.

**ನೀವು ಎಂ.ಎ. ತರಗತಿಯಲ್ಲಿದ್ದಾಗ ನಿಮ್ಮ ಪುಸ್ತಕಗಳನ್ನೇ ಪಠ್ಯವಾಗಿ ಓದಬೇಕಾಯಿತಂತೆ. ಆ ಅನುಭವ ಹೇಗಿತ್ತು ?**

ಅದೊಂದು ವಿಚಿತ್ರ ಅನುಭವ. ವಿಠ್ಠಲರಾವ್ ದೀಕ್ಷಿತ್ ಎಂಬ ನನ್ನ ಹಿತಚಿಂತಕರು, ನಾನು ಸ್ನಾತಕೋತ್ತರ ಪದವಿ ಗಳಿಸಲೇಬೇಕು ಎಂದು ವಿಶ್ವವಿದ್ಯಾಲಯಕ್ಕೆ ಸೇರಿಸಿದರು. ಉಳಿದ ವಿದ್ಯಾರ್ಥಿಗಳಿಗಿಂತ ವಯಸ್ಸಿನಿಂದ ದೊಡ್ಡವನಾಗಿದ್ದೆ. ಆಗ ನನ್ನ 'ದತ್ತ ಸಂಪ್ರದಾಯದ ಇತಿಹಾಸ', 'ನಾಥ ಸಂಪ್ರದಾಯದ ಇತಿಹಾಸ' ವಿಶ್ವವಿದ್ಯಾಲಯದ ಪಠ್ಯಕ್ರಮದಲ್ಲಿ ಸೇರ್ಪಡೆಯಾಗಿದ್ದವು. ನಮಗೆ ಪ್ರೊ|| ತುಳಪುಳೆ ಅಂತ ಶಿಕ್ಷಕರಿದ್ದರು. ಅವರು ನನಗೆಂದರು : 'ಢೇರೆ, ಕ್ಲಾಸಿನಲ್ಲಿ ಕೂತು ಏಕೆ ಕಾಲಹರಣ ಮಾಡ್ತೀರಿ? ನಿಮ್ಮ ಕೃತಿಯನ್ನು ನಿಮಗೇ ಕಲಿಸುವುದೆಂದರೆ ಸಂಕೋಚವಾಗುತ್ತದೆ. ಪುರುಸೊತ್ತಾದಾಗ ಬನ್ನಿ. ಉಳಿದದ್ದು ನನಗೆ ಬಿಡಿ.' ಆದರೆ ತುಳಪುಳೆ ಮನದಲ್ಲಿ ಪಾಪವಿರಬೇಕು. ಆನಂತರ ಎಂಟು ದಿನಗಳ ಗೈರುಹಾಜರಿ ಕೊರತೆಯ ನಿಮಿತ್ತದಿಂದ ಪರೀಕ್ಷೆಗೆ ಕೂತುಕೊಳ್ಳಲು ಅನರ್ಹನೆಂಬ ಪತ್ರ ವಿಶ್ವವಿದ್ಯಾಲಯದಿಂದ ಬಂತು. ಮೋಸಹೋಗಿದ್ದೆ. ಪರೀಕ್ಷೆಗೆ ಕೂರಲು ಆಗಲಿಲ್ಲ.

**ನೀವು ೨೨ರ ವಯಸ್ಸಿನಲ್ಲೇ ನಾಥ ಸಂಪ್ರದಾಯದ ಮೇಲೆ ಪುಸ್ತಕ ರಚಿಸಿದಿರಿ. ಅಷ್ಟು ಚಿಕ್ಕ ವಯಸ್ಸಿನಲ್ಲಿ ಸಂಶೋಧನೆ ಕ್ಷೇತ್ರದಲ್ಲಿ ತೊಡಗುವಂತಹ ಉತ್ಸಾಸ ಏನಿತ್ತು ?**

ಅಂತಹದ್ದೇನಿಲ್ಲ. ಪುಣೆಗೆ ಬಂದು ನನ್ನ ಗ್ರಾಮಸಂಸ್ಕಾರ ಮತ್ತು ಪಾರಂಪರಿಕ ಸಂಸ್ಕೃತಿಯ ಜತೆಗೆ ಲೇಖಕನಾಗುತ್ತೇನೆ ಎಂದು ನಾನೆಂದೂ ಭಾವಿಸಿರಲಿಲ್ಲ.

ಡಾ|| ರಾಮಚಂದ್ರ ಚಿಂತಾಮಣ್ ಢೇರೆಯವರು ಮರಾಠಿಯ ಹಿರಿಯ ಮತ್ತು ಪ್ರಸಿದ್ಧ ಸಂಶೋಧಕರು; ಸಂಪ್ರದಾಯವಾದಿಗಳಿಂದಲೂ ಮರಾಠಾವಾದಿಗಳಿಂದಲೂ ಕಟುಟೀಕೆಗೆ ಒಳಗಾದರೂ ತಮಗೆ ಸತ್ಯವೆಂದು ಕಂಡದ್ದನ್ನು ದಿಟ್ಟವಾಗಿ ಪ್ರಕಟಿಸುತ್ತ ಬಂದವರು. ವಿಠಲ ಸಂಪ್ರದಾಯ ಮತ್ತು ಶಿವಾಜಿ ಕುರಿತ ಅವರ ಸಂಶೋಧನೆಗಳು ಮರಾಠಿ ಲೋಕದಲ್ಲಿ ಸಾಕಷ್ಟು ವಾಗ್ವಾದ ಹುಟ್ಟಿಸಿವೆ. ತಮ್ಮ ಸಂಶೋಧನೆಗಾಗಿ ಕರ್ನಾಟಕದ ತುಂಬ ತಿರುಗಾಡಿರುವ ಢೇರೆಯವರ ಹಲವು ಕೃತಿಗಳು ಕನ್ನಡಕ್ಕೆ ಬಂದಿವೆ. ಅವುಗಳಲ್ಲಿ 'ಲಜ್ಜಾಗೌರಿ', 'ನಾಥಸಂಪ್ರದಾಯದ ಇತಿಹಾಸ', 'ವಿಠಲ : ಒಂದು ಮಹಾಸಮನ್ವಯ', 'ಶಿವಾಜಿಯ ಮೂಲ ಕನ್ನಡ ನೆಲ', 'ಶ್ರೀಖಂಡೋಬಾ' ಮುಖ್ಯವಾದವು. ಶಂಬಾ ಅವರಂತೆ ವಿಶ್ವವಿದ್ಯಾಲಯಗಳ ಆಚೆಗಿದ್ದು ಕೆಲಸ ಮಾಡಿದ ಢೇರೆಯವರಿಗೆ ಈಗ ೭೯ ವರ್ಷ. ಈ ಸಂದರ್ಶನವನ್ನು ಪುಣೆಯಲ್ಲಿ ಮಾಡಲಾಯಿತು. ಇದನ್ನು ಸಾಧ್ಯವಾಗಿಸಿದವರು ಪುಣೆಯ ಕನ್ನಡಿಗರಾದ ಶ್ರೀ ವಿರೂಪಾಕ್ಷ ಕುಲಕರ್ಣಿಯವರು. ಬೆಳಗಾವಿಯ ಮರಾಠಿ ಪ್ರಾಧ್ಯಾಪಕಿ ಪ್ರೊ|| ಸಂಧ್ಯಾ ದೇಶಪಾಂಡೆ ಅವರು ಸಂದರ್ಶನದ ಬರೆಹರೂಪ ಸಿದ್ಧಪಡಿಸಿಕೊಟ್ಟರು. ಪ್ರಸಿದ್ಧ ಅನುವಾದಕರಾದ ಚಂದ್ರಕಾಂತ ಪೋಕಳೆಯವರು ಕನ್ನಡಿಸಿದರು. ಈ ಮೂವರು ಹಿರಿಯರು ನೀಡಿರುವ ಅಮೂಲ್ಯ ನೆರವನ್ನು ಆದರದಿಂದ ನೆನೆಯುತ್ತೇನೆ.

– ಡಾ|| ರಹಮತ್ ತರೀಕೆರೆ

ಹಳ್ಳಿಯಲ್ಲಿರುವಾಗ ತಮಾಶ, ಲಾವಣಿಗಳನ್ನು ನೋಡುತ್ತಿದ್ದೆ. ಅವುಗಳ ಪ್ರೇರಣೆಯಲ್ಲಿ ಕವಿತೆ ರಚಿಸುತ್ತಿದ್ದೆ. ಬಾಲಕನ ರಚನೆ ಕಂಡು ಜನ ಹೊಗಳುತ್ತಿದ್ದರು. 'ಜ್ಞಾನೇಶ್ವರಿ'ಯನ್ನು ೯ ಸಲ ಓದಿದ್ದೆ. ರವಿಕಿರಣ ಮಂಡಳಿಯ ಕವಿತೆ, ಬೋರ್ಕರ್, ಶಿರವಾಡಕರ್ ಅವರ ಕವಿತೆಗಳನ್ನು ಓದುತ್ತಿದ್ದೆ. ನನ್ನ ರಸಿಕತೆ ಇದರಿಂದ ಪೋಷಿತವಾಗಿತ್ತು. ಹಳ್ಳಿಯಲ್ಲೇ ಉಳಿದಿದ್ದರೆ ಲಾವಣಿಯೊ ಕವಿತೆಯೊ ಬರೆಯುತ್ತ ಉಳಿಯುತ್ತಿದ್ದೆ ಅಥವಾ ಮಾವ ಕಲಿಸಿದ ಪೌರೋಹಿತ್ಯ ಮುಂದುವರಿಸುತ್ತಿದ್ದೆ ಎಂದು ಕಾಣುತ್ತದೆ. ಪುಣೆಗೆ ಬಂದ ನಂತರ ಪ್ರತಿದಿನ ಮಹಾರಾಷ್ಟ್ರ ಗ್ರಂಥಾಲಯದಲ್ಲಿ ೨ಗಂಟೆ ಕಳೆಯಲಾರಂಭಿಸಿದೆ. ಪ್ರಾತಿನಿಧಿಕ ಮರಾಠಿ ಸಾಹಿತ್ಯ ಓದಿಕೊಂಡೆ. ಕವಿತೆಯಲ್ಲಿ ದೊಡ್ಡದನ್ನು ಸಾಧಿಸಲಾರೆ ಅನಿಸಿತು. ಆದರೆ ಇಲ್ಲಿ ಗ್ರಾಮ ಸಂಪತ್ತಿಗೆ ಬಹಳ ಬೆಲೆಯಿದೆ, ಹಳ್ಳಿಯ ಜೀವನಾನುಭವದಿಂದ ಲಾಭವಿದೆ. ನನ್ನದು ಪುಸ್ತಕದ ಬದನೆಯಲ್ಲ, ಜಾನಪದದ ಗಟ್ಟಿ ಬುನಾದಿಯಿದೆ ಎಂದು ಅರಿವಾಯಿತು. ಸಂಶೋಧನೆಯತ್ತ ಹೊರಳಿದೆ.

**ನಿರ್ದಿಷ್ಟವಾಗಿ ನಾಥ ಸಂಪ್ರದಾಯದ ಮೇಲೆ ಸಂಶೋಧನೆ ಆರಂಭಿಸಲು ಏನು ಕಾರಣ ?**

೧೯೫೦ರಲ್ಲಿ ಭೋರ ಎಂಬಲ್ಲಿಯ ಪಂಚಸಚಿವರು ನಾಥ ಸಂಪ್ರದಾಯದ ಕುರಿತು ಸಂಶೋಧನೆ ಕೈಕೊಳ್ಳುವವರಿಗೆ ಪುರಸ್ಕಾರ ನೀಡುವ ಪ್ರಕಟಣೆ ನೀಡಿದರು. ನಾನು ಸಂಶೋಧನೆ ಕೈಗೆತ್ತಿಕೊಳ್ಳುವ ನಿರ್ಧಾರ ಮಾಡಿದೆ. ಜೋಗೇಶ್ವರಿಯಲ್ಲೊಂದು ಪುಸ್ತಕದಂಗಡಿಯಿತ್ತು. ಅದರ ಮಾಲೀಕರಾದ ಶ್ರೀ ಬೋಕಿಲರು ಸಹೃದಯ ಓದುಗರೂ ಆಗಿದ್ದರು. ತಾವು ಓದಿದ ಪುಸ್ತಕ ಚೆನ್ನಾಗಿದ್ದರೆ ಉಳಿದವರಿಗೂ ಕೊಡುತ್ತಿದ್ದರು. ಅವರಲ್ಲದೆ ಇತರೆ ಹಳೇ ಪುಸ್ತಕದ ವ್ಯಾಪಾರಿಗಳೆಲ್ಲ ನನ್ನನ್ನು ಪ್ರೀತಿಸುತ್ತಿದ್ದರು. ನಾಥಪಂಥದ ಬಗ್ಗೆ ಹಜಾರಿ ಪ್ರಸಾದ್, ಬ್ರಿಗ್ಸ್ ಮುಂತಾದವರು ಬರೆದ ಪುಸ್ತಕಗಳನ್ನು ಅವರಲ್ಲೊಬ್ಬರು ಕೊಟ್ಟರು. ನಾನು 'ನನ್ನ ಹೆಸರು, ವಿಳಾಸ ಬರೆದುಕೊಳ್ಳಿ' ಎಂದೆ. ಅವರೆಂದರು : 'ನೀನೀಗ ನಮ್ಮ ಗೋತ್ರದವನಾದೆ.



*ಡಾ|| ರಹಮತ್ ತರೀಕೆರೆ ಮತ್ತು ಡಾ|| ರಾ. ಚಿಂ. ಢೇರೆ*

ಗಣೇಶ ಉತ್ಸವದ ಆಮಂತ್ರಣ ನಿನಗೆ ನೀಡಬೇಕು. ಹೀಗೆ ಅಧ್ಯಯನ ಮಾಡುವ ಹುಡುಗ ಖಂಡಿತ ಕಳ್ಳನಾಗಿರಲಾರ'; ಬಳಿಕ ನಾನು ಗ್ರಾಂಥಿಕ ಬಂಗಾಲಿ ಕಲಿತು ಬಂಗಾಲಿ ಗ್ರಂಥಗಳನ್ನು ಓದಿದೆ. 'ಸಿದ್ಧಸಿದ್ಧಾಂತ ಪದ್ಧತಿ' ಓದಿದೆ. ಮರಾಠಿಯಲ್ಲಿರುವ ನಾಥ ವಾಙ್ಮಯಕ್ಕೆ ಸಂಬಂಧಿಸಿದ ಎಲ್ಲ ಗ್ರಂಥಗಳನ್ನು ವರ್ಷದೊಳಗೆ ಓದಿ ಮುಗಿಸಿದೆ. ಅನಂತರ 'ನಾಥ ಸಂಪ್ರದಾಯದ ಇತಿಹಾಸ' ಬರೆದೆ. ಸಾಹಿತ್ಯ ಪುರಸ್ಕಾರ ಸಮಿತಿಗೆ ತರ್ಕತೀರ್ಥ ಲಕ್ಷ್ಮಣಶಾಸ್ತ್ರಿಯವರು ಅಧ್ಯಕ್ಷರಾಗಿದ್ದರು. ಪ್ರಥಮ ಪುರಸ್ಕಾರ ಸಿಕ್ಕಿತು. ಇದೆಲ್ಲ ಶಾರದೆಯ ಕೃಪೆ ಎಂದು ನನ್ನ ಭಾವನೆ.

**ಮರಾಠಿಯಲ್ಲಿ ಅನೇಕ ದೊಡ್ಡ ಸಂಶೋಧಕರಿದ್ದಾರೆ. ಅವರಲ್ಲಿ ನಿಮಗೆ ಯಾರು ಆದರ್ಶ ?**

ಪೂರ್ವಸೂರಿಗಳನ್ನೆಲ್ಲ ಓದಿದ್ದೇನೆ. ಅವರಲ್ಲಿ ಮಾರ್ಕ್ಸ್‌ವಾದಿ ಡಾ|| ಡಿ. ಡಿ. ಕೋಸಾಂಬಿಯವರಿದ್ದಾರೆ. ಡಾ|| ವಾಸುದೇವ ಶರಣ ಅಗರವಾಲ ಇದ್ದಾರೆ. ಬಹುಶಃ ಅಗರವಾಲ ನನ್ನ ಆದರ್ಶವಿರಬೇಕು. ಅವರು ದೇಸೀ ಪರಂಪರೆಯ ಮೂಲಕ್ಕೆ ಮತ್ತು ಆಳಕ್ಕೆ ಹೋಗುವ ಪ್ರಯತ್ನ ಮಾಡಿದರು. ವಿಷಯವನ್ನು ಸಂಪೂರ್ಣವಾಗಿ ಗ್ರಹಿಸಲು ವಿವಿಧ ಶಾಖೆಗಳನ್ನು ಒಂದೆಡೆ ತಂದು ಅಧ್ಯಯನ ಮಾಡುವ ಅಗತ್ಯವಿದೆ ಎಂದು ಈಗಲೂ ನಾನು ಭಾವಿಸುತ್ತೇನೆ. ಇತಿಹಾಸ, ಭಾಷಾಶಾಸ್ತ್ರ, ಸಮಾಜಶಾಸ್ತ್ರ – ಹೀಗೆ ವಾಟರ್‌ಟೈಟ್ ಕಂಪಾರ್ಟ್‌ಮೆಂಟ್ ಮಾಡಿ ವಿಷಯ ಗ್ರಹಿಸುವುದು ಸಾಧ್ಯವಿಲ್ಲ. ಯಾಂತ್ರಿಕ ವಿಭಜನೆ ಮಾಡುವುದರಿಂದ ಯಾವ ವಿಷಯಕ್ಕೂ ನ್ಯಾಯ ನೀಡುವುದು ಸಾಧ್ಯವಿಲ್ಲ.

**ಜರ್ಮನಿಯ ಇಂಡಾಲಜಿಸ್ಟ್ ಗುಂಥೆರ್ ಸೊಂಥಮೈರ್ ಜತೆ ಕೆಲಸ ಮಾಡಿದವರು ನೀವು. ಅವರ ಜತೆಗಿನ ಅನುಭವ ಹೇಗಿತ್ತು ?**

ಡೇವಿಡ್ ಡ್ಯೂಮನ್, ಸೊಂಥಮೈರ್ ಮಹಾರಾಷ್ಟ್ರದಲ್ಲಿ ತುಂಬ ಕ್ಷೇತ್ರಕಾರ್ಯ ಮಾಡಿದ್ದಾರೆ. ಅವರು ನನ್ನ ಸ್ನೇಹಿತರು ಕೂಡ. ಆದರೆ ಅವರಿಗೆ ಒಂದು ಪರಿಮಿತಿಯಿತ್ತು. ಕ್ಷೇತ್ರ ಮಹಾತ್ಮೆಯನ್ನು ವೈಭವೀಕರಿಸಲು ಅವರು ಯತ್ನ ಮಾಡುತ್ತಿದ್ದರು. ಸೊಂಥಮೈರ್‌ಗೆ ನಮ್ಮ ಗ್ರೇಟ್ ಟ್ರೆಡಿಶನ್ ಕುರಿತು ಎಷ್ಟು ವ್ಯಾಮೋಹವೆಂದರೆ, ಅವರು ವಾಸ್ತವವನ್ನು ಮರೆಮಾಚುತ್ತಿದ್ದರು. ಉದಾಹರಣೆಗೆ, ಮಣಿ ಮಲ್ಹಾರಿ ಖಂಡೋಬಾನ ಅವತಾರ ಕಥೆ. ಮಣಿಮಲ್ಲ-ಅರಿ = ಮಣಿಮಲ್ಲಾರಿ, ಮಣಿಮಲ್ಲರು ದೈತ್ಯರಾಗಿದ್ದರು. ಬ್ರಾಹ್ಮಣರಿಗೆ ಕಿರುಕುಳ ನೀಡುತ್ತಿದ್ದರು. ಶಿವ ಅವತಾರ ತಾಳಿ ಅವರನ್ನು ಕೊಂದ ಎಂದೆಲ್ಲ ಕಥೆಯಿದೆ. ವಸ್ತುತಃ ಅದು ಮಣಿಮಲ್ಲಾರಿ ಅಲ್ಲ, 'ಮಣ್ಣು ಮೈಲಾರ'ವೇ 'ಮಣಿ ಮಲ್ಹಾರ' ಎಂದಾಗಿದೆ. ಖಂಡೋಬಾನ ಉಪಾಸನೆಯಲ್ಲಿ ಇವತ್ತಿಗೂ ಮಣ್ಣನ್ನು ತೋರಿಸಲಾಗುತ್ತದೆ. ಪುರಾಣ ಮೋಹಕ್ಕೆ ಬಲಿಬಿದ್ದು ಕೃತ್ರಿಮ ಇಟಿಮಾಲಜಿ ಮಂಡಿಸುವುದು ಉಚಿತವಲ್ಲ. ಈಗ ಜನಪದ ಸಾಹಿತ್ಯದ ಸಾಮಗ್ರಿಯ ನವೀಕರಣದ ಪ್ರಶ್ನೆಯನ್ನೇ ತೆಗೆದುಕೊಳ್ಳಿ. ಅದರ ಟೈಪ್ ನಿರ್ಧರಿಸುವುದು, ವರ್ಗೀಕರಣ ಮಾಡುವುದು ಇದರಿಂದೇನು ಲಾಭ? ಅಚ್ಚರಿಯ ಸಂಗತಿಯೆಂದರೆ, ಹಿರಿಯ ಸಂಶೋಧಕರಾದ ದುರ್ಗಾ ಭಾಗವತರಂಥವರಿಗೂ ಹೀಗೆ ಮಾಡಬೇಕೆಂದು ಅನಿಸಿದ್ದು.

**ಹಾಗಾದರೆ ಕ್ಲಾಸಿಕಲ್ ಮತ್ತು ಜಾನಪದ ಪರಂಪರೆಗಳನ್ನು ಸಂಶೋಧನೆಯಲ್ಲಿ ಹೇಗೆ ಬಳಸಿಕೊಳ್ಳಬೇಕೆಂದು ಭಾವಿಸುತ್ತೀರಿ ?**

ಜಾನಪದ ಹಾಗೂ ಅಭಿಜಾತ ಪರಂಪರೆಗಳ ನಡುವೆ ಸತತ ಕೊಡುಕೊಳ್ಳುವಿಕೆ ನಡೆದಿದೆ. ಒಂದು ಇನ್ನೊಂದನ್ನು ಪರಿತುಷ್ಟಗೊಳಿಸುತ್ತದೆ, ಪರಿಶುದ್ಧಗೊಳಿಸುತ್ತದೆ. ನಮ್ಮಲ್ಲಿ ಜ್ಞಾನದ ಋಣವನ್ನು ತಲೆಯ ಮೇಲೆ ಹೊತ್ತು ಮೆರೆಯುವ ಪದ್ಧತಿಯಿದೆ. ಜ್ಞಾನದ ಋಣ ಬೇಡ. ಬದಲಿಗೆ, ಜ್ಞಾನವನ್ನು ಸೃಜನಶೀಲವಾಗಿ ಬಳಸಿ ಶ್ರೀಮಂತರಾಗಬೇಕು. ಜ್ಞಾನೇಶ್ವರನು ಪೂರ್ವ ಪರಂಪರೆಯ ಹಲವು ವಚನ ಬಳಸಿದ. 'ಜ್ಞಾನೇಶ್ವರಿ'ಯಲ್ಲಿ ಅದು ಮೂಲಕ್ಕಿಂತ ಚೆನ್ನಾಗಿ ಮೂಡಿಬಂತು. ಭ್ರಮರ ಕಟ್ಟಿಗೆ ಕೊರೆಯುವ ಬಗ್ಗೆ 'ದಾರೂಭೇದ ನಿಪುಣ...' ಎಂಬೊಂದು ಸುಭಾಷಿತವಿದೆ. ಜ್ಞಾನೇಶ್ವರನು ಕಟ್ಟಿಗೆ ಕೊರೆದ ಭ್ರಮರ ಕಮಲದೊಳಗೆ ಸಿಲುಕಿಕೊಂಡಿತು ಎಂದು ಅದನ್ನು ಪರಿವರ್ತಿಸಿದ. ನಮ್ಮ ಪರಂಪರೆಯನ್ನು ತಿರಸ್ಕರಿಸುವುದು, ನಾಶಗೊಳಿಸುವುದು, ಅವಹೇಳನ ಮಾಡುವುದು ಸುಲಭ. ಪರಂಪರೆಯಿಂದ ದೂರ ಸರಿದಾಗ ಅಪರಾಧಿ ಭಾವ ಕಾಡುತ್ತದೆ. ಅದರ ಸತ್ವವನ್ನು ಕಾಯ್ದುಕೊಂಡೇ ಪರಿವರ್ತನೆ ಸಾಧಿಸಬೇಕು. ಅದರಲ್ಲಿ ದೋಷವಿದ್ದರೆ ಕಿತ್ತೊಗೆಯಬೇಕು. ಆಗ ನಮ್ಮ ಮನಸ್ಸು ಪರಂಪರೆಯನ್ನು ಆವರಿಸುತ್ತದೆ. ನಾವು ಜನಮಾನಸದ ಶಕ್ತಿ ಮತ್ತು ಮಿತಿಯನ್ನು ಅರ್ಥಮಾಡಿಕೊಳ್ಳಬೇಕು. ಮರಾಠಿ ಸಂತ ಪರಂಪರೆಯ ಜಾತಿಯೇ ಶ್ರದ್ಧೆಯದ್ದು. ನಮ್ಮ ಸಂತ ವಾಙ್ಮಯವೇ ಆಧ್ಯಾತ್ಮೀಕರಣಗೊಂಡ ಜನಪದ ಸಾಹಿತ್ಯ. ಇಡೀ ಜನಪದ ಪರಂಪರೆ ಅಧ್ಯಾತ್ಮದ ಬುನಾದಿಯ ಮೇಲೆ ನಿಂತಿದೆ.

**ಪರಂಪರೆ ಸಂಸ್ಕೃತಿಗಳ ಮೇಲೆ ಶ್ರದ್ಧೆ ಬೇಕು ನಿಜ. ಆದರೆ ಶ್ರದ್ಧೆಯ ಪ್ರಮಾಣ ಹೆಚ್ಚಾಗಿಬಿಟ್ಟರೆ ಸಂಶೋಧನೆಗೆ ಬೇಕಾದ ವಿಮರ್ಶಾತ್ಮಕ ದೃಷ್ಟಿಕೋನ ಕ್ಷೀಣಿಸಿಬಿಡುತ್ತದೆ.**

ಇದಾಗುತ್ತದೆ. ನನಗದು ಒಪ್ಪಿಗೆಯಿಲ್ಲ. ಪರಂಪರೆಯಲ್ಲಿ ಯಾವುದು ತ್ಯಾಜ್ಯವೊ ಅದರ ಮೇಲೆ ವಿಮರ್ಶೆ ಮಾಡಬೇಕು. ಅದರ ಕೇಡನ್ನು ಸಮಾಜಕ್ಕೆ ಮನವರಿಕೆ ಮಾಡಿಕೊಡಬೇಕು. ಲೋಕಮಾನ್ಯ ಟಿಳಕರನ್ನೇ ತೆಗೆದುಕೊಳ್ಳಿ, ಅವರ ಪ್ರತಿಗಾಮಿತನದ ಬಗೆಗೆ ಆರೋಪ ಮಾಡಲಾಗುತ್ತದೆ. ಆದರೆ ಅವರು ಸಮಾಜದ ಶಕ್ತಿಯನ್ನು ಕ್ರಮೇಣ ಬೆಳೆಸಬೇಕು ಎನ್ನುತ್ತಿದ್ದರು. ನೀವು ಸಮಾಜವನ್ನು ಕೈಹಿಡಿದು ಮುನ್ನಡೆಸಬೇಕು ಅಂದಾಗ ನಿಮ್ಮ ಉದ್ದೇಶ ಈಡೇರುತ್ತದೆ. ಅದನ್ನು ಕೈಬಿಟ್ಟು ಮುಂದೆ ಸಾಗಿದಿರೋ, ನೀವು ಶಿಖರದ ತುದಿ ತಲುಪಬಹುದು. ಜನ ನಿಮ್ಮನ್ನು ಮಹಾನಾಯಕ ಎನ್ನಲೂಬಹುದು, ಆದರೆ ಪ್ರತ್ಯಕ್ಷದಲ್ಲಿ ನಿಮ್ಮಿಂದ ಪರಿವರ್ತನೆ ಸಾಧ್ಯವಿಲ್ಲ. ಸಂತರು ಪ್ರತ್ಯಕ್ಷದಲ್ಲಿ ಪರಿವರ್ತನೆ ಮಾಡಿದರು. ಕಾರಣ, ಅವರು ಜನಮಾನಸವನ್ನು ಗುರುತಿಸಿದ್ದರು.

**ಹಲವು ಭಾಷಿಕ ಆಕರಗಳನ್ನು ಆಧರಿಸಿ ಅಧ್ಯಯನ ಮಾಡುವಾಗ ಭಾಷಿಕ ತೊಡಕು ಎದುರಾಗುತ್ತದೆ. ಮರಾಠಿ ಮನೆಮಾತಿನ ಶಂಬಾರಿಗೆ ಕನ್ನಡದಲ್ಲಿ ಕೆಲಸ ಮಾಡಲು ಕಷ್ಟವಾಗಲಿಲ್ಲ. ನೀವು ಕನ್ನಡ ಆಕರಗಳನ್ನು ಬಳಸಿಕೊಂಡು ಮರಾಠಿಯಲ್ಲಿ ಸಂಶೋಧನೆ ನಡೆಸಿದವರು. ಭಾಷಾ ಸಮಸ್ಯೆಯನ್ನು ಹೇಗೆ ಬಿಡಿಸಿಕೊಂಡಿರಿ ?**

ದ್ರಾವಿಡ ಭಾಷೆಗಳಲ್ಲಿ ಸ್ಥಳೀಯ ಸಂಶೋಧಕರು ಮಹತ್ವದ ಕಾರ್ಯ ಮಾಡಿದ್ದಾರೆ. ನನಗದು ಅಚ್ಚರಿ ಉಂಟುಮಾಡುತ್ತದೆ. ನನಗೆ ಕನ್ನಡ ಓದಲು ಬರೆಯಲು ಬರುವುದಿಲ್ಲ. ಈ ವಯಸ್ಸಿನಲ್ಲಿ ಹೊಸಭಾಷೆ ಕಲಿಯುವುದೂ ಸಾಧ್ಯವಿಲ್ಲ. ದಕ್ಷಿಣದ ಭಾಷೆಗಳು ಬಂದಿದ್ದಾದ'ರೆ ಈಗಿಗಿಂತ ಹೆಚ್ಚುಪಟ್ಟು ಕೆಲಸ ಮಾಡುತ್ತಿದ್ದೆ ಎಂದು ಸದಾ ಅಂದುಕೊಳ್ಳುತ್ತೇನೆ. ಮುಂದಿನ ತಲೆಮಾರಿನ ಮರಾಠಿ ಸಂಶೋಧಕರು ಅಥವಾ ಉತ್ತರದ ಜ್ಞಾನೋಪಾಸಕರು ಒಂದಾದರೂ ದಕ್ಷಿಣ ಭಾಷೆ ಕಲಿಯುವಂಥ ಆದರ್ಶ ಇರಿಸಿಕೊಳ್ಳಬೇಕು. ಒಂದು ಭಾಷೆ

ಬಂದರೆ, ಅದರಲ್ಲಿರುವ ಜ್ಞಾನಸಂಚಯವನ್ನು ಅರಿತುಕೊಳ್ಳುವುದು ಸುಲಭ. ನಾನು ಇಂಗ್ಲಿಷ್ ಮತ್ತು ಹಿಂದಿಯಲ್ಲಿರುವ ದಕ್ಷಿಣದ ಸಂಸ್ಕೃತಿ ಇತಿಹಾಸ, ಸಾಹಿತ್ಯ ಚರಿತ್ರೆ ಆಧರಿಸಿ ಕೆಲಸ ಮಾಡಿದೆ. ಆದರೆ ಇಂಗ್ಲಿಷಿನಲ್ಲಿ ಬರೆಯುವ ಸ್ಥಳೀಯ ವಿದ್ವಾಂಸರಿಗೆ ನಾನು ದೇಸೀ ದೃಷ್ಟಿಯಿಂದ ಗ್ರಹಿಸುವುದನ್ನು ಹಿಡಿಯುವುದಕ್ಕೆ ಆಗುವುದಿಲ್ಲ.

**ಕನ್ನಡ - ಮರಾಠಿ ಸಂಸ್ಕೃತಿಗಳ ಸಂಬಂಧದ ಬಗ್ಗೆ ನಿಮ್ಮ ಗ್ರಹಿಕೆಯೇನು ?**

ಮಹಾರಾಷ್ಟ್ರದ ಮಟ್ಟಿಗೆ ಉತ್ತರದ ಪ್ರಭಾವ ಮೇಲ್ನೋಟದ್ದಾಗಿದೆ. ಸಂಪೂರ್ಣ ಮರಾಠಿ ಸಂಸ್ಕೃತಿಯ ಬುನಾದಿಯೇ ದಕ್ಷಿಣದ್ದು. ಉತ್ತರದವರ ಪ್ರಭಾವ ನಾವು ಸ್ವೀಕರಿಸಿದ್ದು ನಿಜವಾದರೂ ಅವರಿಬ್ಬರನ್ನು ಜೋಡಿಸುವ ಕೊಂಡಿಯೆಂದರೆ ಮಹಾರಾಷ್ಟ್ರ. ಈಗ ನೋಡಿ, ಅಗರವಾಲರು ನಮ್ಮಲ್ಲಿರುವ ಸ್ಕಂದ ಜಯಂತಿಯು ಜೇಷ್ಠಪುತ್ರ ಪೂಜೆಯ ಪರಂಪರೆ ಎಂದು ಹೇಳುತ್ತಾರೆ. ಮರಾಠಿಯಲ್ಲಿ 'ಮುಲಗಾ' ಶಬ್ದದ ಉತ್ಪತ್ತಿಯು 'ಮುರುಗಾ'ದ ಸಂಬಂಧ ಹೊಂದಿದೆ. ಅಂದರೆ ಪ್ರತಿ ಮನೆಯಲ್ಲಿ ಮುರುಗ ಜನಿಸಿದ ಎಂದರ್ಥ. ಮುರುಗನು ಸ್ಕಂದನ ಜತೆ ಸಮೀಕರಣಗೊಂಡಿರುವುದರಿಂದ ಉತ್ತರದ ಪರಂಪರೆಯೊಂದಿಗೆ ಸ್ಕಂದಚರಿತ್ರೆ ಗುರುತಿಸುವುದು ಸುಲಭವಾಯಿತು. 'ಸುಬ್ರಹ್ಮಣ್ಯ' ಎಂಬ ಶಬ್ದವನ್ನು ಮುರುಗನ ಬದಲಿಗೆ ಬಳಸುತ್ತೇವೆ. ನಾಗನ ದರ್ಶನವಾಯಿತೆಂದರೆ ಮುರುಗನ ದರ್ಶನವಾಯಿತೆಂದು ಭಾವಿಸುತ್ತೇವೆ. ಸುಬ್ರಹ್ಮಣ್ಯ ಕ್ಷೇತ್ರ ದಕ್ಷಿಣದಲ್ಲಿದೆ. ಅದಕ್ಕೂ ನಾಗನಿಗೂ ಹುತ್ತಕ್ಕೂ ಸಂಬಂಧವಿದೆ. ಹುತ್ತದ ವಾಸಿ ನಾಗ. ಸುಬ್ರಮಣಿ ಎಂದರೆ ನಾಗರತ್ನ. ಅದು ಸಂಸ್ಕೃತದಲ್ಲಿ ಸುಬ್ರಹ್ಮಣ್ಯ ಎಂದಾಯಿತು. ಇಂಥ ಹೆಸರು ದಕ್ಷಿಣದಲ್ಲಿರುವುದಿಲ್ಲ.

**ಶಂಬಾ ಮತ್ತು ನೀವು ಭಾಷಿಕ ಆಕೃತಿಗಳನ್ನು ಇಟ್ಟುಕೊಂಡು ಭಾಷಿಕರ ಸಾಂಸ್ಕೃತಿಕ ನಂಟನ್ನು ಹುಡುಕುವ ಸಂಶೋಧಕರು. ಶಂಬಾರವರ ಸಂಶೋಧನೆ ಬಗ್ಗೆ ನಿಮ್ಮ ಅಭಿಪ್ರಾಯ ತಿಳಿಯುವ ಕುತೂಹಲವಿದೆ.**

ಶಂಬಾ ಮರಾಠಿಯಲ್ಲಿ ಬರೆದ 'ಮರ್ಹಾಠಿ ಸಂಸ್ಕೃತಿ: ಕಾಂಹಿ ಸಮಸ್ಯಾ' ೧೯೫೨ರ ಸುಮಾರಿಗೆ ಬಂತು. ಸಂಕಾಲಿಯಾ ಮತ್ತಿತರರು ಅದನ್ನು ಕಟುವಾಗಿ ವಿರೋಧಿಸಿದರು. ನಾನು ಶಂಬಾರನ್ನು ಸಂಪೂರ್ಣ ಸ್ವೀಕರಿಸಲಿಲ್ಲ. ಆದರೂ ಅವರ ಚಿಂತನಾಕ್ರಮ ಗಂಭೀರವಾದದ್ದು, ಅದರ ಬಗೆಗೆ ಯೋಚಿಸುವಂತಾಗಬೇಕು ಎಂದುಕೊಂಡೆ. ಮಹಾರಾಷ್ಟ್ರ ಎನ್ನುವುದು ಮೂಲತಃ ಇರಲಿಲ್ಲ, ಇದ್ದದ್ದು ಕನ್ನಡದ್ದೇ ಸಂಸ್ಕೃತಿ ಎಂದು ಶಂಬಾ ಸಾಬೀತು ಪಡಿಸಲು ಯತ್ನಿಸಿದರು. ಮುಂದೆ ರಂ. ಶಾ. ಲೋಕಾಪುರ ಮುಂತಾದವರು ಇದನ್ನೇ ಅನುಸರಿಸಿ 'ಜ್ಞಾನೇಶ್ವರಿ'ಯಲ್ಲಿ ಬಹಳ ಶಬ್ದಗಳು ಕನ್ನಡದವು ಎಂದು ತೋರಿಸುವ ಪ್ರಯತ್ನ ಮಾಡಿದರು. ಆದರೆ 'ಜ್ಞಾನೇಶ್ವರಿ'ಯ ಶಬ್ದಾವಳಿ ಪ್ರತ್ಯಯವನ್ನು ಹೊರತುಪಡಿಸಿ, ಅದರ ಭಾವವೇ ಕನ್ನಡವಾಗಿದೆ ಎನ್ನುವುದು ಅತಿರೇಕ ಎಂದೆನಿಸುತ್ತದೆ. ವಿಶ್ವನಾಥ ಖೈರ ಎಂಬುವರು ತಮಿಳನ್ನು ಇಟ್ಟುಕೊಂಡು ಹೀಗೆ ಅತಿರೇಕ ಮಾಡಿದರು. ಲೋಕಾಪುರ ತಮ್ಮ ಅಧ್ಯಯನದಲ್ಲಿ ನೀಡಿರುವ ಕನ್ನಡ ಶಬ್ದಕೋಶದ ಬಹುಭಾಗ ಪ್ರಾಕೃತದ್ದು. ಸಂಸ್ಕೃತವು ಪ್ರಾಕೃತದಿಂದ ಮರಾಠಿಗೆ ಬರುವುದು, ಉಳಿದ ಭಾಷೆಗೂ ಹೋಗುವುದು ಸಾಧ್ಯವಿದೆ. ಶಬ್ದನಿರ್ಮಾಣದ ಮೂಲಕ ಸಂಸ್ಕೃತಿ ನಿರ್ಮಾಣಗೊಂಡಿರುವುದನ್ನು ನೀವು ಹೇಗೆ ಸಾಧಿಸುತ್ತೀರಿ ? ಶಂಬಾ ಅವರು ಕೆಲವು ಕಲ್ಪನೆಗಳ ಮೋಡಿಯಲ್ಲಿ ಸಿಕ್ಕಿಕೊಂಡಂತೆ ತೋರುತ್ತದೆ. ಇದು ವೇದಪೂರ್ವ ಕಾಲದ್ದು, ಈಗಲೂ ಅದೇ ಮುಂದುವರೆದಿದೆ ಎನ್ನುವುದು ಅವರ ನಿಲುವು. ಅವರು ಸೊಂಥಮೈರ್‌ನ ಪ್ರಭಾವಕ್ಕೆ ಸಿಲುಕಿದರು. ಖಂಡೋಬಾನ ಉಪಾಸನೆ ಎಂದರೆ ಸೂರ್ಯೋಪಾಸನೆ ಎಂದವರು ಹೇಳಿದರು. ಹಾಗೆ ನೋಡಿದರೆ ಅದಕ್ಕೆ ಸೂರ್ಯನ ಜತೆ ಯಾವ ಸಂಬಂಧವೂ ಇಲ್ಲ. ಶಂಬಾ ವೇದದಲ್ಲಿ ರುದ್ರ ಮತ್ತು ಸೂರ್ಯನ ಸಂಬಂಧವನ್ನು ಸತತವಾಗಿ ಜೋಡಿಸುತ್ತಲೇ ಇದ್ದರು. ಎಷ್ಟೋ ರಿಪ್ಪೀಲಿಂಗ್ ವಿಚಾರಗಳು ಅವರಲ್ಲಿವೆ. ನಾನು ಯಾರನ್ನೂ ಸಂಪೂರ್ಣ ನಿರಾಕರಣೆ ಮಾಡುವುದಿಲ್ಲ. ಹಾಗೆಯೇ ಗೌರವಕ್ಕಾಗಿ ಸ್ವೀಕರಿಸುವ ಬಂಧನಕ್ಕೂ ಒಳಗಾಗುವುದಿಲ್ಲ.

**ಮರಾಠಿ ಸಂಸ್ಕೃತಿಯ ಬಗ್ಗೆ ಬೇಂದ್ರೆ ಕೂಡ ಬರೆಯುತ್ತಿದ್ದರು. ಅವರ ಚಿಂತನೆಯ ಸ್ವರೂಪ ಎಂತಹುದು ?**

ಬೇಂದ್ರೆ ಪುಣೆಯ ವಿಠ್ಠಲರಾವ ದೀಕ್ಷಿತರ ಬಳಿಗೆ ಬರುತ್ತಿದ್ದರು. ಹಾಗೆ ಬಂದಾಗಲೆಲ್ಲ ನನಗೂ ಕರೆ ಕಳಿಸುತ್ತಿದ್ದರು. ನನ್ನನ್ನು ಮಾನಸಪುತ್ರ ಎನ್ನುತ್ತಿದ್ದರು. ಅವರ ಜತೆ ಮಾಸ್ತಿ, ಗೋಕಾಕರೂ ಆಗಾಗ್ಗೆ ಬರುತ್ತಿದ್ದರು. ಮುಗಳಿಯಂತೂ ಬಹಳ ಸಲ ಬರುತ್ತಿದ್ದರು. ಬೇಂದ್ರೆ ಓದುತ್ತಿದ್ದ ಕನ್ನಡ ಕವಿತೆಯನ್ನು ಮುಗಳಿ ಮರಾಠಿಗೆ ಭಾಷಾಂತರಿಸಿ ಹೇಳುತ್ತಿದ್ದರು. ಆ ಕಾಲದಲ್ಲಿ ಬೇಂದ್ರೆ ಮಾಡಿದ ಹಲವು ಭಾಷಣಗಳ ರಿಪೋರ್ಟುಗಳನ್ನು ನಾನು ಬರೆದೆ. ಅವರ ಕಪಾಲಿಶಾಸ್ತ್ರಿ, ರಮಣ ಮಹರ್ಷಿ, ಅರವಿಂದರ ಜತೆಗಿನ ಪ್ರತ್ಯಕ್ಷ ಸಂಬಂಧ ಇತ್ಯಾದಿ ಕುರಿತು ಬಹಳ ಬರೆದೆ. ಮುಂದೆ ಅವರು ಗಣಿತದ ಭಾಷೆಯಲ್ಲೇ ಮಾತಾಡಲಾರಂಭಿಸಿದರು. ಅವರ ಕೊನೆಯ ಘಟ್ಟ ನಿಗೂಢ ಎನಿಸಿತು. ಅವರ ಮಾತು ಅರ್ಥವಾಗದಾಯಿತು. ಅವರು ಬೇರೊಂದು ಲೋಕದಲ್ಲಿ ವಿಹರಿಸುತ್ತಿದ್ದಂತಿತ್ತು. ಕೆಲವರು ಅವರನ್ನು ಅಪಹಾಸ್ಯ ಮಾಡುತ್ತಿದ್ದರು. ನಮಗೆ ಅರ್ಥವಾಗಲಿಲ್ಲ ಎಂದಾಕ್ಷಣ ಅವರು ಕಡಿಮೆ ಎಂದು ಭಾವಿಸಬೇಕಿಲ್ಲ ಎಂದೂ ಕೆಲವರು ಹೇಳುತ್ತಿದ್ದರು.

**ಕರ್ನಾಟಕದಲ್ಲಿ ಬೇರೆ ಇನ್ಯಾವ ವಿದ್ವಾಂಸರ ಜತೆ ನಿಮಗೆ ಸಂಬಂಧವಿತ್ತು ?**

ಪಿ. ಬಿ. ದೇಸಾಯಿಯವರ ಜತೆ ಪತ್ರ ವ್ಯವಹಾರ ಇಟ್ಟುಕೊಂಡಿದ್ದೆ. ಅವರ ಪ್ರಭಾವ ನನ್ನ ಮೇಲಿತ್ತು. ನನ್ನ 'ಲಜ್ಜಾಗೌರಿ' ಪುಸ್ತಕವನ್ನು ಅವರಿಗೇ ಅರ್ಪಣೆ ಮಾಡಿದ್ದೇನೆ. ಅವರನ್ನು ಭೇಟಿ ಮಾಡುವ ಆಸೆಯಿತ್ತು. ಕೊನೆಗೂ ಅದು ಕೈಗೂಡಲಿಲ್ಲ.

**ನೀವು, ಶಂಬಾ, ಬೇಂದ್ರೆ ಮುಂತಾದವರು ಎರಡು ಭಾಷಿಕ ಸಂಸ್ಕೃತಿಗಳ ನಡುವೆ ಸೇತುವೆ ಕಟ್ಟುವ ಕಾರ್ಯ ಮಾಡಿದವರು. ಆದರೆ ಪ್ರಾದೇಶಿಕವಾದಿ ಶಕ್ತಿರಾಜಕಾರಣ ಭಾಷಿಕರ ನಡುವಣ ಸಂಬಂಧಗಳನ್ನು ಒರಟಾಗಿ ಭಗ್ನಗೊಳಿಸುತ್ತದೆ. ಈ ವೈರುಧ್ಯವನ್ನು ಹೇಗೆ ಫೀಲ್ ಮಾಡುತ್ತೀರಿ ?**

ಏನು ಹೇಳಲಿ ? ನನಗೆ ತೀರ ದುಃಖವೆನಿಸುತ್ತದೆ. ಈ ಗಡಿ ಸಮಸ್ಯೆಯಿಂದ ಕರ್ನಾಟಕದ ವಿದ್ವಾಂಸರೂ ಪಾರಾಗಲಿಲ್ಲ. ನನ್ನ ಶಿವಾಜಿ ಬಗೆಗಿನ ಪುಸ್ತಕದ ಬಗೆಗೆ ಕರ್ನಾಟಕದಲ್ಲಿ ಬಹಳ ಹೊಗಳಲಾಯಿತು. ಅದನ್ನು ಕನ್ನಡಿಗರ ಮನೆಮನೆಗೆ ತಲುಪಿಸ ಬೇಕೆಂದು ಹೇಳಲಾಯಿತು. ನನಗೆ ಗೌರವ ವ್ಯಕ್ತಪಡಿಸಲಾಯಿತು. ಅಂದರೆ ಗಡಿ ವಿವಾದಕ್ಕಾಗಿ ಇದನ್ನು ಬಳಸಿಕೊಳ್ಳಲಾಯಿತು. ಆದರೆ ನಾನು ರಾಜಕಾರಣಕ್ಕಾಗಿ ಇದನ್ನು ಬರೆಯಲಿಲ್ಲ. ಕರ್ನಾಟಕದ ಜನ ನನ್ನ ಬಂಧುಗಳು. ಅವರಿಂದ ನನಗೆ ಯಾವ ಕೆಟ್ಟ ಅನುಭವ ಬರಲಿಲ್ಲ. ಆದರೆ ರಾಜಕಾರಣದ ಪಾತಳಿಯಲ್ಲಿ ಅತ್ಯಂತ ಕಹಿತನವಿದೆ.

**ನಿಮ್ಮ ಸಂಶೋಧನೆಗಳಿಗಾಗಿ ನೀವು ಕರ್ನಾಟಕ ಸುತ್ತಾಡಿದಿರಿ. ಅದರ ಅನುಭವ ಹೇಗಿತ್ತು ?**

ಚೆನ್ನಾಗಿತ್ತು. ನನಗೆ ಕನ್ನಡ ಬರದಿದ್ದರೂ ಹಿಂದಿ, ಇಂಗ್ಲಿಷ್ ಬಳಸುವುದರಿಂದ ಏನೂ ತೊಂದರೆಯಾಗಲಿಲ್ಲ. ಒಮ್ಮೆ ಹಳಿಯಾಳದಲ್ಲಿ ತುಳಜಾಭವಾನಿ ಮಂದಿರ ಹುಡುಕುತ್ತಿದ್ದೆ. ಒಬ್ಬ ಹುಡುಗಿ ಸಿಕ್ಕು ಮಂದಿರಕ್ಕೆ ಕರೆದೊಯ್ದಳು. ಆಕೆ ಪುಣೆಯವರಂತೆ ಶುದ್ಧ ಮರಾಠಿಯಲ್ಲಿ ಮಾತಾಡುತ್ತಿದ್ದಳು. ಆದರೆ ಆಕೆ ಕರ್ನಾಟಕದ ಅಭಿಮಾನಿ. ಇದು ನನಗೆ ನಿರೋಗಿ ಎನಿಸಿತು.

**ನಿಮ್ಮ ವಿಠ್ಠಲ ಪರಂಪರೆ ಕುರಿತ ಕೃತಿ ಪ್ರಕಟವಾದಾಗ ನೀವು ಬಹಳ ವಿರೋಧ ಎದುರಿಸಬೇಕಾಯಿತು ಎಂದು ಕೇಳಿರುವೆ. ಯಾಕಾಗಿ ?**

ನನ್ನ ವಿರುದ್ಧ ಮಾಡಿದ ದುರುದ್ದೇಶಪೂರಿತ ಕುತಂತ್ರವದು. ಕೆಲವು ಅಸೂಯಾಪರ ವ್ಯಕ್ತಿಗಳು ತಮ್ಮ ಜೇಷ್ಠತೆ-ಶ್ರೇಷ್ಠತೆಗಾಗಿ ಅಹಂಕಾರದಿಂದ ಮಾಡಿದ ಕಾರ್ಯವದು. ನನ್ನ ವಾದವನ್ನು ಸರಳವಾಗಿ ಅರ್ಥಮಾಡಿಕೊಳ್ಳುವ ಇಚ್ಛೆಯೇ ಅವರಿಗಿರಲಿಲ್ಲ. ನನ್ನ ವಾದವಿಷ್ಟೆ: ಸ್ಥಳ ಪುರಾಣಗಳನ್ನು ಭಕ್ತರ ಭಾವನೆಯನ್ನು ಜಾಗ್ರತಗೊಳಿಸಲು ಬಳಸಲಾಗುತ್ತದೆ. ಜ್ಞಾನೇಶ್ವರರ ಪೂರ್ವಕಾಲದಿಂದಲೂ ಪಾಂಡುರಂಗ ಮಾಹಾತ್ಮ್ಯೆಯು ಸ್ಕಂದಪುರಾಣಾಂತರ್ಗತ ವಾಗಿರುವುದು. ಈ ಮಾಹಾತ್ಮ್ಯೆಯಲ್ಲಿ ವಿಠ್ಠಲಮೂರ್ತಿಯ ಎದೆ ಮೇಲಿನ ಗೂಢ ಮಂತ್ರದ ಉಲ್ಲೇಖವಿದೆ. ಇದು ಪಂಢರಾಪುರದ ವಿಠ್ಠಲಮೂರ್ತಿಯಲ್ಲಿಲ್ಲ. ಮಾಢೆಯಲ್ಲಿರುವ ವಿಠ್ಠಲ ಮೂರ್ತಿಯಲ್ಲಿದೆ. ಹಾಗಿದ್ದರೆ ಸಂಕಟದ ಕಾಲದಲ್ಲಿ ಮೂಲಮೂರ್ತಿಯನ್ನು ಪಂಢರಾಪುರದಿಂದ ಮಾಢೆಗೆ ಸ್ಥಳಾಂತರಿಸಿರಬೇಕು. ಮೂರ್ತಿಯ ಬದಲಾವಣೆಯಿಂದ ದೇವತ್ವ ಬದಲಾಗುವುದಿಲ್ಲ. ಗುಜರಾತಿನ ಸೋಮನಾಥನ ಮೇಲೆ ಹಲವು ಬಾರಿ ಆಕ್ರಮಣವಾಯಿತು. ಹೀಗಿದ್ದೂ ಹನ್ನೆರಡೂ ಜ್ಯೋತಿರ್ಲಿಂಗಗಳಿಗೆ ಸೋಮನಾಥನೇ ಕೇಂದ್ರ. ಕಾಶಿ ವಿಶ್ವನಾಥ ಮಂದಿರದಲ್ಲೂ ಇದೇ ತರಹ ಆಯಿತು. ಆದರೂ ಜನ ದರ್ಶನ ಮಾಡುತ್ತಿದ್ದಾರೆ. ಅವರ ಶ್ರದ್ಧೆಗೆ ಯಾವ ಬಾಧೆಯೂ ಇಲ್ಲ. ಮೂರ್ತಿ ಭಗ್ನಗೊಂಡರೆ ಪೂಜಿಸಲಾಗುವುದಿಲ್ಲ. ಬೇರೆ ಮೂರ್ತಿ ತಂದು ಪ್ರಾಣಪ್ರತಿಷ್ಠೆ ಮಾಡಿದ ಬಳಿಕ ದೇವತ್ವ ಅದರಲ್ಲಿ ಸಂಚರಿಸುತ್ತದೆ ಎಂದು ನಮ್ಮವರು ಭಾವಿಸುತ್ತಾರೆ.

**ನಿಮ್ಮ ಕೃತಿಗೆ ಪಂಢರಾಪುರದ ಗುಡಿಯವರ ಪ್ರತಿಕ್ರಿಯೆ ಹೇಗಿತ್ತು ?**

ಪಂಢರಾಪುರದ ಪುರೋಹಿತರಿಗೆ ಮೂಲಮೂರ್ತಿ ಅಲ್ಲಿಲ್ಲ, ಇರುವುದು ಹುಸಿಮೂರ್ತಿ ಎಂದಾದರೆ, ದಂಧೆಗೆ ಹೊಡೆತ ಬೀಳಬಹುದು ಎಂದೆನಿಸಿತು. ಹೀಗಾಗಿ ಅವರು ನನ್ನ ಬಗೆಗೆ ಮತ್ಸರವಿರುವ ಪುಣೆಯ ವಿದ್ವಾಂಸರನ್ನು ಖರೀದಿಸಿದರು. ಭಾವುಸಾಹೇಬ ಎಂಬ ಅರ್ಚಕರು ಹಣದ ಥೈಲಿಯೊಂದಿಗೆ ಪುಣೆಗೆ ಬಂದು ಮಧುಮಾಟೆಯವರಲ್ಲಿ ಇಳಿದುಕೊಂಡರು. ನನ್ನ ವಿರುದ್ಧ ಬರೆದರು. ಭಾಷಣ ಮಾಡಿದರು. ಅದೂ ಹೋಗಲಿ ನನ್ನ ಪಿಎಚ್.ಡಿ. ಗುರುಗಳಾದ ರಾ. ಶ. ವಾಳಿಂಬೆಯವರ ಭಾಷಣವೂ ಜರುಗಿತು. 'ನಾನು ಸ್ಕಂದಪುರಾಣದ ಬೃಹತ್ ಗ್ರಂಥವನ್ನು ಮೂರು ಮೂರು ಬಾರಿ ತಿರುವಿ ಹಾಕಿದೆ. ನನಗೆಲ್ಲೂ ಪಾಂಡುರಂಗ ಮಾಹಾತ್ಮ್ಯೆ ನೆನಪಾಗಲಿಲ್ಲ. ಈ ಗೃಹಸ್ಥ ಸುಳ್ಳು ಹೇಳುತ್ತಿದ್ದಾನೆ' ಎಂದು ಅವರು ನನ್ನ ವಿರುದ್ಧ ಮಾತಾಡಿದರು. 'ನಾನು ಸ್ಕಂದಪುರಾಣಾಂತರ್ಗತವಾಗಿರುವ ದಾವೆ ಮಾಡುವವನು. ಪಾಂಡುರಂಗ ಮಾಹಾತ್ಮ್ಯೆ ಅದರಲ್ಲೋಂದು' ಎಂದು ಹೇಳಿದೆ ಇದನ್ನು ಯಾರೂ ಕೇಳಿಸಿಕೊಳ್ಳಲಿಲ್ಲ. ಕಡೆಗೆ ನಾನಿಷ್ಟೆ ಹೇಳಿದೆ: 'ಭಾರತೀಯ ಸಂಶೋಧನ

ಮಂಡಳಿಯ ಕುರ್ಚಿಗಳ ತುಂಬ ಧೂಳು ತುಂಬಿತ್ತು. ತೇರೆಯ ನಿಮಿತ್ತದಲ್ಲಿ ಜನ ಸೇರಿದರು. ಧೂಳು ಝಾಡಿಸಿದರು'.

**ಶಿವಾಜಿಯನ್ನು ಮಹಾರಾಷ್ಟ್ರದ ಅಸ್ಮಿತೆಯನ್ನಾಗಿ ಮಾಡಲಾಗಿದೆ. ಜತೆಗೆ ಅವನನ್ನು ಮುಸ್ಲಿಮರ ವಿರೋಧಿ ಪ್ರತಿಮೆಯನ್ನಾಗಿಸಲಾಗಿದೆ. ಶಿವಾಜಿಯ ಬದುಕಿನಲ್ಲಿ ನಿಜವಾಗಿ ಈ ಆಯಾಮವಿತ್ತೇ ?**

ಇದು ತಪ್ಪು. ಶಿವಾಜಿ ಜತೆಗೆ ಅನೇಕ ಮುಸಲ್ಮಾನರಿದ್ದರು. ಅಫಜಲಖಾನನ ವಧೆಯ ಕಾಲಕ್ಕೆ ಶಿವಾಜಿಯ ಸನಿಹವಿದ್ದ ಆತ್ಮೀಯರಲ್ಲಿ ಒಬ್ಬ ಮುಸಲ್ಮಾನನಿದ್ದ. ಶಿವಾಜಿ ಯುದ್ಧಕಾಲದಲ್ಲಿ ಕುರಾನದ ಪ್ರತಿಯನ್ನು ಹಳ್ಳಿಯ ಖಾಜಿಯ ಹತ್ತಿರ ಇರಿಸುತ್ತಿದ್ದ. ಅನಾಥ ಮಹಿಳೆಯರನ್ನು ಗೌರವಪೂರ್ವಕವಾಗಿ ಮನೆಗೆ ತಲುಪಿಸುತ್ತಿದ್ದ. ಜನರನ್ನು ಮುಸಲ್ಮಾನರಾಗಿ ಮತಾಂತರಗೊಳಿಸುವ ಮುಸಲ್ಮಾನ ಸತ್ತೆಯ ವಿರೋಧದಲ್ಲಿ ಅವನಿದ್ದ. ಜನಸಾಮಾನ್ಯರ ಬಾಬತ್ತಿನಲ್ಲಿ ಅಲ್ಲ.

**ಕರ್ನಾಟಕದಲ್ಲೂ ಟಿಪ್ಪುವನ್ನು ಹಿಂದೂ ವಿರೋಧಿ ಎಂದು ವಿಶ್ಲೇಷಿಸುವ ವಾದಗಳಿವೆ. ಆದರೆ ಅವನ ಅಧಿಕಾರಿ ಮತ್ತು ಸೈನಿಕರಲ್ಲಿ ಎಲ್ಲ ಜನವರ್ಗದವರೂ ಇದ್ದರು. ಶೃಂಗೇರಿ ಗುರುಗಳ ಬಗ್ಗೆ ಅವನಿಗೆ ಬಹಳ ಭಕ್ತಿಯಿತ್ತು. ಪೇಶ್ವೆ ಸೈನ್ಯವು ಶೃಂಗೇರಿಗೆ ಬಂದು ಗುಡಿಯನ್ನು ಲೂಟಿ ಮಾಡಿದಾಗ ಬರೆದ ಪತ್ರಗಳಲ್ಲಿ ಇದಕ್ಕೆ ದಾಖಲೆಯಿದೆ. ಪೇಶ್ವೆಗಳು ಕರ್ನಾಟಕದ ಗುಡಿಗಳ ಸೂರೆಹೊಡೆಯುತ್ತಿದ್ದುದಕ್ಕೆ ಕಾರಣವೇನು ?**

ಕಾರಣವಿಷ್ಟೆ: ಮರಾಠಿ ಸತ್ತಾಧೀಶರಿಗೆ ಸದಾ ಹಣದ ಕೊರತೆಯಿತ್ತು. ಹಣ ಬೇಕೆನಿಸಿದಾಗ ಶೃಂಗೇರಿಯ ಲೂಟಿ ಮಾಡಿದರು. ಚಿಪೂಜಿ ಅಪ್ಪಾ ಮತ್ತು ಬಾಜಿರಾವ ಇಬ್ಬರೂ ಬ್ರಹ್ಮೇಂದ್ರಸ್ವಾಮಿ ಧಾವರಿಸಕರರನ್ನು ಗುರುವೆಂದು ಗೌರವಿಸುತ್ತಿದ್ದರು. ವಸೂಲಿಗಾಗಿ ಅವರಿಂದ ಪತ್ರ ಬರುತ್ತಿತ್ತು. ಅಡಿಕೆ, ತೆಂಗು, ಧಾನ್ಯ ಕಳಿಸಿ ಎಂಬ ತಗಾದೆ. ಜತೆಗೆ ಹಣದ ಬೇಡಿಕೆಯೂ ತಪ್ಪಿದ್ದಲ್ಲ. ಪೇಶ್ವೆ ಸೋದರರಿಗೆ ಒಂದೆಡೆ ಗುರುವಿನ ಮೇಲೆ ಗೌರವ. ಮತ್ತೊಂದೆಡೆ ತಾವು ಮುದ್ದತ್ತು ಪಾಲಿಸುತ್ತಿಲ್ಲವೆಂಬ ಚಿಂತೆ. ಅವರು ತಮಗೆ ಸಂಕಟದಲ್ಲಿ ಸಹಾಯ ಮಾಡಿದ ಅಪರಾಧ ಭಾವನೆಯೂ ಇರುತ್ತಿತ್ತು. ಹೀಗಾಗಿ ಇಬ್ಬರೂ ಚಿಂತಾಗ್ರಸ್ತರಾಗಿರುತ್ತಿದ್ದರು. ಲೂಟಿಗೆ ಹೊರಡುತ್ತಿದ್ದರು.

**ಮಹಾರಾಷ್ಟ್ರದ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆ ಹೇಗೆ ನಡೆಯುತ್ತಿದೆ ?**

ನನಗದು ಸಮಾಧಾನ ತಂದಿಲ್ಲ. ಗುರುವೆಂದು ಒಪ್ಪಿದವರಲ್ಲಿ ಫಕೀರಿ ವೃತ್ತಿ ಸ್ವೀಕರಿಸುವುದು ಈಗಿನ ಸಂಶೋಧಕರಿಗೆ ಸಾಧ್ಯವಿಲ್ಲ. ಆದರೆ ಕೊನೇಪಕ್ಷ ಇದಕ್ಕಾಗಿಯೇ ನೇಮಕಗೊಂಡವರು ಮತ್ತು ಸಂಬಳ ಪಡೆಯುವವರು ಅಂದಾಗ, ಅದರ ಬಗೆಗೆ ನಿಷ್ಠೆ, ಪ್ರೀತಿ ಇರಲೇಬೇಕು. ಪ್ರಾಮಾಣಿಕವಾಗಿ ಕರ್ತವ್ಯ ನಿರ್ವಹಿಸಬೇಕು. ಆರ್ಥಿಕ ಅನುದಾನ ಸಿಗುತ್ತದೆಂದು ನಡೆವ ಗೋಷ್ಠಿಗಳು ತೋರಿಕೆಯವಾಗಿರುತ್ತವೆ. ವಿದ್ವಾಂಸರು ತಮ್ಮ ಪ್ರಬಂಧ ಓದಿ, ಸಂಭಾವನೆ ಪಡೆದು ಹೊರಟುಹೋಗುತ್ತಾರೆ. ಬೇರೆಯವರ ಪ್ರಬಂಧವನ್ನು ಆಲಿಸುವ ತಾಳ್ಮೆಯೂ ಇರುವುದಿಲ್ಲ. ಇದರಲ್ಲಿ ನನ್ನ ಬಹಳಷ್ಟು ಗೆಳೆಯರೂ ಇದ್ದಾರೆಂಬ ದುಃಖ ನನಗಿದೆ.

**ಗತಕಾಲದ ಸಂಶೋಧನೆಯನ್ನು ಕೈಕೊಂಡಾಗ ಅದನ್ನು ವರ್ತಮಾನೀಕರಿಸುವ ಸವಾಲು ಎದುರಾಗುತ್ತದೆ. ಈ ಸಮಸ್ಯೆಯನ್ನು ಹೇಗೆ ನೋಡುತ್ತೀರಿ ?**

ನನಗೆ ಕಾಲದ ಅಖಂಡತೆಯೇ ಮುಖ್ಯವೆನಿಸುತ್ತದೆ. ಅಧ್ಯಯನದ ಅನುಕೂಲತೆಗಾಗಿ ನಾವು ಕಾಲಖಂಡವನ್ನು ಒಡೆಯುತ್ತೇವೆ – ಪ್ರಾಚೀನ, ಮಧ್ಯ, ಆಧುನಿಕ ಎಂದು. ಶಾಸ್ತ್ರದಂತೆ ಕಾಲವನ್ನೂ ಬಳಸಿಕೊಳ್ಳುತ್ತೇವೆ. ಆದರೆ ಕಾಲದ ಮತ್ತು ಜೀವನದ ಸಾತತ್ಯದ ಬಗೆಗೆ ಮಹತ್ವ ನೀಡಬೇಕು. ಕಂಟಿನ್ಯುಯಿಟಿಯ ಯಾವುದೇ ಒಂದು ತುಣುಕು ಗತದ ಜತೆ ಸಂಬಂಧ ಹೊಂದಿರುತ್ತದೆ. ಅಂಥ ಅನುಭವ ನಿಮಗೆ ಬರದೇ ಇದ್ದರೆ, ನಿಮ್ಮ ಪದ್ಧತಿಯಲ್ಲೇ ಎಲ್ಲೋ ದೋಷವಿದೆ ಎಂದರ್ಥ. ನಾನು 'ಲಜ್ಜಾಗೌರಿ'ಯಲ್ಲಿ ಹಿಜಡಾಗಳಂತಹ ಆಧುನಿಕ ಸಮಸ್ಯೆಯನ್ನೂ ತಂದಿದ್ದೇನೆ. ಆದರೆ ಮೂಲದ ಬಲಸ್ಥಾನವನ್ನು ನಿಮಗೆ ನಿರಾಕರಿಸಲು ಬರುವುದಿಲ್ಲ. ಅಂದರೆ ಪ್ರಾಚೀನಕಾಲದ್ದೆಲ್ಲ ತುಚ್ಛ, ನಿಂದನೀಯ ಎಂದಲ್ಲ. ಕಾಲಾಂತರದಲ್ಲಿ ಅದರ ಶಕ್ತಿ ಕಡಿಮೆಯಾಗಿರಬಹುದು. ಆದರೆ ಅದನ್ನು ಓಡಿದೇ ಮುಂದುವರಿಯಬೇಕಾಗುತ್ತದೆ. ಇದರ ಕಾಲ ಸಂದರ್ಭವೇನು ? ಇಂದಿನ ಕಾಲಕ್ಕೂ ಅದಕ್ಕೂ ಏನು ಸಂಬಂಧ ? ಇದರ ಮಹತ್ವವೇನು ? ಎಂದೆಲ್ಲ ಕೇಳಲಾಗುವುದು ಕಂಟಿನ್ಯುಯಿಟಿಯ ಪ್ರಜ್ಞೆ ಇಲ್ಲದ್ದರಿಂದಲೇ. ಕಾಲ ಮತ್ತು ಜೀವನಗಳ ಸಾತತ್ಯದ ಧಾರಣೆ ಖಚಿತವಾಗಿದ್ದರೆ, ವ್ಯಾಖ್ಯಾನದಲ್ಲಿ ಗೊಂದಲವಾಗುವುದಿಲ್ಲ.

**ನಮ್ಮ ಕ್ಲಾಸಿಕಲ್ ಚರಿತ್ರೆಯಲ್ಲಿ ಪ್ರಭುತ್ವಗಳ ನಡುವೆ ನಡೆದ ಯುದ್ಧವನ್ನು ಧರ್ಮಗಳ ನಡುವಿನ ಯುದ್ಧವೆಂದು ಬಣ್ಣಿಸುವುದುಂಟು. ಈ ಗ್ರಹಿಕೆ ಅನೇಕ ಸಂಶೋಧಕರಲ್ಲೂ ಮುಂದುವರೆದಿದೆ.**

ಆಂಗ್ಲರು ಅದನ್ನೆಲ್ಲ ಪೂರ್ವಯೋಜಿತವಾಗಿಯೇ ಮಾಡಿದರು. ಧರ್ಮ ಮತ್ತು ಪ್ರದೇಶಗಳಲ್ಲಿ ದ್ವೇಷ ಹೆಚ್ಚಾದಷ್ಟು ಅವರಿಗೆ ಅನುಕೂಲ. ತಾವಂತೂ ಹೋಗಲೇಬೇಕು. ಹೋಗುವಾಗ ಈ ದೇಶವನ್ನು ಅಖಂಡವಾಗಿ ಉಳಿಸಬಾರದು. ಖಂಡವನ್ನಾಗಿ ಮಾಡಿ ಸ್ವಾಧೀನಕ್ಕೆ ಕೊಡುವುದು ಎಂದು ನಿರ್ಧರಿಸಿದರು. ಅದಕ್ಕೆ ತಕ್ಕಂತೆ ಭೇದಹುಟ್ಟಿಸುವ ಚರಿತ್ರೆ ರಚಿಸಿಕೊಟ್ಟರು. ನೀವು ನಾಥಪಂಥದ ಮೇಲೆ ಕೆಲಸ ಮಾಡಿರುವ ನಿಮ್ಮ ಕುತೂಹಲಕ್ಕೆ ಹೇಳುತ್ತಿರುವೆ. ಇಂಗ್ಲೆಂಡಿಗೂ ನಾಥಪಂಥದವರು ಹೋಗುತ್ತಿದ್ದರು. ಬಲೂಚಿಸ್ತಾನದ ಸೀಮೆಯಲ್ಲಿರುವ ಹಿಂಗಲಾಜ್ ಪರ್ವತಕ್ಕೆ ಹೋಗುತ್ತಿದ್ದರು. ಈ ನಾಥಝುಂಡಿಯಲ್ಲಿ ಹಲವು ಮುಸಲ್ಮಾನ ಯೋಗಿಗಳಿದ್ದರು.

**ಕರ್ನಾಟಕದಲ್ಲಿ ಸೂಫಿ ನಾಥ ದತ್ತಪಂಥಗಳ ಕೂಡುವಿಕೆಯ ತಾಣಗಳನ್ನು ಇಟ್ಟುಕೊಂಡು ಮತೀಯ ಸಂಘಟನೆಗಳು ವಿವಾದ ಸೃಷ್ಟಿಸಿವೆ. ಇದು ಭಾರತದ ಕೂಡುಸಂಸ್ಕೃತಿಯ ಸಂಶೋಧಕರಿಗೆ ಒಂದು ಸವಾಲಿನಂತಿದೆ.**

ಇದರಿಂದ ಪರಿಸರ ಕಲುಷಿತವಾಗುತ್ತದೆ. ನಾನೆಂದೂ ನನ್ನೆದುರಿಗಿರುವ ಪ್ರಶ್ನೆಯನ್ನು ಬಂಡವಾಳವನ್ನಾಗಿ ಮಾಡಿಕೊಳ್ಳುವುದಿಲ್ಲ. ಬ್ರಾಹ್ಮಣನಾಗಿ ಹುಟ್ಟಬೇಕೆಂದು ನಾನು ನಿರ್ಧರಿಸಲಿಲ್ಲ. ಜಾತೀಯತೆಯ ಆಚೆಗೂ ಹೋಗಿ ಯೋಚಿಸುವ ಆಧುನಿಕ ವಿಭೂತಿ ಪುರುಷರ ಬಗೆಗೆ ನನಗೆ ಗೌರವವಿದೆ. ಆದರೆ ಮಹಾರಾಷ್ಟ್ರದಲ್ಲಿ ಮರಾಠಾ ಜಾತಿಯ ಡಾಮಿನೆನ್ಸ್ ಎಷ್ಟಿದೆಯೆಂದರೆ, ನನ್ನಂಥವನಿಗೂ ಭಯವಾಗುತ್ತದೆ. ನನ್ನ 'ಶಿಖರ ಶಿಂಗಣಾಪುರಾಚ ಶಂಭು ಮಹಾದೇವ' ಕೃತಿಯಲ್ಲಿ ಶಿವಾಜಿಯ ಕುಲವನ್ನು ಹೊಯ್ಸಳ ಎಂದು ನಾನು ಗುರುತಿಸಿದ್ದೇನೆ. ಹೊಯ್ಸಳರೆಂದರೆ ಯಾದವರು. ವಿಜಯನಗರದ ಅರಸರೂ ಮೂಲದಲ್ಲಿ ಯಾದವರೇ, ಅಂದರೆ ಗೌಳಿಗಳು. ಮೈಸೂರಿನವರೂ ಯದುವಂಶೀಯರು. ಆದರೆ ಇದಕ್ಕೆ ಮರಾಠರು ಕೆರಳಿದರು. ನನ್ನನ್ನು ವಿರೋಧಿಸಿದರು. ಸಂಭಾಜಿ ಬ್ರಿಗೇಡ್, ಮರಾಠಾ ಮಹಾಸಂಘಗಳು ಬೆದರಿಕೆ ಹಾಕಿದವು. ನನ್ನ ಹೇಳಿಕೆ ಸರಿಯೊ ತಪ್ಪೊ ಎಂದು ಪರೀಕ್ಷಿಸುವ ತಾಳ್ಮೆ ಅವರಿಗಿಲ್ಲ. ಅವರೋ 'ಶಹಾಣ್ಣವ' (ತೊಂಬತ್ತಾರು) ಕುಲದ ಮರಾಠರು. ಅಂದರೆ ಈ ಹಿಂದೆ ರಜಪೂತರಾಗಿದ್ದವರು. ಇಂಥವರಿಗೆ ಫುಲೆ, ಶಾಹು ಮಹಾರಾಜರ ಹೆಸರು ಹೇಳುವ ಅಧಿಕಾರವಾದರೂ ಎಲ್ಲಿದೆ ? ಇವರಿಗೆ ಸಿಟ್ಟು ಬರುವುದೆಂದರೆ ಉಳಿದವರನ್ನು ತುಚ್ಛವಾಗಿ ಕಾಣುವುದು ಎಂದರ್ಥ. ಶಿವಾಜಿಯು ಮರಾಠನೇ ಆಗಿರಬೇಕು ಎಂಬುದು ಇವರ ಇಚ್ಛೆ. ಸ್ವತಃ ಶಿವಾಜಿಯೇ ಬಂದು 'ನಾನು ಗೌಳಿ' ಎಂದು ಹೇಳಿದರೂ ಅವನ ಮೇಲೇ ಹಲ್ಲೆ ಮಾಡುವವರು ಇವರು.

**ಪುಣೆಯಲ್ಲಿ ಶಿವಾಜಿ ಕುರಿತು ಜೇಮ್ಸ್ ಲೈನನ ಗ್ರಂಥ ಪ್ರಕಟವಾದಾಗ, ಭಂಡಾರ್ಕರ್ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ ಮೇಲೆ ದಾಳಿ ನಡೆಯಿತು. ವಿದ್ವಾಂಸರ ಮೇಲೂ ಹಲ್ಲೆ ಮಾಡಲಾಯಿತು. ಈ ವಾತಾವರಣ ಮೊದಲಿನಿಂದಲೂ ಇದೆಯೇ ?**

ಈಗೀಗ ತೀರ ಹದಗೆಟ್ಟಿದೆ. ರಾಜಕೀಯ ಅಧಿಕಾರಸ್ಥರಿಂದ ಈ ವಾತಾವರಣ ಉಳಿಸುವ ಪ್ರಯತ್ನ ನಡೆದಿದೆ. ಭಂಡಾರ್ಕರ್ ಸಂಸ್ಥೆಯ ಮೇಲೆ ಹಲ್ಲೆ ಮಾಡಿಸಿದವರನ್ನು ಜಾಮೀನಿನ ಮೇಲೆ ಬಿಟ್ಟಾಗ, ಮೆರವಣಿಗೆಯನ್ನೂ ಹೊರಡಿಸಲಾಯಿತು. ಜೇಮ್ಸ್ ಅವಕಾಶ ಕೇಳಿದ್ದರಿಂದ ಭಂಡಾರ್ಕರ್ ಸಂಸ್ಥೆ ಸಂಶೋಧನೆ ಮಾಡಲು ಕೊಟ್ಟಿತು. ಸಂಶೋಧಕನ ಮತಕ್ಕೂ ಅದಕ್ಕೂ ಏನು ಸಂಬಂಧ ? ನೀವು ಶಿವಾಜಿಯ ಅಪಮಾನ ಮಾಡಲು ಸಹಕರಿಸಿದಿರಿ ಎನ್ನುವುದು ಅವರ ವಾದ. ಖಟ್ಲೆಯನ್ನು ಜೇಮ್ಸನ ಬರವಣಿಗೆ ಮೇಲೆ ಹಾಕಿದರೆ ತಾಳುವುದಿಲ್ಲ. ಆದರೂ ಆಗಾಗ ಬೆದರಿಕೆ ನೋಟಿಸ್ ಕೊಡುತ್ತ ಭಯಗ್ರಸ್ತ ವಾತಾವರಣ ಸೃಷ್ಟಿ ಮಾಡುತ್ತಾರೆ. ಯಾರೂ ಜ್ಞಾನೋಪಾಸನೆಯ ಪ್ರಯತ್ನ ಮಾಡಬಾರದು, ಲೆಕ್ಕಣಿಕೆ ಎತ್ತಬಾರದು ಎಂಬುದು ಅವರ ಉದ್ದೇಶ.

**ಇಂತಹ ಸನ್ನಿವೇಶ ಮಹಾರಾಷ್ಟ್ರದಲ್ಲಿ ಮಾತ್ರವಲ್ಲ, ಕರ್ನಾಟಕದಲ್ಲೂ ಬೇರೆ ತರಹ ಇದೆ. ಇದನ್ನು ಸಂಶೋಧಕರು ಹೇಗೆ ಎದುರಿಸಬೇಕು ?**

ನಾವು ನಮ್ಮ ಅಭಿಪ್ರಾಯದೊಂದಿಗೆ ಪ್ರಾಮಾಣಿಕವಾಗಿರಬೇಕು. ಪರಿಣಾಮ ಏನೇ ಆಗಲಿ, ಹುತಾತ್ಮರಾಗುವ ಸಿದ್ಧತೆಯಿಂದಲೇ ಲೆಕ್ಕಣಿಗೆ ಎತ್ತಬೇಕು. ವಾಣಿ ಬಳಸಬೇಕು. ವಿರೋಧವಾಗುತ್ತದೆ ಎಂದರೆ ಏನು ? ನಮ್ಮ ಮನೆ ಸುಡುವುದು, ಗುಂಡು ಹಾಕೋದು, ಏನು ಬೇಕಾದ್ದು ಮಾಡೋದು ? ನನಗೆ ಜ್ಞಾನದ ಬೆಳಕಿನಲ್ಲಿ ಶುದ್ಧ ವಿಧಾಯಕ ದೃಷ್ಟಿಗೆ ಗೋಚರಿಸಿರುವುದೆಂದರೆ, ಸಮಾಜದಲ್ಲಿ ವಿಘಟನೆಯಾಗುವುದರ ವಿರುದ್ಧವಾಗಿರುವುದೇ ನಮ್ಮ ಸಮನ್ವಯದ ಭೂಮಿಕೆ ಎಂದು. ಖರೆ ಹೇಳಬೇಕು ಎನ್ನುವುದು ಪ್ರತಿಯೊಂದು ಸಲ ಕಡ್ಡಾಯವಾಗಿರುತ್ತದೆ ಎಂದೇನಿಲ್ಲ. ನಾನಿನ್ನೂ ಬಹಳಷ್ಟು ಕಾಯಕ ಮಾಡಬೇಕಿವೆ. ದೈಹಿಕ ತೊಂದರೆಯಿಂದಲೊ ಅಥವಾ ಪ್ರತಿಕೂಲ ಪರಿಸ್ಥಿತಿಯಿಂದಲೊ ನಿಲ್ಲಬೇಕಾದ ಸಂದರ್ಭ ಬಂದರೆ ನಿಲ್ಲುತ್ತೇನೆ. ಆದರೆ ಸಂಶೋಧನೆಯಲ್ಲಿ ಸುಳ್ಳು ಹೇಳುವುದಿಲ್ಲ ಮತ್ತು ಹಿಂಜರಿಯುವುದಿಲ್ಲ.

ರಹಮತ್ ತರೀಕೆರೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬



ಕೂಡ ಅಂಥವುಗಳಲ್ಲಿ ಒಂದು. ಗಿರೀಶ್ ಚಿತ್ರ ಎಂದು ಗುರುತಿಸಲ್ಪಡುವುದನ್ನು ತಗಡಿನ ಟ್ರಂಕಿನ ಮೇಲೆ ಭದ್ರವಾಗಿ ಭೂಮಿಗೆ ಬೇರಿಳಿಸಿದ್ದಾಳೆ ಎಂಬಂತೆ ಕೂತಿರುವ ಹೆಂಗಸು 'ಗುಲಾಬಿ'ಯಾಗಿ ನೋಡುಗನ ಮನಸ್ಸಲ್ಲಿ ಉಳಿಯುತ್ತಾಳೆ. ಪ್ರಾಯಶಃ ಹೋರಾಟ ಮಾಡುವ ಎಲ್ಲಾ ಜೀವಗಳಿಗೆ ಸೂಚಿಯಾಗಿ ಇದನ್ನೇ ಮುಂದೊಮ್ಮೆ ಬಳಸಬಹುದೇನೋ?

ಇಷ್ಟು ಪೀಠಿಕೆಯೊಂದಿಗೆ ಗಿರೀಶರ ಹೊಸಚಿತ್ರ 'ಗುಲಾಬಿ ಟಾಕೀಸು' ಕುರಿತ ನನ್ನ ಭಾವಲೋಕಕ್ಕೆ ಪ್ರವೇಶಿಸುತ್ತೇನೆ. ಇಲ್ಲಿ 'ನನ್ನ ಭಾವಲೋಕ' ಎಂಬುದಕ್ಕೆ ಕಾರಣವನ್ನು ಹೇಳಿಬಿಡುತ್ತೇನೆ. ಪ್ರತಿ ಪ್ರತಿಮೆಯೂ ಪ್ರತಿ ನೋಡುಗನಿಗೆ ತಾಗಿ ಅವನದ್ದೇ ಆದ ಒಂದು ಲೋಕವನ್ನು ಸೃಷ್ಟಿಸುತ್ತದೆ. ಹಾಗಾಗಿಯೇ ಕಾಣಿಸುವ ಸತ್ಯಕ್ಕೂ, ಮನಸ್ಸಿನಲ್ಲಿ ಮೂಡುವ ಭಾವಕ್ಕೂ ಅಂತರಗಳು ಉಂಟಾಗುತ್ತವೆ ಎನ್ನುತ್ತಾನೆ ಸಾಷರ್. ಆ ಮಾತು ನಿಜ. ಅಂತೆಯೇ ಪ್ರತಿ ನೋಡುಗನ ಮನಸ್ಸಲ್ಲಿ 'ಗುಲಾಬಿ' ಮೂಡಿಸಿರಬಹುದಾದ ಭಾವಕ್ಕಿಂತ ನನ್ನ ಅನುಭವ ಭಿನ್ನವಿರಬಹುದು. ಆ ಅನುಭವವನ್ನು ನಿಮ್ಮ ಮುಂದೆ ಇಡುವ ಪ್ರಯತ್ನ ಇಲ್ಲಿದೆ.

ವೈದೇಹಿ ಕನ್ನಡದ ಶ್ರೇಷ್ಠ ಕತೆಗಾರರಲ್ಲಿ ಒಬ್ಬರು. ಅವರು ಬರೆದ ಕಥೆಗಳಲ್ಲಿ 'ಗುಲಾಬಿ ಟಾಕೀಸು' ಒಂದು ವಿಶಿಷ್ಟ ಕತೆ. ಕನ್ನಡ ಹಳ್ಳಿಗಳಲ್ಲಿ ಬದುಕಿದ ಹೆಂಗಸರ ೧೯೭೦ ಮತ್ತು ೮೦ರ ನಡುವಿನ ಕಾಲಘಟ್ಟವನ್ನು ಅತ್ಯಂತ ಸಮರ್ಪಕವಾಗಿ ಹಿಡಿದಿಟ್ಟ ಕತೆ. ಈ ಕತೆಯನ್ನು ಆಧರಿಸಿ ಗಿರೀಶ್ ಕಾಸರವಳ್ಳಿಯವರು 'ಗುಲಾಬಿ ಟಾಕೀಸು' ಎಂಬ ಚಿತ್ರ ತಯಾರಿಸಿದ್ದಾರೆ.

# ಹುಡುಕುವ ಹಾದಿಯಲ್ಲಿ

## (ಗಿರೀಶ್ ಕಾಸರವಳ್ಳಿ ಅವರ 'ಗುಲಾಬಿ ಟಾಕೀಸು' ಕುರಿತಂತೆ ಒಂದು ಅನಿಸಿಕೆ)

ಸಿನಿಮಾ ಎಂಬುದು ಪ್ರತಿಮೆಗಳ (ಇಮೇಜಸ್) ಸಮುದ್ರ. ಪ್ರತಿಕ್ಷಣವೂ ಕಣ್ಣ ಮುಂದೆ ಸುಳಿಯುವ ದೃಶ್ಯವು ಮಿದುಳಿಗೆ ರವಾನಿಸುವ ವಿವರಗಳು, ಅದರೊಂದಿಗೆ ತಲುಪುವ ಶ್ರವ್ಯ ವಿವರಗಳೂ ಸೇರಿದಂತೆ, ಚಲನಚಿತ್ರದ ಪ್ರತಿ 'ಪ್ರತಿಮೆ'ಯು ಮೂಡಿಸುವ ಅರ್ಥ ವಿನ್ಯಾಸವೂ ಸಹ ದೊಡ್ಡದು. ಈ ಹಿನ್ನೆಲೆಯಲ್ಲಿಯೇ ಪ್ರತೀ ಚಿತ್ರ ನಿರ್ದೇಶಕನೂ ಚಿತ್ರಗಳನ್ನ ಕಟ್ಟುತ್ತಾನೆ. ಪ್ರತಿ ಚಿತ್ರಿಕೆಯು ಅನುಭವವಾಗಿ ನೋಡುಗನ ಮನಸ್ಸಿನಲ್ಲಿ ಇಳಿಯುತ್ತಾ ಸಾಗಿದಂತೆ ಚಿತ್ರ ಕಟ್ಟುವವನ ಮತ್ತು ಚಿತ್ರ ನೋಡುವವನ ನಡುವೆ ಒಂದು ಅವಿನಾಭಾವ ಸಂಬಂಧ ಉಂಟಾಗುತ್ತದೆ. ಈ ಸಂಬಂಧ ಕಣ್ಣಿಗೆ ಕಾಣದ್ದು. ಆದರೆ ಮನಸ್ಸಿಗೆ ತಿಳಿಯುವಂತಹದು. ಆದ್ದರಿಂದಲೇ ನಾವು ನೋಡುವ ಪ್ರತಿ ಚಿತ್ರವನ್ನೂ ಇದು ಇಂತಹವರದು ಎಂದು ಗುರುತಿಸಿಕೊಳ್ಳುವ ಶಕ್ತಿ ಪಡೆಯುತ್ತೇವೆ. ಹಾಗೆಯೇ ನಮಗೆ 'ಇದು ವ್ಯಾನ್ ಗೋದು', 'ಇದು ಡಾಲಿಯದು', 'ಇದು ರವಿವರ್ಮನದು', 'ಇದು ವಾಸುದೇವ್‌ದು' ಎಂಬುದು ತಿಳಿಯುತ್ತದೆ. ಇದನ್ನ ಸಿಗ್ನೇಚರ್ ಆಫ್ ದ ಆರ್ಟಿಸ್ಟ್ ಎಂದು ಹೇಳುತ್ತಾ ನಮ್ಮ ಚಲನಚಿತ್ರಗಳನ್ನು ನೋಡುವುದಾದರೆ, ನಮ್ಮ ಕನ್ನಡದ ಸಂದರ್ಭದಲ್ಲಿ ಗಿರೀಶ್ ಕಾಸರವಳ್ಳಿಯವರ ಸಿನಿಮಾಗಳನ್ನ ಅವರು ಸೃಷ್ಟಿಸುವ ಪ್ರತಿಮೆಯನ್ನ ನೋಡಿದ ಕೂಡಲೇ ಗುರುತಿಸಬಹುದು. ಮನೆಯ ಬಾಗಿಲು ಹಿಡಿದು ಯಾವುದೋ ಕಾತುರದಲ್ಲಿ ನಿಂತ ಹೆಣ್ಣು, ಅವಳ ಪಕ್ಕದಲ್ಲಿ ಒಬ್ಬ ಕುತೂಹಲದ ಕಣ್ಣಿನ ಬಾಲಕನ ಪ್ರತಿಮೆ 'ಘಟಶ್ರಾದ್ಧ'ವನ್ನು ನೆನಪಿಸುತ್ತದೆ. ಧೈನೇಸಿಯಂತೆ ಅಂಗಲಾಚುವ ಮುದುಕನ ಪ್ರತಿಮೆ 'ತಬರನ ಕಥೆ'ಯ ನೆನಪನ್ನು ತರುತ್ತದೆ. ದೋಣಿಯನ್ನ ತಾನೇ ನಡೆಸುವ ಹೆಣ್ಣಿನ ಚಿತ್ರ 'ದ್ವೀಪ'ವನ್ನ, ಮನೆಯ ಬಾಗಿಲಿಗೆ ಹಾಕಿದ ತೆರೆಯನ್ನ ಹಿಡಿದು ಯಾವುದೋ ಆತಂಕದಲ್ಲಿ ನೋಡುತ್ತಿರುವ ಹೆಣ್ಣು 'ಹಸೀನಾ'ವನ್ನು... ಹೀಗೆ ಗಿರೀಶರು ಒಂದು ಪ್ರತಿಮೆಯ ಮೂಲಕ ಒಂದು ಅನುಭವವನ್ನ ನೋಡುಗನ ಕಪಾಟಿನಲ್ಲಿ ಇರಿಸುವ ಪ್ರಯತ್ನ ಮಾಡುತ್ತಲೇ ಬಂದಿದ್ದಾರೆ. ಈಚೆಗಿನ ಅವರ ಚಿತ್ರ 'ಗುಲಾಬಿ ಟಾಕೀಸು'

**ಬಿ. ಸುರೇಶ**

'ಆಧರಿಸಿ' ಎಂದರೆ ವೈದೇಹಿ ಅವರ ಕತೆಯ ವಿವರವು ಈ ಚಿತ್ರದಲ್ಲಿ ಇದೆ ಎಂದಲ್ಲ. ಗಿರೀಶರು ತಾವು ಹೆಣೆದ ಕಥೆಯಲ್ಲಿ ವೈದೇಹಿಯವರ ಕತೆಯ ಪಾತ್ರಗಳನ್ನ ಹೆಸರಿಗಾಗಿ ಮಾತ್ರ ಬಳಸಿಕೊಳ್ಳುತ್ತಾರೆ, ಅಷ್ಟೆ. ಉಳಿದಂತೆ ಆ ಕತೆಯ ಹೂರಣವನ್ನೂ ಬಳಸದೆ ತಮ್ಮದೇ ಆದ ಮತ್ತೊಂದು ಲೋಕ ಸೃಷ್ಟಿಗೆ ಹೊರಡುತ್ತಾರೆ. ಇದು ಗಿರೀಶ್ ಕಾಸರವಳ್ಳಿಯವರ ಶಕ್ತಿಯೂ ಹೌದು, ಅವಗುಣವೂ ಹೌದು.

ಶಕ್ತಿ ಯಾಕೆಂದರೆ ವೈದೇಹಿಯವರ ಸಾಹಿತ್ಯದ ಓದುಗನಾಗಿ ಒಬ್ಬಾತ ಪಡೆದುಕೊಂಡದ್ದನ್ನೆಲ್ಲಾ ಸುಳ್ಳಾಗಿಸಿ ಅದೇ 'ವಿಳಾಸ', 'ಸ್ಥಳನಾಮ'ಗಳ ಜೊತೆಗೆ ಮತ್ತೊಂದು ಹೊಸ ಲೋಕದ, ಹೊಸ ಭಾವವಲಯದ ಸೃಷ್ಟಿ ಗಿರೀಶ್ ಅವರಿಗೆ ಸಾಧ್ಯವಾಗುತ್ತದೆ. ಕನ್ನಡದ ಅಥವ ಭಾರತೀಯ ಸಂದರ್ಭದಲ್ಲಿ ಶ್ರೇಷ್ಠವೆನಿಸುವ ಅಪರೂಪದ ಪ್ರಯೋಗ ಎನಿಸುವ ಸಿನಿಮಾವೊಂದನ್ನು ಗಿರೀಶರು ಕಟ್ಟಿಕೊಡುತ್ತಾರೆ.

ಅವಗುಣ ಏನೆಂದರೆ ಮೂಲಕತೆಯ ಯಾವ ವಿವರವೂ ಇಲ್ಲದೆ, ಇಂತಹವರ ಕತೆ ಎಂದು ಮಾತ್ರ ಹೇಳಿ, ಮತ್ತೇನನ್ನೋ ಉಣಬಡಿಸುವುದು ಮೂಲಕ್ಕೆ ಮಾಡಿದ ಅವಮಾನ ಎಂದು ನನ್ನ ಅಭಿಪ್ರಾಯ. ಕುವೆಂಪು [illegible] ಬರೆದು ಕೆಳಗೆ ಹಾಗೆ ಎಂದು ಬರೆದರೂ ಮೂಲ [illegible] ಸಂಪಾದಿಯಾದ್ದರಿಂದ ಕೆಳಗೆ ಬರೆದ ಅಕ್ಷರವೂ ಪ್ರಮಾಣ ಎನಿಸುವುದಿಲ್ಲ. [illegible] ಗಿರೀಶರು ಬಗೆದಿರುವ ಚಿತ್ರಕ್ಕೆ ವೈದೇಹಿಯವರ [illegible] [illegible] ಮೂಲಕ್ಕೆ [illegible] ಮಾಡಿದ ಅನ್ಯಾಯವಾಗುತ್ತದೆ.

ಇದು ಕೇವಲ 'ಗುಲಾಬಿ ಟಾಕೀಸು' ಚಿತ್ರಕ್ಕೆ ಸೀಮಿತವಾದ ಮಾತಲ್ಲ. 'ತಬರನ ಕಥೆ'ಯ ನಂತರ ಗಿರೀಶರು ಸೃಷ್ಟಿಸಿದ ಎಲ್ಲಾ ಕೃತಿಗಳಲ್ಲೂ ಇಂತಹ ಪ್ರಯೋಗವಾಗಿದೆ. ಇದನ್ನು ಪ್ರಯೋಗ ಪ್ರಿಯರು ಲಂಘನ ಎಂದು ಗುರುತಿಸುತ್ತಾರೆ. ಆದರೆ ಇದು... ?

ಒಂದು ಕೃತಿ ಮತ್ತೊಂದು ಪ್ರಕಾರಕ್ಕೆ ಬಂದಾಗ ಬದಲುಗಳಾಗಬೇಕಾದ್ದು ಅನೇಕ ಕಾರಣಗಳಿಗಾಗಿ ಅನಿವಾರ್ಯ. ಈ ಹಿನ್ನೆಲೆಯಲ್ಲಿ ಒಂದು ಸಾಹಿತ್ಯ ಕೃತಿಯನ್ನ ಚಲನಚಿತ್ರ ಕೃತಿಯಾಗಿ ರೂಪಾಂತರಗೊಳಿಸುವುದು ಎನ್ನುವಾಗ ಮೂಲದ ಆಶಯವಾದರೂ ಉಳಿಯಬೇಕಲ್ಲವೇ? ಅದಾಗುವುದಿಲ್ಲ. ಗಿರೀಶ್ ಕಾಸರವಳ್ಳಿಯವರ ಕೃತಿಯಲ್ಲಿ, ಈ ಹಿನ್ನೆಲೆಯಿಂದ ಅವರು ತಮ್ಮ ಸಿನಿಮಾವನ್ನ ಇಂತಹವರ ಕತೆಯ ಆಧಾರದಿಂದ ಎನ್ನುವ ಬದಲು ಸ್ಫೂರ್ತಿಯಿಂದ ಎಂದು ಹೇಳಿದರೆ ಅಡ್ಡಿಯಿಲ್ಲ. ಆದರೆ ಅವರು ಸ್ಪಷ್ಟವಾಗಿ ಇಂತಹ ಸಾಹಿತಿಗಳ ಕಥೆಯನ್ನು ಆಧರಿಸಿ ಎನ್ನುತ್ತಾರೆ. ಇದು ವೈರುಧ್ಯಗಳಿಗೆ ಕಾರಣವಾಗುತ್ತದೆ. ಇದು ಗಿರೀಶರ ಈಚೆಗಿನ ಚಿತ್ರಗಳ ದೊಡ್ಡ ಅವಗುಣ.

ಈ ದೋಷದ ಹೊರತಾಗಿಯೂ, ಮೂಲಕತೆಯನ್ನು ಮೀರಿ ಬೆಳೆಯುವ ದೈತ್ಯ ಪ್ರತಿಭೆ ಗಿರೀಶರದ್ದು. ಹಾಗಾಗಿಯೇ ಈವರೆಗಿನ ಗಿರೀಶ್ ಕಾಸರವಳ್ಳಿಯವರ ಕೃತಿಗಳಿಗಿಂತ 'ಗುಲಾಬಿ ಟಾಕೀಸು' ವಿಭಿನ್ನವಾಗಿಯೂ ಮತ್ತು ಹೆಚ್ಚು ತಾಗುವ ಗುಣದ್ದಾಗಿಯೂ ಕಾಣುತ್ತದೆ.

**ಹೂರಣ**

ವೈದೇಹಿ ಅವರ ಕಥೆಯನ್ನ ಓದಿದವರಿಗೂ ಈ ಕಥೆ ಹೊಸದು. ಹಾಗಾಗಿ ಇಲ್ಲಿನ ಹೂರಣವನ್ನ ಮೊದಲು ತಿಳಿಯಬೇಕು.

ಅದೊಂದು ಕುದ್ರು (ಹಿನ್ನೀರಿನ ದ್ವೀಪ). ಅಲ್ಲೊಬ್ಬಾಕೆ ಸೂಲಗಿತ್ತಿ. ಅವಳ ಹೆಸರು ಗುಲಾಬಿ. ಅವಳಿಗೆ ಪ್ರತಿದಿನ ಅದೇ ಸಿನಿಮಾ ನೋಡಿ ಕನಸು ಕಾಣುವುದು ಆನಂದ. ಅವಳ ಗಂಡ ಮನೆಗೆ ಬರುವುದಿಲ್ಲ. ಅವನಿಗೆ ಮತ್ತೊಂದು ಮದುವೆಯಾಗಿದೆ. ಗುಲಾಬಿಗೆ ಮಕ್ಕಳಿಲ್ಲ. ಆದರೆ ಅವಳ ಸವತಿಗೆ ಒಂದು ಮಗುವಿದೆ. ಗುಲಾಬಿಗೆ ಹೇಗಾದರೂ ಆ ಮಗುವಿನ ಪ್ರೀತಿ ಸಂಪಾದಿಸಬೇಕೆಂಬ ಬಯಕೆ. ಆದರೆ ಅದು ಸವತಿ ಮತ್ಸರದಿಂದಾಗಿ ಆಗುತ್ತಿಲ್ಲ. ಹೀಗಾಗಿ ಅವಳು ಹತ್ತಿರದ ಊರಲ್ಲಿ ಇರುವ ಚಿತ್ರಮಂದಿರದಲ್ಲಿ ಸಿನಿಮಾ ನೋಡುತ್ತಾ ತನ್ನ ಹೊಸ ಕನಸುಗಳನ್ನ ಹೊಸೆಯುತ್ತಾಳೆ. ಈ ಮಧ್ಯೆ ಯಾವುದೋ ಶ್ರೀಮಂತರ ಮನೆಯಲ್ಲಿ ಸೂಲಗಿತ್ತಿಯ ಕೆಲಸ ಮಾಡಿದ್ದಕ್ಕ ಅವಳಿಗೆ ಉಡುಗೊರೆಯಾಗಿ ಬಣ್ಣದ ಟೆಲಿವಿಷನ್ ಸಿಗುತ್ತದೆ. ಅಲ್ಲಿಂದ ಗುಲಾಬಿಯ ಬದುಕು ಅನೇಕ ಕನಸುಗಳನ್ನ ಕಟ್ಟಿಕೊಳ್ಳುತ್ತಾ ಸಾಗುತ್ತದೆ. ಅವಳ ಮನೆಯಲ್ಲಿರುವ ಟೆಲಿವಿಷನ್ ಮತ್ತು ಧಾರಾವಾಹಿಗಳನ್ನು ನೋಡಲು ಬರುವ ಆಸುಪಾಸಿನವರಿಂದಾಗಿ ಅವಳ ಮನೆಯೇ ಅವಳದ್ದಲ್ಲ ಎನ್ನುವಂತೆ ಅಲ್ಲಿ ಹೆಂಗಸರು ಸೇರುತ್ತಾರೆ. ಟಿವಿ ನೋಡುತ್ತಾ ಅವರೆಲ್ಲ ಕಣ್ಣೀರು ಹಾಕುತ್ತಾರೆ. ನಗುತ್ತಾರೆ. ತಮ್ಮ ನಿತ್ಯ ಕಾಯಕದ ನಡುವೆಯೂ ತಾವು ನೋಡಿದ ಸೀರಿಯಲ್ ಕುರಿತು ಮಾತಾಡುತ್ತಾರೆ. ಸೀರಿಯಲ್ಲಿನ ಕತೆಯನ್ನ ತಮ್ಮ ಜೀವನಕ್ಕೆ ಆರೋಪಿಸಿಕೊಂಡು ಬದುಕಲು ಪ್ರಯತ್ನಿಸುತ್ತಾರೆ. ಅದೇ ಊರಿನ ಮೀನುಗಾರರಿಗೆ ಯಂತ್ರಚಾಲಿತ ದೋಣಿಗಳಿಂದ ಇರುವ ಸಂಕಷ್ಟಗಳನ್ನು ಮರೆಸಲು ಸಹ ಟೆಲಿವಿಷನ್ ಕಾರಣವಾಗುತ್ತದೆ. ಇದೇ ಸಮಯದಲ್ಲಿ ಎಲ್ಲೋ ನಡೆವ ಯುದ್ಧ ಊರಿನವರಲ್ಲಿ ದೇಶ ಪ್ರೇಮ ಮೂಡಿಸುತ್ತದೆ. ಈ ಸಮಯದಲ್ಲಿ ಹುಟ್ಟುವ ಕೋಮು ಗಲಭೆಗಳಿಂದ ಆ ಕುದ್ರುವಿನಲ್ಲಿದ್ದ ಮುಸಲ್ಮಾನರೆಲ್ಲಾ ಮನೆ ಖಾಲಿ ಮಾಡಿಕೊಂಡು ಹೋಗುತ್ತಾರೆ. ಅಲ್ಲೇ ಉಳಿಯುವ ಗುಲಾಬಿಯನ್ನ ಮತೀಯವಾದಿಗಳು ಮನೆಯಿಂದ ಆಚೆಗೆ ಹಾಕುತ್ತಾರೆ.

ಇದು ಸ್ಥೂಲವಾಗಿ ಹೇಳಬಹುದಾದ ಕಥಾವಿವರ. ಗಿರೀಶರು ಹೆಣೆದ ಕತೆಯನ್ನ ಹೀಗೆ ಸರಳೀಕರಿಸಲು ಸಾಧ್ಯವಾಗದು. ಅಲ್ಲಿ ಅನೇಕ ಪದರಗಳು, ಸ್ತರಗಳು ಇವೆ. ಪ್ರತಿ ವಿವರದಲ್ಲಿಯೂ ಅವರವರ ಭಾವಕ್ಕೆ ಗ್ರಹಿತವಾಗುವ ಅನೇಕ ವಿವರಗಳು ಇವೆ. ಹಾಗಾಗಿ ಗಿರೀಶರ ಈ ಕತೆಯಲ್ಲಿ ಹೂರಣವೆಂಬುದು ಅಸ್ತಿಭಾರವಿದ್ದ ಹಾಗೆ, ಅಷ್ಟೆ. ಅದು ಎಲ್ಲವನ್ನೂ ಬಿಟ್ಟುಕೊಡದು. ಬಿಟ್ಟುಕೊಟ್ಟ ವಿವರಗಳು ಸರಳವಾಗಿ ಹೇಳಲೂ ಆಗದು. ಅಂತಿಮವಾಗಿ ನೋಡುಗನ ಮನಸ್ಸಿನಲ್ಲಿ ಒಂದು ವಿಚಿತ್ರ ಅನುಭವ ಮತ್ತು 'ಗುಲಾಬಿ'ಯ ಲೋಕದೊಳಗಿನ ಸಾಂದ್ರತೆಗಳು ಮಾತ್ರ ಉಳಿಯುತ್ತವೆ.

**ಕಟ್ಟಡ**

ಗಿರೀಶರು ಚಿತ್ರವನ್ನ ಆರಂಭಿಸುವುದು ಪಾಲನಾ ಸಂಸ್ಕೃತಿಯ ವಿವರಗಳಿಂದ. 'ಗುಲಾಬಿ' ತನ್ನಲ್ಲಿರುವ ಚಿಲ್ಲರೆಯಲ್ಲಿಯೇ ಸಿಗಡಿ ಮೀನು ಕೊಳ್ಳಲು ಪ್ರಯತ್ನಿಸುತ್ತಾಳೆ. ಅವಳು ನೀಡುವ ಹಣಕ್ಕೆ ಏನೂ ಸಿಗದು ಎನ್ನುವ ಮಾರುವ ಹೆಣ್ಣುಮಗಳು ಮತ್ತು ಗುಲಾಬಿಯ ನಡುವೆ ಸಣ್ಣ ಜಗಳವಾಗುತ್ತದೆ. ಆದರೆ ಅದು ಅಂತಿಮವಾಗಿ ಪ್ರೀತಿಯಲ್ಲಿಯೇ ಪರ್ಯವಸಾನವಾಗುತ್ತದೆ. ಹೀಗೆ ಗುಲಾಬಿ ತನ್ನ ಗಂಡನನ್ನ ಮತ್ತು ತನ್ನ ಸವತಿಯ ಮಗುವನ್ನ ತನ್ನ ಪ್ರೀತಿಯ ತೆಕ್ಕೆಗೆ ತೆಗೆದುಕೊಳ್ಳಲು ಪ್ರಯತ್ನಿಸುವುದು ಒಂದು ಧಾರೆಯಾದರೆ ಅದೇ ಊರಿನಲ್ಲಿರುವ ಸಣ್ಣ ಹಡಗನ್ನುಳ್ಳ ಮೀನುಗಾರರ ಒಡೆಯನಿಗೆ ಚಿತ್ರದುದ್ದಕ್ಕೂ ಚರ್ಚಿತವಾಗುವ, ಆದರೆ ಚಿತ್ರದಲ್ಲಿ ಕಾಣಿಸದ ಸುಲೇಮಾನ್ ಎಂಬ ಯಾಂತ್ರೀಕೃತ ದೋಣಿಯ ಒಡೆಯನ ನಡುವಿನ ವ್ಯಾಪಾರಸಂಬಂಧೀ ವಿವರಗಳು ಎರಡನೆಯ ಧಾರೆ. ಮೂರನೆಯ ಧಾರೆಯಾಗಿ ಅದೇ ಊರಿನ ನೇತ್ರಾ ಎಂಬ ಹೆಣ್ಣುಮಗಳ ವಿವರ ಬರುತ್ತದೆ. ಆಕೆ ವಿಧವೆ. ಆದರೆ ಅವಳಿಗೂ ಕನಸುಗಳಿವೆ. ಹಾರಿಕೊಂಡು ಸ್ವತಂತ್ರ ಪಡೆಯಲು ಸಾಧ್ಯವಿಲ್ಲದ ಕಟ್ಟುಪಾಡಿದೆ. ಈ ನೇತ್ರಾಳಿಗೆ 'ಗುಲಾಬಿ'ಯ ಟೆಲಿವಿಷನ್ನಿನಲ್ಲಿ ಬರುವ ಧಾರಾವಾಹಿಗಳ ಜೊತೆಗೆ ತನ್ನನ್ನ ಸಮೀಕರಿಸಿಕೊಂಡು ಹೊಸ ಜಗತ್ತಿಗೆ ಹಾರಬೇಕು ಎನ್ನುವ ಉಮೇದು ಬರುತ್ತದೆ. ಇದಕ್ಕೆ ಗುಲಾಬಿ ಮತ್ತು ನೇತ್ರಾಳ ನಡುವಿನ ಮಾತುಗಳೂ ನೆರವಾಗುತ್ತವೆ. ಈ ಹಾದಿಯಲ್ಲಿ ನೇತ್ರಾ ಊರು ಬಿಟ್ಟ ಸುದ್ದಿ ಹಬ್ಬಿದಾಗ ಅದಕ್ಕೆ ಗುಲಾಬಿಯ ಗಂಡನೇ ಕಾರಣವೆಂದು ಅವನಿಗೆ ಯಾರೋ ಹೊಡೆಯುತ್ತಾರೆ. ಈ ಹೊಡೆತದಲ್ಲಿ ಆತ ಸುಲೇಮಾನ್ ಬ್ಯಾರಿಯ ಏಜೆಂಟ್ ಎಂಬ ಭಾವವೂ ಇದೆ. ಒಂದರ್ಥಕ್ಕೆ ಸ್ಥಳೀಯ ಮೀನುಗಾರರ ಜೀವನವನ್ನು ನಾಶದ ಕಡೆಗೆ ತಳ್ಳಿದವನು ಎಂಬ ಕೋಪವೂ ಇದೆ. ಹೀಗೆ ನೇತ್ರಾ ಎಂಬ ಹುಡುಗಿ ಊರಿಂದಾಚೆಗೆ ಹೋಗುವುದು ಮತ್ತು ಅದನ್ನ ಮತೀಯ ಬಣ್ಣಕ್ಕೆ ತಿರುಗಿಸುವುದು ಎಲ್ಲವೂ ಆಗಿ ಒಂದು ಧಾರೆಯೊಳಗೆ ಮತ್ತೊಂದು ಧಾರೆ ಸೇರಿಕೊಂಡು ಒಂದು ಉತ್ಕರ್ಷದ ಕಡೆಗೆ ಸದ್ದಿಲ್ಲದೆ ಸಾಗುತ್ತದೆ.



ಪಾತ್ರಧಾರಿಗಳು : ಕೆ. ಜಿ. ಕೃಷ್ಣಮೂರ್ತಿ ಮತ್ತು ಉಮಾಶ್ರೀ

ಇದು ಈಚೆಗಿನ ಕಾಸರವಳ್ಳಿ ಸಿನಿಮಾಗಳಿಗಿಂತ ಭಿನ್ನ ಪ್ರಯೋಗ. ಇಂದಿನ ಟೆಲಿವಿಷನ್‌ನಲ್ಲಿರುವ ದೈನಿಕ ಧಾರಾವಾಹಿಗಳ ಪ್ರಧಾನ ಗುಣವಿದು. ಅದೇ ಕಥಾಧಾರೆಗಳ ಕಥನಕ್ರಮ ಇಲ್ಲಿ ಬಳಕೆಯಾಗಿದೆ. ತಮಾಷೆ ಎಂದರೆ ಅದೇ ಟೆಲಿವಿಷನ್ ಮಾಧ್ಯಮದ ಒಳಿತು ಕೆಡುಕುಗಳ ಕುರಿತು ಕಾಸರವಳ್ಳಿಯವರು 'ಗುಲಾಬಿ' ಚಿತ್ರದ ಉದ್ದಕ್ಕೂ ಮಾತಾಡುತ್ತಾರೆ. ಟೆಲಿವಿಷನ್ನಿನ ಈ ಕಥನ ಕ್ರಮ ದೈನಿಕ ಧಾರಾವಾಹಿಗಳಲ್ಲಿ ಎಂದೂ ಒಂದಾಗದೆ ಭಿನ್ನವಾಗಿಯೇ ಉಳಿದು, ಎಂದೋ ಒಂದು ದಿನ ತಟ್ಟನೆ ಮುಗಿದು ಹೋಗುತ್ತದೆ. ಆದರೆ ಗಿರೀಶರ ಈ ಪ್ರಯೋಗದಲ್ಲಿ ಎಲ್ಲಾ ಭಿನ್ನಗಳು ಒಂದರೊಳಗೊಂದು ಬೆಸೆದುಕೊಂಡು ಬೆಳೆಯುತ್ತವೆ ಮತ್ತು ಒಂದು ನಿಗೂಢದ ಕಡೆಗೆ ಚಲಿಸಿ ಸಂಗಮವಾಗುತ್ತವೆ. ಈ ಸಂಗಮದಿಂದಲೇ ಉಂಟಾಗುವ ಹೊಸ ಅರ್ಥ ಸಾಧ್ಯತೆಗಳತ್ತ ನೋಡುಗನನ್ನ ಸೆಳೆಯುವುದು ಸಹ ಈ ಪ್ರಯೋಗದಿಂದ ಸಾಧ್ಯವಾಗುತ್ತದೆ.

**ಭಾಷೆ**

'ಗುಲಾಬಿ ಟಾಕೀಸ್'ನಲ್ಲಿ ಬಳಕೆಯಾಗಿರುವುದು ಕುಂದಾಪುರಕ್ಕೆ ಹತ್ತಿರದ ಕರಾವಳಿಯ ಜನ ಆಡುವ ನುಡಿಗಟ್ಟು. ಕಡಲತೀರದಲ್ಲಿ ಇರುವವರ ಬದುಕು ವರ್ಣಗಳ ಸಂತೆಯಂತಹುದು. ಮೀನು ಮಾರುಕಟ್ಟೆಯಲ್ಲಿ ಇರುವ ಗೌಜು, ಅಡಿಗೆ ಮನೆಯ ಒಳಗಿರುವ ಹಸಿವು, ಮಂಚದ ಮೇಲಿನ ತೀವ್ರತೆಗಳೆಲ್ಲವನ್ನೂ ವಿಶಿಷ್ಟವಾಗಿ ಕಟ್ಟಿಕೊಡುವಲ್ಲಿ ಈ ಭಾಷೆಯ ಬಳಕೆ ಗಿರೀಶರ ಸಹಾಯಕ್ಕೆ ಬಂದಿದೆ. ಪ್ರಾಯಃ ಕನ್ನಡದ ಇತರ ನುಡಿಗಟ್ಟನ್ನ

ಆಡುವವರ ನಡುವೆ ಈ ಚಿತ್ರ ಪ್ರದರ್ಶನವಾದಾಗ ಅನಿವಾರ್ಯವಾಗಿ ಸಬ್‌ಟೈಟಲ್ಲನ್ನೇ ನೋಡಿ ಮಾತನ್ನು ಗ್ರಹಿಸಬೇಕಾಗಬಹುದು. ಆದರೆ ವೈದೇಹಿ ಮತ್ತು ಬೊಳುವಾರು ಮಹಮ್ಮದ್ ಕುಂಞಿ ಅವರ ಸಂಭಾಷಣೆ ಚಿತ್ರದುದ್ದಕ್ಕೂ ಜೀವಂತವಾಗಿದೆ. ಯಾವುದೋ ಸಿನಿಮಾ ಥೇಟರಿನಲ್ಲಿ ಕುಳಿತ ಗುಲಾಬಿಯನ್ನ ಅವಳ ಸೂಲಗಿತ್ತಿ ಸರ್ವೀಸ್ ಬೇಕಾದ ಜನ ಹೊತ್ತು ಒಯ್ಯುತ್ತಾರೆ. ಈ ದೃಶ್ಯದಲ್ಲಿ ಈ ಕರಾವಳಿಯ ಕನ್ನಡದ ಶಕ್ತಿ ತೆರೆದುಕೊಳ್ಳುತ್ತದೆ. ಗುಲಾಬಿಯು ನೇತ್ರಾಳ ಜೊತೆಗೆ ತನ್ನ ಕನಸನ್ನು ಹಂಚಿಕೊಳ್ಳುವಲ್ಲಿ ಮತ್ತು ತನ್ನ ಗಂಡನನ್ನ ಗುಲಾಬಿ ಮರಳಿ ಒಲಿಸಿಕೊಳ್ಳಲು ಪ್ರಯತ್ನಿಸುವಲ್ಲಿ ಈ ಭಾಷೆಯು ಸಮರ್ಥವಾಗಿ ಬಳಕೆಯಾಗಿದೆ. ಆ ಮಾತನ್ನ ಆಡಿರುವ ಕಲಾವಿದರು ಸಹ ಆ ನುಡಿಗಟ್ಟನ್ನ ತಮಗೆ ಒಗ್ಗಿಸಿಕೊಂಡು ಬಳಸುವಲ್ಲಿ ಸಾಕಷ್ಟು ಶ್ರಮಪಟ್ಟಿದ್ದಾರೆಂಬುದು ಮೊದಲ ನೋಟಕ್ಕೆ ತಿಳಿಯುತ್ತದೆ. ಈ ನುಡಿಗಟ್ಟಿನ ಒಳಸುಳಿಗಳನ್ನು ತಿಳಿದುಕೊಳ್ಳುವಷ್ಟು ಪರಿಚಯ ಈ ಲೇಖಕನಿಗೆ ಇಲ್ಲವಾದರೂ ಕಲಾವಿದರಾದ ಉಮಾಶ್ರೀ, ಎಂ. ಡಿ. ಪಲ್ಲವಿ, ಕೆ. ಜಿ. ಕೃಷ್ಣಮೂರ್ತಿ ಅವರು ಈ ಆಡು ಬಾಷೆಯನ್ನ ತಮ್ಮ ನಟನೆಯ ಭಾಷೆಯ ಜೊತೆಗೆ ಬಳಸಿಕೊಂಡಿರುವ ಕ್ರಮ ಮೆಚ್ಚುಗೆಯಾಗುತ್ತದೆ. ಚಲನಚಿತ್ರದಲ್ಲಿ ಭಾಷೆಯ ಬಳಕೆ ಎಂದಾಗ ನಮ್ಮಲ್ಲಿನ ಬಹುತೇಕ ಚಿತ್ರತಯಾರಕರಿಗೆ ನುಡಿಗಟ್ಟುಗಳನ್ನಾಡುವವರನ್ನ ಹಾಸ್ಯಕ್ಕೆ ಮಾತ್ರ ಬಳಸುವುದು. ಇಂತಹ ತಮಾಷೆಯಿಂದಾಗಿ ಆಯಾ ನುಡಿಗಟ್ಟನ್ನ ಮಾತಾಡುವವರಲ್ಲಿ ಕೀಳರಿಮೆ ಉಂಟಾಗಿರುವುದಿದೆ ಮತ್ತು ಅವೇ ಕಾರಣಗಳಿಂದಾಗಿ ಭಾಷಾ ತಾರತಮ್ಯವೂ ಉಂಟಾಗಬಹುದಾದ ಸಾಧ್ಯತೆಯಿದೆ. ಅತ್ಯಂತ ಪ್ರಬಲ ಮಾಧ್ಯಮವಾದ ಸಿನಿಮಾದಲ್ಲಿ ಭಾಷೆಯನ್ನು ಬಳಸುವವರು ಎಚ್ಚರಿಕೆ ವಹಿಸಬೇಕಾದ್ದು ಅಗತ್ಯ. ಈ ಹಿನ್ನೆಲೆಯಲ್ಲಿ ಗಿರೀಶರು ತಮ್ಮ 'ಗುಲಾಬಿ'ಯಲ್ಲಿ ಮಾಡಿರುವ ಪ್ರಯತ್ನ ಮೆಚ್ಚುವಂತಹದು.

ವಿಶೇಷವಾಗಿ 'ಗುಲಾಬಿ' ಪಾತ್ರದ ಮಾತುಗಳಲ್ಲಿ ಇರುವ ಪಾಲನೆಯ ಹಾಗೂ ಸಂಪಾದನೆಯ ಕಾತರ ಮತ್ತು ಆ ಪಾತ್ರಕ್ಕೆ ಇರುವ ಜೀವನ ಪ್ರೀತಿ ನೋಡುಗನ ಮನಸ್ಸಿನಲ್ಲಿ ಬಹುಕಾಲ ಉಳಿಯುವಂತಹದು.

ಕ್ರೋಶಿಯಾದ ಚಲನಚಿತ್ರ ನಿರ್ದೇಶಕ ಎಮಿರ್ ಕೊಸ್ಟಾರಿಕಾನ 'ಲೈಫ್ ಇಸ್ ಎ ಮಿರಾಕಲ್' ಮತ್ತು 'ಬ್ಲಾಕ್ ಕ್ಯಾಟ್ ವೈಟ್ ಕ್ಯಾಟ್' ಚಿತ್ರಗಳಲ್ಲಿ ಬರುವ ಸಮೂಹ ನಿರ್ವಹಣೆಯ ಕ್ರಮ ಗಿರೀಶರ ಚಿತ್ರಗಳ ಮೇಲೆ ಪ್ರಭಾವ ಮೂಡಿಸಿರಬಹುದು. ಜೊತೆಗೆ ಮೂರು ಧಾರೆಗಳ ಕಥನ ಕ್ರಮವು 'ಬಾಬೆಲ್', 'ಅಮರೋಸ್ ಪರೆಸ್'ನಂತಹ ಚಿತ್ರಗಳ ನಿರ್ದೇಶಕ ಅಲೆಗ್ಸಾಂಡ್ರೋ ಗೋನ್ಸಾಲಿಸ್‌ನ ಪ್ರಭಾವವೂ ಗಿರೀಶರ ಮೇಲಾಗಿರಬಹುದು.

**ಸಂಯೋಜನೆ**

ಚಿತ್ರ ಕಟ್ಟುವ ಶಕ್ತಿಯಲ್ಲಿ ಪ್ರತಿಮೆಗಳು ಹೇಗೆ ಕೆಲಸ ಮಾಡುತ್ತವೆ ಎಂದು ಅದಾಗಲೇ ಪ್ರಸ್ತಾಪಿಸಿದ್ದೇನೆ. 'ಗುಲಾಬಿ ಟಾಕೀಸಿ'ನಲ್ಲಿ ಚಿತ್ರದುದ್ದಕ್ಕೂ ನಮ್ಮನ್ನು ಪ್ರತಿಮೆಗಳು ಕಾಡುತ್ತವೆ. ನೀಲ ಆಗಸದ ಮಧ್ಯೆಯಿಂದ ಮೆಲ್ಲಗೆ ಇಳಿಯುವ ಡಿಶ್ ಆಂಟೆನಾ. ಆ ಡಿಶ್ ಆಂಟೆನಾದ ಜೊತೆಯಲ್ಲಿ ಕಾಣುವ ಸಮುದ್ರ ಮತ್ತು ಆಡುವ ಮಕ್ಕಳು. ಆನ್ ಆಗಿಲ್ಲದ ಟೆಲಿವಿಷನ್ನಿನಲ್ಲಿ ಕಾಣುವ ಹತಾಶ ಗುಲಾಬಿಯ ಪ್ರತಿಬಿಂಬ. ಇದರೊಂದಿಗೆ ಚಿತ್ರದ ಕಡೆಯಲ್ಲಿ ಖಾಲಿಯಾಗಿರುವ ಗುಲಾಬಿಯ ಮನೆಯೊಳಗೆ ಬಂದು ಕೂರುವ ಇಬ್ಬರು ವಯಸ್ಕ ಮಹಿಳೆಯರಿಗೆ ಇರುವ ಟೆಲಿವಿಷನ್ ನೋಡಬೇಕೆಂಬ ಹಪಾಹಪಿ. ಅದಕ್ಕಾಗಿ ಆನ್ ಆಗಿಲ್ಲದ ಟೆಲಿವಿಷನ್ನ ಎದುರು ಕೂತು ಇಬ್ಬರೂ ಬೊಚ್ಚು ಬಾಯಿ ತೆರೆವ ಚಿತ್ರದ ಕಡೆಯ ಚಿತ್ರಿಕೆ. ಹೀಗೆ 'ಗುಲಾಬಿ'ಯಲ್ಲಿ ಬಹುಕಾಲ ನಮ್ಮ ಮನಸ್ಸಲ್ಲಿ ಉಳಿಯುವ ಅನೇಕ ಇಮೇಜ್‌ಗಳಿವೆ. ಈ ಚಿತ್ರಿಕೆಯ ಸಂಯೋಜನೆಯಲ್ಲಿ ಸಹ ಗಿರೀಶ್ ಮತ್ತು ಛಾಯಾಗ್ರಾಹಕ ಎಸ್. ರಾಮಚಂದ್ರ ಐತಾಳರು ಸಿನಿಮಾ ಪರದೆಯ ವಿಸ್ತೀರ್ಣವನ್ನೇ ಕಲಾಕೃತಿ ನಿರ್ಮಾಣಕ್ಕೆ ಬಳಸಿದಂತಿದೆ.

ಬೋಟಿನ ನಡುವೆ ಕಾಣಿಸುವ ಬೃಹತ್ ಡಿಶ್ ಆಂಟೆನಾದ ಪ್ರತಿಮೆಯಂತೂ ಗ್ರಾಮದೊಳಗೆ ಹಣುಕುತ್ತಿರುವ ಆಧುನಿಕೀಕರಣ ಮತ್ತು ಜಾಗತೀಕರಣವೆಂಬ ಭೂತವನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಹೀಗೆ ಗುರುತಲ್ಲಿ ಉಳಿವ ವಿಶಿಷ್ಟ ಸಂಯೋಜನೆಯ ದೊಡ್ಡ ಪಟ್ಟಿಯನ್ನೇ ಮಾಡಬಹುದು.

ಇದೇ ವಿವರದಲ್ಲಿ ಊರಿನೊಳಗೆ ಮೂಲಭೂತವಾದಿಗಳು ಮತ್ತು ಹುಸಿ ರಾಷ್ಟ್ರೀಯತಾವಾದಿಗಳು ಸೇರಿಕೊಳ್ಳುತ್ತಿರುವ ವಿವರಗಳನ್ನು ಸಹ ಅತ್ಯಂತ ಸೂಕ್ಷ್ಮವಾಗಿ ಸೂಚಿಸುವ ಯತ್ನವನ್ನು ಗಿರೀಶರು ಮಾಡುತ್ತಾರೆ. ದೊಡ್ಡ ತೆರೆಯನ್ನು ಪ್ರವೇಶಿಸುವ ಬೋಟಿನ ಮೇಲಿರುವ ಜೈ ಸಂತೋಷಿ ಮಾ ಎಂಬ ಹೆಸರು ಆ ಪ್ರಕರಣವನ್ನ ನೋಡುಗನಿಗೆ ತಲುಪಿಸುವಲ್ಲಿ ದೊಡ್ಡ ಕೆಲಸವನ್ನೇ ಮಾಡುತ್ತದೆ.

ಆದರೆ ಅನೇಕ ದೂರ ಚಿತ್ರಿಕೆಗಳು ಈ ಚಿತ್ರದಲ್ಲಿ ಸಾಫ್ಟ್ ಆಗಿವೆ. ಇದಕ್ಕೆ ಪ್ರಾಯಶಃ ಬಳಸಿದ ಕ್ಯಾಮೆರಾ ಮಿತಿಯಾಗಿರಬಹುದು. ಸೂಪರ್ ೧೬ ಎಂಬ ಫಾರ್ಮೆಟ್ಟಿನಲ್ಲಿ ಚಿತ್ರಿಸುವವರ ಸಂಕಟ ಇದು. ಹಣ ಉಳಿಸುವ ಸಲುವಾಗಿ ಆಯ್ಕೆಯಾಗುವ ಈ ತಂತ್ರ ಅಂತಿಮವಾಗಿ ತೆರೆಗೆ ಬಂದಾಗ ತಂತ್ರಜ್ಞಾನ ಇಷ್ಟೆಲ್ಲಾ ಬೆಳೆದಿರುವ ಕಾಲದಲ್ಲಿ ಇದು ಹೇಗಾಯಿತು ಎಂಬ ಅನುಮಾನ ತರುತ್ತದೆ. ಚಿತ್ರದ ಓಟಕ್ಕೆ ಇದು ದೊಡ್ಡ ಧಕ್ಕೆ ಅಲ್ಲವಾದರೂ ಈ ವಿಭಾಗದಲ್ಲಿ ನಮ್ಮ ಕನ್ನಡದ ಪ್ರಯೋಗಶೀಲರು ಒಂದಷ್ಟು ಗಮನ ಹರಿಸುವುದು ಮುಖ್ಯ

**ವಸ್ತು ನಿರ್ವಹಣೆ**

ಸಮಕಾಲೀನ ಇತಿಹಾಸವನ್ನ ತಮ್ಮ ಚಿತ್ರಗಳಲ್ಲಿ ಹಿಡಿಯುವುದಕ್ಕೆ ಬಹುತೇಕ ಕಲಾವಿದರು ಹಿಂಜರಿಯುತ್ತಾರೆ. ಇದಕ್ಕೆ ಚಿತ್ರವನ್ನು ಕುರಿತಂತೆ ಭಿನ್ನಾಭಿಪ್ರಾಯಗಳೆದ್ದು ಕಾಂಟ್ರವರ್ಸಿಗಳಲ್ಲಿ ತೊಂದರೆಯನ್ನು ಅನುಭವಿಸಬೇಕಾಗುವುದೋ ಎಂಬ ಭಯ ಪ್ರಧಾನ ಕಾರಣವಾಗಿರುತ್ತದೆ. ಈ ಬಾರಿ ಗಿರೀಶರು ಸ್ವಾತಂತ್ರ್ಯ ಪೂರ್ವದ ಕತೆಯನ್ನ ಹೇಳುವ ಬದಲಿಗೆ ಸಮಕಾಲೀನ ಇತಿಹಾಸಕ್ಕೆ ಹತ್ತಿರದ್ದೆನಿಸುವ ವಿವರವನ್ನು ಕಥಾವಸ್ತುವಾಗಿ ಆಯ್ದುಕೊಂಡಿದ್ದಾರೆ. ಜೊತೆಗೆ ನಮ್ಮ ನಡುವೆಯೇ ಬದುಕುವ ಸಾಮಾಜಿಕ ವಿವರಗಳಿಂದ ಎದ್ದು ಬಂದಂತಹ ಪಾತ್ರಗಳನ್ನ ಗಿರೀಶರು ಬಳಸುತ್ತಾರೆ. ಇದರಿಂದಾಗಿ ಪ್ರೇಕ್ಷಕನಿಗೆ ತೆರೆಯ ಮೇಲಿನ ಪಾತ್ರಗಳೊಂದಿಗೆ ಗುರುತಿಸಿಕೊಳ್ಳುವುದು ಸುಲಭವಾಗುತ್ತದೆ ಮತ್ತು ಸಮಕಾಲೀನ ಇತಿಹಾಸವನ್ನ ನೋಡಬೇಕಾದ ಕ್ರಮ ಕುರಿತಂತೆಯೂ ಪ್ರೇಕ್ಷಕನಿಗೆ ಸೂಚನೆಗಳು ಸಿಕ್ಕಂತಾಗುತ್ತದೆ. ಈ ಹಿನ್ನೆಲೆಯಲ್ಲಿ ಗಿರೀಶ್ ಕಾಸರವಳ್ಳಿಯವರು 'ಗುಲಾಬಿ ಟಾಕೀಸಿ'ನ ಮೂಲಕ ಭಾರೀ ಧೈರ್ಯ ಮಾಡಿದ್ದಾರೆ. ಈ ಧೈರ್ಯದಿಂದಾಗಿ ಸಿನಿಮಾಕ್ಕೆ ಒಳ್ಳೆಯದಾಗಿದೆ.

ಆದರೆ ವಸ್ತು ನಿರ್ವಹಣೆ ಎನ್ನುವುದು ಇಂತಹ ಚಿತ್ರಗಳಲ್ಲಿ ಯಾವಾಗಲೂ ದೊಡ್ಡ ಸಮಸ್ಯೆಯೇ... ಅದೂ ಕೋಮುವಾದಿ ಸಂಬಂಧಿತವಾದ ಚಿತ್ರವಾದಾಗಲಂತೂ ಅದು ಇನ್ನೂ ಕಷ್ಟದ ಕೆಲಸ. ಗಿರೀಶರು ಈ ಕಥನಕ್ಕೆ ಎಂದು ಮಾಡಿಕೊಂಡಿರುವ ವಿಭಿನ್ನ ಧಾರೆಗಳ ಮೂಲಕ ಕಥೆ ಹೇಳುವ ಕ್ರಮದಿಂದಾಗಿ ಇಂದು ನಮ್ಮ ದೇಶವನ್ನ ಕಾಡುತ್ತಾ ಇರುವ ಪ್ರಧಾನ ಸಮಸ್ಯೆಯೊಂದರ ಮೇಲೆ ಕೇವಲ ಬೆಳಕು ಚೆಲ್ಲುವುದು ಮಾತ್ರ ಗಿರೀಶರಿಗೆ ಸಾಧ್ಯವಾಗುತ್ತದೆ. ಇಂತಹ ಕೋಮುವಾದಿ ವಿವರಗಳ ಹಿಂದೆ ಇರಬಹುದಾದ ಅನೇಕ ಮಗ್ಗುಲುಗಳು ಇಲ್ಲಿ ಚರ್ಚಿತವಾಗದೆ ಕೇವಲ ಬಂದುಹೋಗುತ್ತವೆ ಅಷ್ಟೆ. ಈ ಸಿನಿಮಾದ ಪ್ರಧಾನ ಆಶಯ ಕೋಮು ಸೌಹಾರ್ದ ಕುರಿತ ಸಂದೇಶ ಸಾರುವುದು ಅಲ್ಲ ಎನ್ನುವುದನ್ನು ಒಪ್ಪುತ್ತಲೇ ಹೀಗೆ ಸಂಪೂರ್ಣ ವಿವರ ನೀಡದೆ ಕೇವಲ ಝಲಕ್ ನೀಡುವ ಪ್ರಯತ್ನ ಏನಿದೆ, ಇದು ಸಮಸ್ಯೆಯನ್ನ ಬಿಡಿಸಿಡಬಹುದಾದ ಬಹುದೊಡ್ಡ ಅವಕಾಶವೊಂದನ್ನು ಬಿಟ್ಟುಕೊಟ್ಟಂತಾಗಿದೆ ಎಂದೆನಿಸುತ್ತದೆ.

ಚಿತ್ರ ನಮಗೆ ಏನು ತೋರಿಸಿತು ಅದನ್ನಷ್ಟೆ ಚರ್ಚೆ ಮಾಡುವ ಎಂದು ಕೂತಾಗ ಹೀಗೆ ಝಲಕ್‌ಗಳಲ್ಲಿ ಹೇಳಿದ ವಿವರಗಳು ಒಟ್ಟು ಸಮಸ್ಯೆಯ ಹರಹನ್ನು ತಪ್ಪಾಗಿ ಗ್ರಹಿಸುವುದಕ್ಕೂ ಕಾರಣವಾಗಬಹುದು ಎಂದೆನಿಸುತ್ತದೆ.

**ಅನುಮಾನಗಳು**

ಇಷ್ಟು ಮಾತನಾಡಿದರೂ 'ಗುಲಾಬಿ ಟಾಕೀಸು' ಚಿತ್ರದಲ್ಲಿನ ಹಲವು ನಿಲುವುಗಳನ್ನು ಕುರಿತಂತೆ ಭಿನ್ನಾಭಿಪ್ರಾಯ ಮೂಡುತ್ತದೆ. ಗಿರೀಶರು ಕಥೆಯನ್ನ ಆರಂಭಿಸಿದಾಗ ಕಣ್ಣೆದುರು ಬಿಚ್ಚಿಡುವ ಜಗತ್ತಿನಲ್ಲಿಯೇ ಬಂದಿಳಿಯುವ ಕೋಮುಶಕ್ತಿಗಳ ಬಗ್ಗೆ ಮಾತಾಡುತ್ತಾರೆ. ಆ ಶಕ್ತಿಗಳು ಆ ಕುದ್ರುವಿನ ಅನೇಕ ಮುಸಲ್ಮಾನ ಕುಟುಂಬಗಳು ದಿಕ್ಕಾಪಾಲಾಗುವುದನ್ನು ತೋರುತ್ತಲೇ 'ಗುಲಾಬಿ'ಯ ರೆಸಿಸ್ಟೆನ್ಸ್ ಕೂಡ ಸೂಚಿಸುತ್ತಾರೆ. ಆದರೆ ಆ ರೆಸಿಸ್ಟೆನ್ಸ್ ನಮ್ಮ ಮನಸ್ಸಲ್ಲಿ ನಿಲ್ಲುವುದಕ್ಕೂ ಮುನ್ನ ಕಥೆ ಮುಂದಿನ ಹಂತಕ್ಕೆ ಚಲಿಸಿ, 'ಗುಲಾಬಿ'ಯನ್ನ ಆ ಜನ ಯಾವುದೋ ದೋಣಿಯಲ್ಲಿ ಕೂರಿಸುವ ವಿವರ ಬರುತ್ತದೆ. ದೊಡ್ಡ ಪ್ರತಿಭಟನೆ ಸಾಧ್ಯವಿದ್ದ ಗುಲಾಬಿ ಯಾವುದೇ ಪ್ರತಿಭಟನೆಯನ್ನು ಮಾಡದೆ ಸೋಲೊಪ್ಪಿಕೊಳ್ಳುವುದು ಅವಳೇ ಬದುಕಿದ ಕ್ರಮಕ್ಕೆ ವಿರುದ್ಧವಾಗಿ ನಿಲ್ಲುತ್ತದೆ.

ಗಿರೀಶ್ 'ತಬರನ ಕತೆ' ಹೊರತುಪಡಿಸಿ ಬೇರಾವುದೇ ಚಿತ್ರದಲ್ಲೂ ತಮ್ಮ ಪಾತ್ರಗಳನ್ನು ಹೋರಾಟಕ್ಕೆ ಹುರಿಗೊಳಿಸುವುದಿಲ್ಲ. ಅವರ ಎಲ್ಲಾ ಪಾತ್ರಗಳು ನಮಗ್ಯಾಕೆ ಬೇಕು ಎಂದು ಹೊಂದಿಕೊಂಡು ಹೋಗುವ ಅಥವಾ ತಟಸ್ಥವಾಗಿರಲು ಪ್ರಯತ್ನಿಸುವುದನ್ನ ನಾವು ನೋಡುತ್ತೇವೆ. 'ದ್ವೀಪ'ದ ನಾಗಿಗೆ ಸಿಟ್ಟಿದೆ. ಆದರೆ ಸಿಟ್ಟನ್ನು ಯಾರ ಮೇಲೆ ತೋರಿಸಿಕೊಳ್ಳುವುದು ಎಂದು ತಿಳಿಯದು. 'ಗುಲಾಬಿ ಟಾಕೀಸಿ'ನ ಗುಲಾಬಿಗೂ ಬದುಕು ಕಲಿಸಿದ ಪಾಠದಿಂದಲೇ ಎಲ್ಲವನ್ನೂ ತಿದ್ದುವ ಶಕ್ತಿಯಿದೆ. ಆದರೆ ಆ ಪಾತ್ರವೂ ಸಹ ತಟಸ್ಥವಾಗಿ 'ಜಗತ್ತಲ್ಲಿ ಹೆರುವವರು ಇರುವವರೆಗೂ ಸೂಲಗಿತ್ತಿಗೆ ಕೆಲಸ ಇರುತ್ತದೆ' ಎಂದು ಸೋಲೊಪ್ಪಿಕೊಂಡುಬಿಡುತ್ತದೆ. ಈ ಮಾತಿಗೆ ಇರುವ ಅನೇಕ ಧ್ವನ್ಯರ್ಥಗಳನ್ನು ಮೀರಿಯೂ ಗುಲಾಬಿಯು ಅಂತಿಮವಾಗಿ ಒಪ್ಪಿಕೊಳ್ಳುವ ಸೋಲು

ನೋಡುಗನಲ್ಲಿ ಹತಾಶೆಯನ್ನು ಮೂಡಿಸುತ್ತದೆ ಎಂಬುದು ನನ್ನ ದೂರು. 'ಗುಲಾಬಿ'ಯಂತಹ ಚಿತ್ರಗಳು ಹತಾಶೆಗಿಂತ ಹೋರಾಟದ ಶಕ್ತಿಯನ್ನು ಹೆಚ್ಚಿಸುವಲ್ಲಿ ಸಹಾಯ ಮಾಡಬೇಕು. ಸದ್ಯದ ಸಮಕಾಲೀನ ಪರಿಸ್ಥಿತಿಯಲ್ಲಿ ತಟಸ್ಥ ನಿಲುವಿಟ್ಟುಕೊಂಡು ಬದುಕುವುದೇ ಸಾಧ್ಯವಿಲ್ಲ. ಹೀಗಾಗಿ ಗಿರೀಶರ ತಾಟಸ್ಥ್ಯ ಅಪಾಯಕಾರಿ.

ಪ್ರಾಯಶಃ ಸಿನಿಮಾ ಒಂದು ನಮ್ಮನ್ನು ಇಷ್ಟೊಂದು ಮಾತಿಗೆ ಪ್ರಚೋದಿಸುತ್ತದೆ ಎಂಬುದೇ ಆ ಸಿನಿಮಾದ ಶಕ್ತಿ. ಗಿರೀಶ್ ಕಾಸರವಳ್ಳಿಯವರ ಎಲ್ಲಾ ಚಿತ್ರಗಳು ಈ ನಿಟ್ಟಿನಲ್ಲಿ ಕನ್ನಡ ಮಾತ್ರವಲ್ಲದೆ ಜಾಗತಿಕ ಚಿತ್ರರಂಗಕ್ಕೆ ನೀಡಿರುವ ಕೊಡುಗೆ ಮರೆಯಲಾಗದ್ದು. ತಮ್ಮ ಜೀವನದುದ್ದಕ್ಕೂ ಒಳ್ಳೆಯ ಕಲಾಕೃತಿಯನ್ನೇ ಕಟ್ಟಲು ಪ್ರಯತ್ನಿಸುತ್ತಾ ಅವುಗಳನ್ನು ಪ್ರೇಕ್ಷಕನ ಮನಸ್ಸಿನಲ್ಲಿ ಶಾಶ್ವತವಾಗಿ ಇರಿಸಲು ಪ್ರಯತ್ನಿಸುತ್ತಿರುವ ಗಿರೀಶ್ ಎಲ್ಲರ ಮೆಚ್ಚುಗೆಗೆ ಅರ್ಹರಾಗುತ್ತಾರೆ. ಸಾಮಾನ್ಯವಾಗಿ ಹೆಚ್ಚು ಲಾಭ ತರದ ಇಂತಹ ಸಿನಿಮಾಗಳನ್ನು ನಿರ್ಮಿಸುವವರು ಎರಡನೆಯ ಬಾರಿ ಗಿರೀಶರಿಂದ ಚಿತ್ರ ಮಾಡಿಸುವುದಿಲ್ಲ. ಈ ಬಾರಿ ಅಪವಾದ ಎಂಬಂತೆ 'ನಾಯಿನೆರಳು' ನಿರ್ಮಾಪಕರಾಗಿದ್ದ ಬಸಂತ್ ಕುಮಾರ್ ಪಾಟೀಲ್ ಅವರು ಎರಡನೆಯ ಚಿತ್ರವನ್ನ ಗಿರೀಶ್‌ರ ನಿರ್ದೇಶನದಲ್ಲಿ ನಿರ್ಮಿಸಿದ್ದಾರೆ. ಇದು ಮತ್ತೊಂದು ಮೆಚ್ಚತಕ್ಕ ಅಪರೂಪದ ಸಾಹಸ. ಪಾಟೀಲರಿಗೆ ಅಭಿನಂದನೆ ಸಲ್ಲುತ್ತದೆ.

**ಒಟ್ಟಾರೆ**

'ಗುಲಾಬಿ ಟಾಕೀಸು' ಚಿತ್ರವನ್ನು ನೋಡಿದವರಿಗೆ ಉಮಾಶ್ರೀ ಅವರ ಅಭಿನಯ ಒಂದು ದೊಡ್ಡ ಅಚ್ಚರಿಯಂತೆ ಕಾಣಬಹುದು. ಆಕೆ ನಮ್ಮ ನಡುವಿನ ಅಪರೂಪದ ಕಲಾವಿದೆ. ವಾಣಿಜ್ಯ ಪ್ರಧಾನ ಚಿತ್ರಗಳು ಆಕೆಯನ್ನು ಅತಿರೇಕದ ಅಭಿನಯಕ್ಕೆ ಅದೆಷ್ಟು ಬಳಸಿಕೊಂಡಿವೆ ಎಂದರೆ ಆಕೆಗೆ ಇರುವ ಸೂಕ್ಷ್ಮ ಮನಸ್ಸು ಮತ್ತು ಪಾತ್ರ ನಿರ್ವಹಣೆಗೆ ಆಕೆ ಬಳಸುವ ಕ್ರಮಗಳು ಎಷ್ಟೋ ಬಾರಿ ತಿಳಿಯುವುದೇ ಇಲ್ಲ. 'ಗುಲಾಬಿ ಟಾಕೀಸು' ಆ ನಿಟ್ಟಿನಲ್ಲಿ ಒಂದು ದೊಡ್ಡ ಅವಕಾಶವಾಗಿ ಒದಗಿದೆ ಉಮಾಶ್ರೀ ಅವರಿಗೆ. ಆ ಅವಕಾಶವನ್ನು ಆಕೆ ಸಮರ್ಥವಾಗಿ ನಿರ್ವಹಿಸುತ್ತಾರೆ. ಮೀನು ಕೊಳ್ಳುವಾಗ ಮಾಡುವ ಜಗಳವಿರಬಹುದು ಅಥವಾ ಸಿನಿಮಾ ಥೇಟರಿನಲ್ಲಿ ಯಾವುದೇ ಸಿನಿಮಾ ಹಾಡು ನೋಡುತ್ತಾ ಆಕೆ ಅನುಭವಿಸುವ ಸಂಭ್ರಮ ಇರಬಹುದು. ಇಲ್ಲಿ ಆಕೆ ಕೂರುವ ಕ್ರಮ ನಿಲ್ಲುವ ಪೋಜು ಎಲ್ಲವೂ ಆಕೆಯ ಪಾತ್ರದ ಸತ್ಯವನ್ನ ಸೂಚಿಸುತ್ತಾ ಸಾಗುತ್ತವೆ. ಈ ನಿಟ್ಟಿನಲ್ಲಿ 'ಗುಲಾಬಿ ಟಾಕೀಸು' ಉಮಾಶ್ರೀ ಅವರ ಜೀವಮಾನದಲ್ಲಿ ಒಂದು ದೊಡ್ಡ ಮೈಲಿಗಲ್ಲು.

ಹಾಗೆಯೇ ಈ ಚಿತ್ರದಲ್ಲಿ ಅಭಿನಯಿಸಿರುವ ಎಂ. ಡಿ. ಪಲ್ಲವಿ ಅವರ ನೇತ್ರಾ ಪಾತ್ರದ ಅಭಿನಯವನ್ನೂ ಸಹ ಪ್ರತ್ಯೇಕವಾಗಿ ಗಮನಿಸಬಹುದು. ಆಕೆಯ ಪಾತ್ರಕ್ಕೆ ಮಾತುಗಳು ಕಡಿಮೆ. ಆದರೆ ಆ ಪಾತ್ರದ ಒಳಗಿರುವ ಹಪಾಹಪಿಯನ್ನು ಪಲ್ಲವಿ ಬಹುತೇಕ ತಮ್ಮ ಕಣ್ಣುಗಳ ಬಳಕೆಯಿಂದಲೇ ಸಾಧಿಸುತ್ತಾರೆ. ಗುಲಾಬಿಯು ಯಾವುದೋ ನದಿಯ ದಡದಲ್ಲಿ ಕುಳಿತು ಬಟ್ಟೆ ಒಗೆಯುವಾಗ ದೋಣಿಯ ಹುಟ್ಟು ಹಾಕುತ್ತಾ ಅಲ್ಲಿಗೆ ಬರುವ ನೇತ್ರಾಳ ಜೊತೆಗಿನ ಮಾತಿನ ದೃಶ್ಯದಲ್ಲಿ ಮೈ ಕುದಿಯುವ ಜ್ವರದಲ್ಲಿ ದುಡಿಯಬೇಕಾದ ಆ ಪಾತ್ರದ ಪರಿಸ್ಥಿತಿಯನ್ನು ಹಿಡಿಯುವಲ್ಲಿ ಪಲ್ಲವಿ ಮತ್ತು ಉಮಾಶ್ರೀ ಇಬ್ಬರ ಕೆಲಸವನ್ನು ಮೆಚ್ಚಬೇಕು.

ಹೀಗೆಯೇ ಈ ಚಿತ್ರದಲ್ಲಿ ಕೆ. ಜಿ. ಕೃಷ್ಣಮೂರ್ತಿ (ಗುಲಾಬಿಯ ಗಂಡ) ಅಭಿನಯ ಮತ್ತು ಅಶೋಕ್ ಸಂದೀಪ್ (ಸ್ಥಳೀಯ ಮೀನುಗಾರರ ಮೇಸ್ತ್ರಿ) ಅವರ ಅಭಿನಯವೂ ಸಹ ಬಹುಕಾಲ ನೆನಪಲ್ಲಿ ಉಳಿಯುವಂತಹದು. ಇವರಿಬ್ಬರೇ ಅಲ್ಲದೆ ಗುಲಾಬಿಯ ಮನೆಯ ಆಸುಪಾಸಿನಲ್ಲಿರುವ ಅನೇಕ ಹೆಂಗಳೆಯರ ಪಾತ್ರಧಾರಿಗಳ ಅಭಿನಯವೂ ಸಹ ವಾಸ್ತವವನ್ನು ನೋಡುಗನ ಮುಂದಿಡುವಲ್ಲಿ ಶಕ್ತವಾಗಿವೆ.

'ಗುಲಾಬಿ ಟಾಕೀಸು' ವೈದೇಹಿಯವರ ಕಥೆಯಾಗಿ ನಮ್ಮನ್ನು ಕಾಡಿದ್ದಿದೆ. ಗಿರೀಶರ 'ಗುಲಾಬಿ'ಯು ನಮ್ಮನ್ನು ಕಾಡುತ್ತಾಳೆ. ಗಿರೀಶರ ತಟಸ್ಥ ನಿಲುವನ್ನು ಕುರಿತು ನಮಗೆ ಭಿನ್ನಾಭಿಪ್ರಾಯಗಳಿದ್ದರೂ ಇದು ಕನ್ನಡದ ಮೈಲಿಗಲ್ಲುಗಳಲ್ಲಿ ಒಂದು ಎನ್ನುವುದರಲ್ಲಿ ಯಾವುದೇ ಅನುಮಾನವಿಲ್ಲ.

ಬಿ. ಸುರೇಶ
ಮೀಡಿಯ ಹೌಸ್, ನಂ. ೧೧೬೨, ೨೨ನೇ ಕ್ರಾಸ್, ೨೩ನೇ ಮುಖ್ಯರಸ್ತೆ
ಬಿ.ಎಸ್.ಕೆ. ೨ನೇ ಹಂತ, ಬೆಂಗಳೂರು - ೫೬೦ ೦೭೦

## ಚಿನ್ಹ



ಕ್ರಿಸ್ತನ ನೆಪದಲ್ಲಿ
ಭಾನುವಾರಕ್ಕೊಮ್ಮೆ
ಚರ್ಚಿನ ಅಂಗಳದಲ್ಲಿ
ಕುಲುಕುಲು ನಗೆ ಅರಳುತ್ತಿದ್ದರೆ
ಚರ್ಚುಗಳು ಏಳಲಿ ಬಿಡಿ;

ಅಲ್ಲಾನ ನೆನಪಲ್ಲಿ
ಶುಕ್ರವಾರಕ್ಕೊಮ್ಮೆ ಮಸೀದಿಯಂಗಳದಲ್ಲಿ
ಧ್ಯಾನ ಎದೆ ತುಂಬುತ್ತಿದ್ದರೆ
ನಮಾಜು ಮಾಡಲಿ ಬಿಡಿ;

ದೇವರ ಮೂರ್ತಿಗೆ
ಮುಗಿದ ಕೈಗೆ
ಬಾರಿಸಿದ ಗಳ್ಳಾಗಂಟೆ
ಗುಡಿಯಲ್ಲಿ ಹಚ್ಚಿಟ್ಟ ಊದಿನ ಕಡ್ಡಿ
ಮನಸ್ಸೆಲ್ಲಾ ಸ್ವಚ್ಛವಾಗುತ್ತಿದ್ದರೆ
ಗುಡಿಗಳನ್ನು ಕಟ್ಟಲಿ ಬಿಡಿ;

ಚರ್ಚು ಮಸೀದಿ ಮಂದಿರ
ಏಳಲು ಬಿಟ್ಟು
ಅವು ಬೆಂಕಿ ಹಚ್ಚುವ
ತಾಣವಾದರೆ ಮಾತ್ರ
ಅವೆಲ್ಲವುಗಳನ್ನು ಬೀಳಿಸಿ ಬಿಡಿ

ಬಸವರಾಜ ಹೂಗಾರ
ಸಹಾಯಕ ನಿರ್ದೇಶಕ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ನಾಲ್ವಡಿ ಕೃಷ್ಣರಾಜ ಒಡೆಯರ್ ಕಲಾಮಂದಿರ
ವಿ. ವಿ. ರಸ್ತೆ, ಮಂಡ್ಯ - ೫೭೧ ೪೦೧

# ಜಾಗತೀಕರಣ : ಬಲಪಂಥೀಯರ ಸುಳ್ಳು

ಜಾಗತೀಕರಣದ ನೆಪದಲ್ಲಿ ಭಾರತಕ್ಕೆ ಕಾಲಿಟ್ಟಿರುವ ಮತ್ತು ಕಾಲಿಡುತ್ತಿರುವ ಬಹುರಾಷ್ಟ್ರೀಯ ಕಂಪನಿಗಳು ನಮ್ಮ ಆರ್ಥಿಕ ವ್ಯವಸ್ಥೆಗೆ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಬದುಕಿಗೆ ದೊಡ್ಡ ಸವಾಲುಗಳಾಗಿವೆ. ಅನ್ಯ ಸಂಸ್ಕೃತಿಯ ಒಡಲಿಂದ ಎದ್ದುಬಂದು ಈ ನೆಲದ ಪರಂಪರಾನುಗತ ವ್ಯವಸ್ಥೆಯನ್ನು ಬುಡಮೇಲುಮಾಡುತ್ತಿರುವ ಬಹುರಾಷ್ಟ್ರೀಯ ಕಂಪನಿಗಳು ಒಡ್ಡಿರುವ ಸವಾಲುಗಳನ್ನು ಎದುರಿಸುವ ನಿಟ್ಟಿನಲ್ಲಿ ಅನೇಕ ರೀತಿಯ ಚಿಂತನೆಗಳು ಕೆಲಸ ಮಾಡುತ್ತಿವೆ. ಇಂತಹ ಚಿಂತನೆಗಳಲ್ಲಿ ಬಲಪಂಥೀಯ ಚಿಂತನೆಯೂ ಒಂದು.

ಜಾಗತೀಕರಣವನ್ನು ವಿರೋಧಿಸುವ ಎಲ್ಲರೂ ಸ್ವದೇಶೀವಾದವೊಂದೇ ಬಹುರಾಷ್ಟ್ರೀಯ ಕಂಪನಿಗಳನ್ನು ಎದುರಿಸಲು ನಮ್ಮಲ್ಲಿರುವ ಸಮರ್ಥ ಅಸ್ತ್ರ ಎಂದು ವಾದಿಸುತ್ತಾರೆ. ಈ ವಿಚಾರದಲ್ಲಿ ಎಲ್ಲ ಚಿಂತಕರ ನಡುವೆ ಒಮ್ಮತವೇನೋ ಇದೆ. ಆದರೆ ಈ 'ಸ್ವದೇಶಿ' ಎಂಬುದನ್ನು ತಮ್ಮ ತಮ್ಮ ಅನುಕೂಲತೆಗೆ ತಕ್ಕಂತೆ ವಿಶ್ಲೇಷಿಸಿ, ತಮ್ಮ ಸಮಯಸಾಧಕತನವನ್ನು ಮೆರೆಯುತ್ತಿದ್ದಾರೆ. ನಮ್ಮ ಬಲಪಂಥೀಯರ ಇಂತಹ ಸಮಯಸಾಧಕತನವನ್ನು ನಾವು ಅರ್ಥಮಾಡಿಕೊಳ್ಳದೆ ಹೋದರೆ ಅಪಾಯ ತಪ್ಪಿದ್ದಲ್ಲ. 'ಸ್ವದೇಶಿ' ಹೆಸರಿನಲ್ಲಿ ಸ್ಥಳೀಯ ಬಂಡವಾಳಶಾಹಿಗಳ ಹಿತ ಕಾಯುವ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ತಮ್ಮ ಸನಾತನ ಧರ್ಮವೇ ಶ್ರೇಷ್ಠವೆಂದು ಸಾರುತ್ತಾ, ಕೋಮುವಾದವನ್ನು ಉದ್ದೀಪಿಸುವ ಬಲಪಂಥೀಯರ ಗುಪ್ತ ಕಾರ್ಯಸೂಚಿಯನ್ನು ವಿಶ್ಲೇಷಿಸಿ ಅರ್ಥ ಮಾಡಿಕೊಳ್ಳುವುದು ಇವತ್ತಿನ ತುರ್ತಾಗಿದೆ.

ಜಾಗತೀಕರಣದ ಏಕೈಕ ಗುರಿ ಎಂದರೆ ಇಡೀ ವಿಶ್ವದಲ್ಲಿ ಒಂದೇ ಮಾದರಿಯ ಉಪಭೋಗವಾದವನ್ನು ಬೆಳೆಸಿ, ತನ್ಮೂಲಕ ಗ್ರಾಹಕ ಸಂಸ್ಕೃತಿಯನ್ನು ಸೃಷ್ಟಿಸುವುದಾಗಿದೆ. ಹೀಗಾಗಿ ಅದು ಗ್ರಾಹಕನಿಗೆ ಆಯ್ಕೆಯ ಅಖಂಡ ಸ್ವಾತಂತ್ರ್ಯಎಂಬ ಪೊಳ್ಳು ಘೋಷಣೆಯನ್ನು ಜಾರಿಯಲ್ಲಿಟ್ಟಿದೆ. ನೀರಿನಂತೆ ಹರಿಯುವ ಹಣ ಮತ್ತು ಹಲವು ಬಗೆಯ ಮಾಧ್ಯಮಗಳನ್ನು (ಮುಖ್ಯವಾಗಿ ಎಲೆಕ್ಟ್ರಾನಿಕ್ ಮಾಧ್ಯಮ!) ಬಳಸಿಕೊಂಡು ಸ್ಥಳೀಯ ಎಲ್ಲ ಸಂಸ್ಕೃತಿಗಳನ್ನು ನಾಶ ಮಾಡಿ ಹೊಸದಾದ ಪ್ರತಿ ಸಂಸ್ಕೃತಿಯೊಂದನ್ನು ನಿರ್ಮಿಸುವುದು ಜಾಗತೀಕರಣದ ಮುಖ್ಯ ಗುರಿಯಾಗಿದೆ. ಹೀಗೆ ಅದು ಸೃಷ್ಟಿಸಹೊರಟಿರುವ ಹೊಸ ಸಂಸ್ಕೃತಿಯ ಹಿಂದೆ, ಬಲಿಷ್ಠ ಪಾಶ್ಚಿಮಾತ್ಯ ರಾಷ್ಟ್ರಗಳ (ಮುಖ್ಯವಾಗಿ ಅಮೆರಿಕಾ ಮತ್ತದರ ಹಿಂಬಾಲಕ ರಾಷ್ಟ್ರಗಳು) ರಾಜಕೀಯ, ಆರ್ಥಿಕ ಮತ್ತು ಮಿಲಿಟರಿ ಹಿತಾಸಕ್ತಿಗಳು ಕೆಲಸ ಮಾಡುತ್ತಿವೆ.

ಜಾಗತೀಕರಣದ ಇನ್ನೊಂದು ಲಕ್ಷಣವೆಂದರೆ, ಅದು ತನ್ನ ಬೆಳವಣಿಗೆಗೆ ಮತ್ತು ಉಳಿವಿಗೆ ಅಗತ್ಯವೆನಿಸಿದ ಕ್ಷೇತ್ರಗಳಲ್ಲಿ ಮಾತ್ರ ಬಂಡವಾಳವನ್ನು ಹೂಡುತ್ತದೆ. ಆದ್ದರಿಂದಲೇ ನಮಗೀಗ ಹರಿದುಬರುತ್ತಿರುವ ಬಂಡವಾಳವು ನಗರ ಕೇಂದ್ರಿತವಾಗಿದೆ. ಕೃಷಿ ಪ್ರಧಾನವಾದ ಗ್ರಾಮೀಣ ಪ್ರದೇಶಗಳನ್ನು ಅದು ತನ್ನ ಉತ್ಪಾದನೆಗಳಿಗೆ ಬೇಕಾದ ಒಂದು ಮಾರುಕಟ್ಟೆಯನ್ನಾಗಷ್ಟೆ ನೋಡುತ್ತದೆ.

ಆದರೆ ಜಾಗತೀಕರಣವನ್ನು ವಿರೋಧಿಸುವಂತೆ ನಟಿಸುತ್ತಲೇ ಸ್ವದೇಶಿ ಮಂತ್ರವನ್ನು ಜಪಿಸುತ್ತಿರುವ ಬಲಪಂಥೀಯರು ಜಾಗತೀಕರಣದ ಮೂಲ ಉದ್ದೇಶಗಳನ್ನು ವಿಶ್ಲೇಷಿಸಿ, ಪ್ರಶ್ನಿಸುವ ಗೋಜಿಗೆ ಹೋಗುತ್ತಿಲ್ಲ. ತಾತ್ವಿಕವಾಗಿ ಅವರು ಜಾಗತೀಕರಣವನ್ನು ವಿರೋಧಿಸುವಂತೆ ಕಂಡರೂ ಆಳದಲ್ಲಿ, ಜಾಗತೀಕರಣದ ಫಲವನ್ನು ತಾವೇ ಪಡೆದುಕೊಳ್ಳುವುದು ಅವರ ಉದ್ದೇಶವಾಗಿದೆ.

ಹೀಗೆ ನೋಡಿ: ಬಲಪಂಥೀಯರು ಎಂದೂ ಗ್ರಾಹಕ ಸಂಸ್ಕೃತಿಯನ್ನು ವಿರೋಧಿಸುವುದಿಲ್ಲ ಮತ್ತು ಪಾಶ್ಚಿಮಾತ್ಯ ಕಲ್ಪನೆಯಾದ ಉಪಭೋಗವಾದವನ್ನು ಯಾವ ರೀತಿಯಲ್ಲೂ ಪ್ರಶ್ನಿಸುವುದಿಲ್ಲ. ಅದೇ ರೀತಿ ಬಲಪಂಥೀಯರು ನಗರ ಕೇಂದ್ರಿತ ಬಂಡವಾಳ, ಸ್ಥಳೀಯ ಸಂಸ್ಕೃತಿಗಳ ನಾಶ ಮುಂತಾದ ಮೂಲಭೂತ ವಿಷಯಗಳ ಬಗ್ಗೆ ಎಂದಿಗೂ ತಲೆಕೆಡಿಸಿಕೊಂಡಿಲ್ಲ.

ಸ್ವದೇಶಿ ನೀತಿಯ ಬಗ್ಗೆ ಮಾತನಾಡುವ ಬಲಪಂಥೀಯರು ವಿದೇಶಿ ಬಹುರಾಷ್ಟ್ರೀಯ ಕಂಪನಿಗಳ ವಿರುದ್ಧ ಸೆಣಸಲು ಬಳಸುವುದು, ರಾಷ್ಟ್ರೀಯ ಬಂಡವಾಳಶಾಹಿಗಳನ್ನು, ಅಮೆರಿಕಾದ ಪೆಪ್ಸಿಗೆ ಬದಲಾಗಿ ದೇಶೀಯ ಬಂಡವಾಳಶಾಹಿಯ ತಂಪು ಪಾನೀಯವನ್ನು, ವಿದೇಶಿ ಕಂಪನಿಗಳ ಬದಲಿಗೆ ಭಾರತೀಯ ಕಂಪನಿಗಳ ಸೋಪುಗಳನ್ನು. ಹೀಗೆ ವಿದೇಶಿ ಉತ್ಪನ್ನಗಳ ಬದಲಿಗೆ ಸ್ಥಳೀಯ ಬೃಹತ್ ಉದ್ದಿಮೆಗಳ ಉತ್ಪನ್ನಗಳನ್ನು ಬಳಸುವಂತೆ ಭಾರತೀಯ ಗ್ರಾಹಕನನ್ನು ಉತ್ತೇಜಿಸುತ್ತ ತಾವು ಬಹುರಾಷ್ಟ್ರೀಯ ಕಂಪನಿಗಳ ವಿರುದ್ಧ ಸೆಣೆಸುತ್ತಿದ್ದೇವೆ ಎಂಬ ಭಾವನೆ ಜನರಲ್ಲಿ ಮೂಡುವಂತೆ ಮಾಡುವಲ್ಲಿ ನಮ್ಮ ಬಲಪಂಥೀಯ ಸಂಘಟನೆಗಳು – ಅವರ ಚಿಂತನೆಗಳು ಕಾರ್ಯ ನಿರ್ವಹಿಸುತ್ತಿವೆ. ಇದು ಸ್ವದೇಶಿ ಬಂಡವಾಳಶಾಹಿಗಳನ್ನು ಪ್ರಮೋಟ್‌ಮಾಡುವ ಬಲಪಂಥೀಯರ ಒಂದು ವಿಧಾನ. ಹೀಗೆ ಬಲಪಂಥೀಯರಿಗೆ ಬಂಡವಳಿಗರು ಸ್ವದೇಶಿ ಆಗುವುದು ಮುಖ್ಯವೇ ಹೊರತು ಬಂಡವಾಳಶಾಹಿಗಳಿಂದಾಗುವ ತೊಂದರೆಗಳಲ್ಲ.

ಭಾರತದಲ್ಲಿ ಈಗಾಗಲೇ ಇರುವ ಸ್ಥಳೀಯ ಬಂಡವಾಳಶಾಹಿ ಕಂಪನಿಗಳು ಭಾರತೀಯರ ಒಡೆತನದವು ಅನ್ನುವುದನ್ನು ಬಿಟ್ಟರೆ, ಅವು ವಿದೇಶಿ ಬಹುರಾಷ್ಟ್ರೀಯ ಕಂಪನಿಗಳಿಗಿಂತ ಯಾವುದರಲ್ಲೂ ಭಿನ್ನವಾಗೇನೂ ಇಲ್ಲ.

ಬಲಪಂಥೀಯರು ಸ್ವದೇಶಿ ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ ಸ್ಥಳೀಯ ಕಂಪನಿಗಳು ತಮ್ಮ ಬಂಡವಾಳ ಹೂಡಿಕೆ, ಮಾರುಕಟ್ಟೆ ನೀತಿ, ಕಾರ್ಮಿಕರ ಶೋಷಣೆಗಳೇ ಅಲ್ಲದೆ ಕಾರ್ಮಿಕರ ಸಂಘಟನೆಗಳನ್ನು ಹತ್ತಿಕ್ಕುವುದರಲ್ಲಿಯಾಗಲಿ ಬಹುರಾಷ್ಟ್ರೀಯ ಕಂಪನಿಗಳಿಗಿಂತ ಬೇರೇನಲ್ಲ. ಭಾರತೀಯ ಸಂಸ್ಕೃತಿಯನ್ನು, ಜೀವನಶೈಲಿಯನ್ನು ಅವು ಉಳಿಸುವುದಿರಲಿ, ನಾಶ ಮಾಡುವ ಸ್ಪರ್ಧೆಯಲ್ಲಿ ಬಹುರಾಷ್ಟ್ರೀಯ ಕಂಪನಿಗಳನ್ನೂ ಮೀರಿಸುತ್ತಿವೆ.

ನಮ್ಮ ಸಂಸ್ಕೃತಿಗೆ ವಿರೋಧವಾದದ್ದು ಎಂದು ಪ್ರೇಮಿಗಳ ಬಹಿರಂಗ ಭೇಟಿಗಳನ್ನು, ಪ್ರೇಮಿಗಳ ದಿನಾಚರಣೆಯನ್ನು ವಿರೋಧಿಸುವ ಬಲಪಂಥೀಯರು, ಸ್ವದೇಶಿ ಕಂಪನಿಗಳು ಅಶ್ಲೀಲವಾಗಿ ಹೆಣ್ಣುಗಳನ್ನು ಪ್ರದರ್ಶಿಸುವಂತಹ ಸೌಂದರ್ಯ ಸ್ಪರ್ಧೆಗಳನ್ನು ವಿರೋಧಿಸಿದ ಉದಾಹರಣೆ ಇಲ್ಲ. ಇಷ್ಟೆಲ್ಲಾ ಇದ್ದರೂ ಸ್ವದೇಶೀವಾದದ ಹೆಸರಲ್ಲಿ ಬಲಪಂಥೀಯರು ಸ್ಥಳೀಯ ಬಂಡವಾಳಶಾಹಿಗಳನ್ನು ಬೆಂಬಲಿಸುತ್ತಿರುವುದಕ್ಕೆ ಅವರದೇ ಆದ ಕಾರಣಗಳಿವೆ: ಮೊದಲನೆಯದೆಂದರೆ, ಸ್ಥಳೀಯ ಬಂಡವಾಳಶಾಹಿಗಳು ಮೇಲ್ಜಾತಿಗಳಿಗೆ ಸೇರಿರುವುದಾಗಿದೆ. ಮತ್ತು ಬಲಪಂಥೀಯರ ಕೋಮುವಾದಕ್ಕೆ ಪೂರಕವಾಗಿರುವುದು. ಎರಡನೆಯದೆಂದರೆ, ಬಲಪಂಥೀಯ ಸಂಘಟನೆಗಳ ಚಟುವಟಿಕೆಗಳಿಗೆ ಮತ್ತು ಚುನಾವಣಾ ವೆಚ್ಚಗಳಿಗೆ ಹಣ (ಅಥವಾ ಅವರ ಭಾಷೆಯಲ್ಲಿ ವಂತಿಗೆ!) ಒದಗಿಸುವುದಾಗಿದೆ.

ಹೀಗಾಗಿ ಬಲಪಂಥೀಯರು ತಮ್ಮ ಹುಳುಕುಗಳನ್ನು ಮುಚ್ಚಿಕೊಳ್ಳಲು ಆಗಾಗ ಗಾಂಧಿಯನ್ನು, ಅವರ ಸ್ವದೇಶಿವಾದವನ್ನು, ನೆನಪಿಸಿಕೊಳ್ಳುತ್ತಿರುತ್ತಾರೆ. ಆದರೆ, ಮೂಲಭೂತವಾಗಿ ಗಾಂಧಿಯವರ ಸ್ವದೇಶಿ ಕಲ್ಪನೆಗೂ ಬಲಪಂಥೀಯರ (ಸಂಘಪರಿವಾರಿಗಳ) ಹುಸಿ ಸ್ವದೇಶಿವಾದಕ್ಕೂ ಯಾವುದೇ ಸಾಮ್ಯವಿಲ್ಲ.

ಗಾಂಧೀಜಿಯವರ ದೃಷ್ಟಿಯಲ್ಲಿ ಸ್ವದೇಶಿವಾದವೆಂದರೆ ಅನಗತ್ಯ ಯಂತ್ರಗಳ ಬಳಕೆ ಮಾಡದೆ, ಮಾನವ ಸಂಪನ್ಮೂಲವನ್ನು ಬಳಸಿಕೊಂಡು ರಾಷ್ಟ್ರವು ಸ್ವಾವಲಂಬಿಯಾಗುವುದು. ಅಲ್ಪ ಬಂಡವಾಳ, ಅಧಿಕ ಮಾನವ ಶ್ರಮ, ನೈಸರ್ಗಿಕ ಸಂಪನ್ಮೂಲಗಳ ಮಿತ ಬಳಕೆ ಇವು ಗಾಂಧೀಜಿಯವರ ಮೂಲ ಮಂತ್ರಗಳಾಗಿದ್ದವು. ಆದರೆ ಇವತ್ತಿನ ವಿಪರ್ಯಾಸವೆಂದರೆ ಗಾಂಧೀಜಿಯವರನ್ನು ಇಲ್ಲವಾಗಿಸಿದವರೇ, ಅವರನ್ನು ನೆನೆಯುತ್ತ ಸ್ವದೇಶೀವಾದದ ಅವರ ಕಲ್ಪನೆಯನ್ನು ತಿರುಚುತ್ತಿದ್ದಾರೆ. ಇಂತಹ ದ್ವಂದ್ವ ನೀತಿಗಳಿಂದಾಗಿ ಸ್ವಾವಲಂಬಿಯಾಗಿ ಬೆಳಗಬೇಕಿದ್ದ ಹಳ್ಳಿಗಳು ಬಂಡವಾಳಶಾಹಿಗಳ ಮಾರುಕಟ್ಟೆಗಳಾಗಿವೆ.

ಆದರೆ, ಬಲಪಂಥೀಯರು ಇವನ್ನೆಲ್ಲ ಬುದ್ಧಿಪೂರ್ವಕವಾಗಿ ನಿರ್ಲಕ್ಷಿಸುತ್ತಿದ್ದಾರೆ. ವಿದೇಶಿ ಬಂಡವಾಳಶಾಹಿಗಳ ಬದಲಿಗೆ ಸ್ವದೇಶಿ ಬಂಡವಾಳಶಾಹಿಗಳನ್ನು ಪ್ರೋತ್ಸಾಹಿಸಿ ಬೆಳೆಸುವುದೇ 'ಸ್ವದೇಶಿ ಚಳುವಳಿ' ಎಂಬ ಭ್ರಮೆಯನ್ನು ಜನರಲ್ಲಿ ಹುಟ್ಟುಹಾಕುತ್ತಿದ್ದಾರೆ. ಹೀಗಾಗಿ ಬಲಪಂಥೀಯರು ಜಾಗತೀಕರಣವನ್ನು ವಿರೋಧಿಸುವಂತೆ ಹೊರನೋಟಕ್ಕೆ ಕಂಡುಬಂದರೂ, ಆಳದಲ್ಲಿ ಅದರ ಲಾಭವನ್ನು ತಾವೂ ಉಣ್ಣಲು ಅನುಕೂಲ ಮಾಡಿಕೊಳ್ಳುವುದೇ ಅವರು ಹಮ್ಮಿಕೊಂಡಿರುವ ಸ್ವದೇಶಿ ಆಂದೋಲನದ ಯೋಜನೆಯಾಗಿದೆ. ಅನ್ಯ ಸಂಸ್ಕೃತಿಯ ಆಕ್ರಮಣವನ್ನು ವಿರೋಧಿಸುವ ಮುಖವಾಡ ಹಾಕಿಕೊಂಡು ತಮ್ಮ ಧಾರ್ಮಿಕ ಮೂಲಭೂತವಾದವನ್ನೇ ಭಾರತೀಯ ಸಂಸ್ಕೃತಿ ಎಂದು ಬಿಂಬಿಸಿ, ಅದನ್ನು ಎಲ್ಲರ ಮೇಲೂ ಹೇರುವುದೇ ಅವರ ತಂತ್ರವಾಗಿದೆ.

ಕು. ಸ. ಮಧುಸೂದನ
[illegible]
ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ

# ಆಕಾಶಗಂಗೆಯ ಪರಿಚಯ



**ಮ**ಳೆ ಮುಗಿದು ಮತ್ತೆ ಮುಗಿಲು ಕವಿಯುವುದರೊಳಗೆ ನೀಲಿ ಆಕಾಶ ಕಾಣಸಿಗುವುದು ಈ ತಿಂಗಳಲ್ಲಿ ಮಾತ್ರ ಸಾಧ್ಯ. ಆಗ ಮರೆಯದೆ ನೋಡಬೇಕಾದದ್ದು ಆಕಾಶಗಂಗೆಯ ಸೊಬಗು. ಸಂಜೆ ಉತ್ತರದಿಂದ ಆರಂಭವಾಗುವಂತೆ ಕಾಣುವ ಈ ನದಿ ಗರುಡ ಮತ್ತು ರಾಜಹಂಸಗಳ ನಡುವೆ ಹಾದುಬರುತ್ತಿದೆ. ಗರುಡದಲ್ಲಿರುವ ಶ್ರವಣ ನಕ್ಷತ್ರ ಮತ್ತು ರಾಜಹಂಸದ ಮೀನಾಕ್ಷಿ ನಕ್ಷತ್ರಗಳು ಚಿರವಿರಹಿಗಳು ಎಂದು ಪುರಾಣದ ಕತೆ. ಅವರನ್ನು ಅಗಲಿಸಿದ ಈ ನದಿಯನ್ನು ದಾಟಿ ಪುನಃ ಒಂದಾಗುವುದು ಆ ಪ್ರೇಮಿಗಳಿಗೆ ಸಾಧ್ಯವೇ ಇಲ್ಲ. ಅವರ ಸಂದೇಶಗಳನ್ನು ರಾಜಹಂಸ ಒಯ್ಯುತ್ತದಂತೆ. ಇದು ಈ ಹೆಸರುಗಳ ಹಿಂದಿನ ಕತೆ. ದಕ್ಷಿಣದಲ್ಲಿ ಆಕಾಶಗಂಗೆ ವೃಶ್ಚಿಕ ಧನುಗಳ ಮೂಲಕ ಹರಿಯುತ್ತದೆ. ಇಲ್ಲಿ ನೆಬ್ಯುಲ ಮತ್ತು ನಕ್ಷತ್ರಗುಚ್ಛಗಳ ಬೃಹತ್ ಸಮಾವೇಶವೇ ಇದೆ. ತೆಳ್ಳನೆಯ ಮೋಡದ ಹಾಗೆ ಕಾಣುತ್ತದೆ. ಗುರು ಗ್ರಹವನ್ನೇ ಗುರುತನ್ನಾಗಿಟ್ಟುಕೊಂಡು ಪೂ ದುರ್ಬೀನಿನ ಮೂಲಕ ಆ ಭಾಗವನ್ನು ನೋಡಿದರೆ ನೆಬ್ಯುಲ ಮತ್ತು ಗುಚ್ಛಗಳು ಕಾಣುವುವು. ಒಮ್ಮೆ ಗುರುತಿಸಿಕೊಂಡ ಮೇಲೆ ಬರಿಗಣ್ಣಿಗೂ ಕಾಣುತ್ತದೆ ಎಂದು ಅರಿವಾಗುತ್ತದೆ.

ಪಶ್ಚಿಮದ ಅಂಚಿನಲ್ಲಿ ಕಾಣುವ ಶುಕ್ರದ ಆಸುಪಾಸನ್ನು ಗಮನಿಸಿ. ಅಲ್ಲಿ ಆಕಾಶಗಂಗೆಯ ಹರಿವಿಲ್ಲ. ಖಾಲಿ ಎನ್ನಿಸಬಹುದಾದ ಭಾಗ ಅದು. ಗಮನಿಸಿ ನೋಡಿದರೆ ಇನ್ನೆರಡು ಗ್ರಹಗಳು ಕಾಣುತ್ತವೆ ಮಂಗಳ ಮತ್ತು ಬುಧ. ೧ನೆಯ ತಾರೀಖು ಸಂಜೆ ಬಾಲಚಂದ್ರನ ಪಕ್ಕ ಕಾಣುವ ಚುಕ್ಕೆ ಮಂಗಳ. ಬಹಳ ಕ್ಷೀಣ; ಅಲ್ಲದೆ ಸಂಧ್ಯಾಪ್ರಕಾಶದ ಅಡಚಣೆ. ೩೦ರಂದು ಪುನಃ ಮಂಗಳ ಚಂದ್ರ ಒಂದಾಗುವುವು; ಆದರೆ ಆಗ ದಿಗಂತದ ಅಂಚಿನಲ್ಲಿರುವುದರಿಂದ ನೋಡುವುದು ಸಾಧ್ಯವೇ ಇಲ್ಲ.




*ಈ ನಕ್ಷೆ ತಿಂಗಳುದ್ದಕ್ಕೂ ಸಂಜೆ ೭ ಗಂಟೆಗೆ ಅನ್ವಯವಾಗುತ್ತದೆ.*



ಶುಕ್ರ, ಚಂದ್ರ ಮತ್ತು ಮಂಗಳ
ಅಕ್ಟೋಬರ್ ೨ರ ಸಂಜೆ ಪಶ್ಚಿಮದಲ್ಲಿ

ಬುಧ ಗ್ರಹವನ್ನು ನೋಡುವುದು ಬಹಳ ಕಷ್ಟ. ೬ರಂದು ಅದು ಸೂರ್ಯನ ಜೊತೆಗೂಡಿ ಆ ಮುಂದೆ ಬೆಳಗಿನ ಜಾವಕ್ಕೆ ಕಾಲಿಡುತ್ತದೆ. ದಿನೇ ದಿನೇ ಎತ್ತರಕ್ಕೆ ಏರಿ ೨೨ರ ಬೆಳಗಿನ ಜಾವ ಗರಿಷ್ಠ ಎತ್ತರದಲ್ಲಿ ಕಾಣುತ್ತದೆ. ಆದರೂ ಅದನ್ನು ಹುಡುಕುವುದು ಕಷ್ಟವೇ. ೨೭ರಂದು ಬೆಳಗಿನ ಜಾವ ಬಾಲ ಚಂದ್ರನನ್ನು ಹುಡುಕಿದರೆ ಅದರ ಪಕ್ಕ ಈ ಚುಕ್ಕೆಯನ್ನು ಕಾಣಬಹುದು.

ಗುರುಗ್ರಹ ಸಂಜೆಯ ಆಕಾಶದಲ್ಲಿ ನೆತ್ತಿಯ ಮೇಲೆ ಕಾಣುತ್ತದೆ. ಧನುರಾಶಿಯ ಅಂಚಿನಲ್ಲಿ ಇರುವ ಈ ಪ್ರಕಾಶಮಾನವಾದ ಚುಕ್ಕೆ ತಿಂಗಳ ಕೊನೆಗೆ ಶುಕ್ರಗ್ರಹಕ್ಕೆ ಸಮೀಪವಾಗುವುದನ್ನು ಗಮನಿಸಬಹುದು. ಮುಂದಿನ ತಿಂಗಳುಗಳಲ್ಲಿ ಅವುಗಳ ಸಮಾಗಮದ ಮುನ್ಸೂಚನೆ ಇದು.

ಶನಿ ಗ್ರಹ ಬೆಳಗಿನ ಜಾವ ಕಾಣುತ್ತದೆ. ಮಘ ನಕ್ಷತ್ರದಿಂದ ಇದನ್ನು ಗುರುತಿಸಬಹುದು. ೨೫ರಂದು ಚಂದ್ರನ ಜೊತೆಗೂಡುವುದು.

ಈ ತಿಂಗಳಲ್ಲಿ ಎರಡು ಪ್ರಮುಖ ಉಲ್ಕಾವೃಷ್ಟಿಗಳಿವೆ. ೭ರಿಂದ ೯ರವರೆಗೆ ಡ್ರಾಕೊನಿಡ್ಸ್ ಎಂಬ ವೃಷ್ಟಿ ಇದೆ. ನಿಯತಕಾಲಿಕವಾಗಿ ಬರುತ್ತಿರುವ ಜಿಯೊಕೊಬಿನಿ ಝಿನ್ನರ್ ಎಂಬ ಧೂಮಕೇತುವಿನ ತುಣುಕುಗಳು, ಡ್ರಾಕೋ (ಸುಯೋಧನ) ನಕ್ಷತ್ರ ಪುಂಜದ ಕಡೆಯಿಂದ ಬರುತ್ತಿರುವಂತೆ ಕಾಣುತ್ತವೆಯಾದದ್ದರಿಂದ ಈ ಹೆಸರು. ೨೧ರಿಂದ ೨೫ರವರೆಗೆ ಒರಿಯೋನಿಡ್ಸ್ ಎಂಬ ವೃಷ್ಟಿಯಿದೆ. ಹ್ಯಾಲೀ ಧೂಮಕೇತುವಿನ ತುಣುಕುಗಳು ಈ ವೃಷ್ಟಿಯನ್ನು ಸೃಷ್ಟಿಸುತ್ತವೆ. ಈ ಎರಡೂ ವೃಷ್ಟಿಗಳನ್ನು ನೋಡುವುದು ಸಾಧ್ಯವಾದರೆ ವ್ಯತ್ಯಾಸಗಳನ್ನು ಗಮನಿಸಬಹುದು. ಉದಾಹರಣೆಗೆ, ಡ್ರಾಕೊನಿಡ್ಸ್‌ನ ಉಲ್ಕೆಗಳು ಒರಿಯೋನಿಡ್ಸ್‌ದಕ್ಕಿಂತ ನಿಧಾನವಾಗಿ ಚಲಿಸುತ್ತವೆ. ಈ ಬಗೆಯ ಅಧ್ಯಯನಕ್ಕೆ ದೂರದರ್ಶಕ ಬೇಕಿಲ್ಲ.

**ಖಗೋಳ ದಿನಚರಿ**

| | | |
|---|---|---|
| ಅಕ್ಟೋಬರ್ | ೧ | ಮಂಗಳ - ಚಂದ್ರ ಸಮಾಗಮ |
| | ೨ | ಶುಕ್ರ ಚಂದ್ರ ಸಮಾಗಮ |
| | ೪ | ಜ್ಯೇಷ್ಠಾ ನಕ್ಷತ್ರದ ಆಚ್ಛಾದನೆ (ಭಾರತಕ್ಕೆ ಕಾಣುವುದಿಲ್ಲ) |
| | ೬ | ಬುಧ ಗ್ರಹದ ಯುತಿ (ಸೂರ್ಯನೊಡನೆ ಸಮಾಗಮ) |
| | ೭ | ಗುರು - ಚಂದ್ರ ಸಮಾಗಮ |
| | | ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ) |
| | ೮ | ಡ್ರಾಕೋನಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ |
| | ೧೦ | ನೆಪ್ಚೂನ್ ಆಚ್ಛಾದನೆ (ಭಾರತಕ್ಕೆ ಕಾಣುವುದಿಲ್ಲ) |
| | ೧೫ | ಹುಣ್ಣಿಮೆ ೦೧:೩೨ ಕ್ಕೆ |
| | ೨೧ | ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ) |
| | ೨೨ | ಒರಿಯೋನಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ |
| | ೨೫ | ಶನಿ ಚಂದ್ರ ಸಮಾಗಮ |
| | ೨೬ | ಶುಕ್ರ - ಜ್ಯೇಷ್ಠಾ ಸಮಾಗಮ |
| | ೨೭ | ಬುಧ - ಚಂದ್ರ ಸಮಾಗಮ |
| | ೩೦ | ಮಂಗಳ - ಚಂದ್ರ ಸಮಾಗಮ |
| ನವೆಂಬರ್ | ೧ | ಶುಕ್ರ - ಚಂದ್ರ ಸಮಾಗಮ |
| | ೩ | ಗುರು - ಚಂದ್ರ ಸಮಾಗಮ |


**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

# ಉತ್ತರ ಕರ್ನಾಟಕದಲ್ಲಿಯ ಎಳ್ಳಅಮವಾಸೆ ಹಬ್ಬದ ವೈಶಿಷ್ಟ್ಯ

ಎಚ್. ಬಿ. ನಡುವಿನಕೇರಿ

**ಭಾ**ರತೀಯರ ಜೀವನ ವಿಧಾನ ದೈವಭಕ್ತಿ ಪ್ರಧಾನವಾದದ್ದು. ಜನತೆಯಲ್ಲಿ ದೈವ ಮಹಿಮೆ ಭಕ್ತಿ ಶ್ರದ್ಧೆಗಳ ಪ್ರಕಾಶನಕ್ಕೆ, ಹಬ್ಬ ಹರಿದಿನ, ವ್ರತ, ಕತೆ, ಪುರಾಣ, ಯಾತ್ರೆ, ಜಾತ್ರೆಗಳೆಲ್ಲಾ ಪೋಷಕ. ಹಬ್ಬದ ಆಚರಣೆಯಾದರೂ ಸಾಂಕ್ರಾಮಿಕ. ಒಬ್ಬರು ಮಾಡಿದಂತೆಯೇ ಮತ್ತೊಬ್ಬರು ಮಾಡದೆ ಇರಲಾರರು. ಇನ್ನೊಬ್ಬರಿಗಿಂತ ಉತ್ತಮವಾಗಿ ಹಬ್ಬ ಉತ್ಸವ ದೈವಾರಾಧನೆಯ ಕಾರ್ಯ ಮಾಡಬೇಕೆಂಬ ಹಂಬಲ ಎಲ್ಲಾ ಭಕ್ತಾದಿಗಳಿಗೂ ಇರುತ್ತದೆ. ಅಂತೆಯೇ ಮಾನವನು ತನ್ನ ಬದುಕಿನ ಏಕತಾನತೆಯನ್ನು ಹೋಗಲಾಡಿಸುವುದಕ್ಕಾಗಿ, ಆತ್ಮೀಯರನ್ನು ನೋಡಿಕೊಳ್ಳುವುದಕ್ಕಾಗಿ, ಸುಖ ಸಂತೋಷ ಹೊಂದುವುದಕ್ಕಾಗಿ ಕೆಲವು ದಿನಗಳನ್ನು ಗೊತ್ತುಮಾಡಿಕೊಂಡು ಅವನ್ನು ಹಬ್ಬ ಹರಿದಿನಗಳೆಂದು ಕರೆದುಕೊಂಡಿರಬೇಕು.

ಭಾರತವು ಕೃಷಿ ಪ್ರಧಾನವಾದ ದೇಶ. ಕೃಷಿಗೆ ಸಂಬಂಧಿಸಿದ ಇಲ್ಲಿ ಆಚರಿಸಲ್ಪಡುವ ಹಬ್ಬಗಳಲ್ಲಿ ಎಳ್ಳಅಮವಾಸೆ ಹಬ್ಬವೂ ಒಂದು. ಈ ಹಬ್ಬವು ರೈತಾಪಿ ವರ್ಗದ ಜನರಿಗೆ ಸಂತಸವನ್ನುಂಟುಮಾಡುವ ಹಬ್ಬವಾಗಿದೆ. ಏಕೆಂದರೆ ಈ ಸಂದರ್ಭದಲ್ಲಿ ಭೂಮಿತಾಯಿ ಹಸಿರು ಸೀರೆಯನ್ನುಟ್ಟು ದಿಬ್ಬಣದ ಮದುಮಗಳಂತೆ ಕಾಣುತ್ತಾಳೆ. ಹೀಗೆ ಕಾಣುವ ಭೂಮಿತಾಯಿಯ ಮಡಿಲಲ್ಲಿ ಬೆಳೆದ ರೈತ, ತಾನು ಬಿತ್ತಿ ಬೆಳೆಯುವ ಭೂಮಿತಾಯಿಗೆ ತನುಮನದಿಂದ ಪೂಜಿಸಿ ಸಂತೃಪ್ತನಾಗುತ್ತಾನೆ.

ಒಕ್ಕಲಿಗರು ಬೇಸಾಯದಲ್ಲಿ ಕಾಲಮಾನಕ್ಕೆ ತಕ್ಕಂತೆ ಅನೇಕ ಸಂಪ್ರದಾಯಗಳನ್ನು ಅನುಸರಿಸುತ್ತಾ ಬಂದಿದ್ದಾರೆ. ವಿಶೇಷವಾಗಿ ಈ ಸಂಪ್ರದಾಯಗಳು ಕಾಲಚಕ್ರದಲ್ಲಿ ಬದಲಾವಣೆಗೆ ಒಳಪಟ್ಟಿವೆ. ಹೀಗೆ ಈ ಎಳ್ಳಅಮವಾಸೆ ಹಬ್ಬವು ರೈತರ ಸಡಗರ ಸಂಭ್ರಮ ಮತ್ತು ಒಡನಾಡಿಯಂತಿರುವ ಎತ್ತುಗಳಿಗೆ ಅಲಂಕರಿಸಿದ್ದನ್ನು ನೋಡಿದರೆ ಇದು ರೈತರು ಆಚರಿಸುವ ದೊಡ್ಡ ಹಬ್ಬವೆಂದು ಕಾಣುತ್ತದೆ.

ಎಳ್ಳಅಮವಾಸೆಯ ದಿನ ಹಳ್ಳಿಯ ರೈತರು ಮತ್ತು ಯುವಕ ಯುವತಿಯರು ಮಕ್ಕಳು ಬಣ್ಣ ಬಣ್ಣದ ಉಡುಗೆ ತೊಡುಗೆಗಳನ್ನು ಧರಿಸಿ ಚರಗಾ ಚಲ್ಲುವುದಕ್ಕೆ ಸಜ್ಜಾಗಿ ಹುರುಪು ಹುಮ್ಮಸ್ಸಿನಿಂದ ತಮ್ಮ ತಮ್ಮ ಹೊಲಗದ್ದೆಗಳಿಗೆ ಹೋಗುತ್ತಾರೆ. ಅವರೊಂದಿಗೆ ಸ್ನೇಹಿತರು, ಬೀಗರು, ಗೆಳೆಯರು, ಗೆಳತಿಯರು ಜೊತೆಗೂಡಿ ಹೋಗುವುದರಿಂದ ಹಬ್ಬಕ್ಕೆ ಇನ್ನಷ್ಟು ಮೆರುಗು ಬರುವುದು. ಹೀಗೆ ರೈತರು ಚಕ್ಕಡಿ (ಗಾಡಿ) ಹೂಡಿಕೊಂಡು ಎತ್ತುಗಳಿಗೆ ಜೂಲ, ಹಣೆಕಟ್ಟು, ಗೆಜ್ಜೆಸರ, ಹೀಗೆ ಅನೇಕ ಆಭರಣಗಳಿಂದ ಅಲಂಕರಿಸಿ ಅಂದಿನ ದಿವಸ ತಾವೂ ಮದುಮಗನಂತೆ ಶೃಂಗಾರ ಮಾಡಿಕೊಂಡು ಆಭರಣಗಳನ್ನು ಧರಿಸಿಕೊಂಡು ಅಬ್ಬರದಿಂದ ಚಕ್ಕಡಿ ಹೂಡಿಕೊಂಡು ಹೊಲಕ್ಕೆ ಹೋಗುವನು. ಸಣ್ಣ ರೈತರು ಕಾಲುನಡಿಗೆಯಿಂದ, ದೊಡ್ಡ ರೈತರು ಚಕ್ಕಡಿ, ಟ್ರ್ಯಾಕ್ಟರ್ ಇತರೆ ವಾಹನಗಳನ್ನು ತೆಗೆದುಕೊಂಡು ಹೋಗುವ ಪದ್ಧತಿ ವಿಶೇಷವಾಗಿ ಉತ್ತರ ಕರ್ನಾಟಕದ ಕಡೆಗಳಲ್ಲಿ ಕಾಣುತ್ತದೆ.

ಉಳಿದ ಹಬ್ಬಗಳಂತೆ ಎಳ್ಳಅಮವಾಸೆಯ ಹಬ್ಬದ ದಿನವೂ ಸಹ ಮಹಿಳೆಯರಿಗೆ ಹೆಚ್ಚಿನ ಕೆಲಸವಿರುತ್ತದೆ. ಇವರು ಬೆಳಗಿನ ಜಾವದಲ್ಲೇ ಎದ್ದು ಅಡುಗೆಯನ್ನು ತಯಾರಿಸುವರು. ಎರಡು ದಿನ ಮೊದಲೇ ಹಬ್ಬದ ಎಳ್ಳು ಹೋಳಿಗೆ, ತಿಂಡಿ ತಿನಿಸುಗಳನ್ನು ತಯಾರಿಸಿರುತ್ತಾರೆ. ಅಂದಿನ ದಿನ ಸಜ್ಜಿಯ ಉಂಡಿ (ಕಡಬು), ಹಿಂಡಿಪಲ್ಲೆ,



ಹೂರಣ ಹೋಳಿಗೆ, ಕರಿಗಡಬು, ಕಟ್ಟಿನ ಸಾರು, ಬಾನ ಅನ್ನ, ಬಜಿ, ಹಪ್ಪಳ, ಸಂಡಿಗೆ, ಉಪ್ಪಿನಕಾಯಿ, ಬದನೆಕಾಯಿ ಪಲ್ಲೆ ಹೀಗೆ ಅನೇಕ ತರಹದ ರುಚಿರುಚಿಯಾದ ಅಡುಗೆಯನ್ನು ತಯಾರಿಸುವರು.

ರೈತ ಸಮುದಾಯ ಮುಂಗಾರಿನ ಫಸಲು ಪಡೆದ ಸಂಭ್ರಮದಲ್ಲಿರುವ ಸಮಯ ಮತ್ತು ಹಿಂಗಾರಿ ಬಿತ್ತನೆಯ ಜೋಳದ ಸಿರಿತೆನೆಯನ್ನು ಸುಡಲು ಮತ್ತು ತನ್ನ ಒಡನಾಡಿಯಂತಿರುವ ಎತ್ತುಗಳಿಗೆ ಪಾಟಿ ಕಟ್ಟಲಿಕ್ಕೆ (ಜೋಳದ ಮೇವು) ಪ್ರಶಸ್ತವಾದ ದಿನ.

ರೈತರ ಬಹುದೊಡ್ಡ ಹಬ್ಬವಾದ ಎಳ್ಳಅಮವಾಸೆಯ ದಿನ ನೆಂಟರು, ಸ್ನೇಹಿತರು ಹಾಗೂ ಪರಿಚಿತರೊಂದಿಗೆ ಹೊಲದಲ್ಲಿ ಸೇರಿ ಊಟ ಮಾಡಿ ಆನಂದಿಸುವುದಷ್ಟೇ ವಿಶೇಷವಲ್ಲ. ಇದಕ್ಕೆ ಅದರದೇ ಆದ ಹಿನ್ನೆಲೆಗಳಿವೆ. ಹಿಂಗಾರಿನ ಫಸಲಾದ ಬಿಳಿ ಜೋಳ, ಬೆಳೆದು ನಿಂತಿರುತ್ತದೆ. ಹೀಗೆ ಬೆಳೆದು ನಿಂತ ಬಿಳಿ ಜೋಳದ ಹೊಲದಲ್ಲಿ ಐದು ಕಲ್ಲುಗಳನ್ನಿಟ್ಟು ಪೂಜೆ ಮಾಡಿ, ಹೊಲಕ್ಕೆ ಒಯ್ದಿದ್ದ ಚರಗದ ಬುತ್ತಿಯನ್ನು ನೈವೇದ್ಯ ಮಾಡಿ ಚರಗಾ ಚೆಲ್ಲುವರು.

**ಚರಗಾ ಚಲ್ಲುವ ವಿಧಾನ**

ಚರಗಾ ಚೆಲ್ಲುವಾಗ ಮುಂದಿನವರು ''ಹುಲ್ಲಿಲ್ಲೋ'' ಅಂದರೆ ಹಿಂದಿನವರು ''ಸಲಾಂಬ್ರಿಗೋ'' ಎನ್ನುವರು. ಇನ್ನು ಕೆಲವು ಕಡೆಗಳಲ್ಲಿ ಇದನ್ನೇ ಬೇರೆ ರೀತಿಯಾಗಿ ಹೇಳುವರು. ''ಜಾಗೆ ಬೋಲೋ ಕಿಚಿಡಿ ಬೋಲೋ'' ಮತ್ತು ''ಹುಲ್ಲಲ್ಲೋ ಚಲ್ಲ ಹುಲ್ಲಲ್ಲೋ'' ಎನ್ನುತ್ತಾ ಹೊಲದಲ್ಲಿ ನೈವೇದ್ಯ ಹಿಡಿದು ಚರಗ ಚೆಲ್ಲುವರು. ಇದರ ಅರ್ಥ ಬೆಳೆ ಹುಲುಸಾಗಿ ಬೆಳೆಯಲಿ ಎಂದು. ಈ ನಂಬಿಕೆ ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ಕಂಡುಬಂದರೆ, ದಕ್ಷಿಣ ಕರ್ನಾಟಕದ ಹಲವಾರು ಕಡೆಗಳಲ್ಲಿ ಈ ಚರಗ ಚೆಲ್ಲುವ ಆಚರಣೆಯು ಭಿನ್ನ. ಹೆಚ್ಚಾಗಿ ಮಾರಮ್ಮ ದೇವಿಯ ಹಬ್ಬದಂದು ಕೋಣನ ಬಲಿಕೊಟ್ಟು ಅದರ ರಕ್ತವನ್ನು ಬಾನ (ಬೋನ)ದಲ್ಲಿ ಮಿಶ್ರಿತಗೊಳಿಸಿ ಊರ ಸುತ್ತಲೂ ರಾತ್ರಿಯ ವೇಳೆಯಲ್ಲಿ ಮೌನದಿಂದ ಚರಗ ಚೆಲ್ಲುವರು. ಆ ಸಂದರ್ಭದಲ್ಲಿ ಗ್ರಾಮದ ಸುತ್ತಲೂ ಬೇಲಿ ಹಾಕಿ ಕಾವಲು ಇಡುವರು. ಏಕೆಂದರೆ, ಪರ ಗ್ರಾಮದವರು ಈ ಗ್ರಾಮದ ಒಳಗೆ ಪ್ರವೇಶ ಮಾಡುವಂತಿಲ್ಲ. ಒಂದು ವೇಳೆ ಬೇರೆ ಗ್ರಾಮದವರು ಬಂದು ಇದನ್ನು ತೆಗೆದುಕೊಂಡು ಹೋದರೆ ಈ ಗ್ರಾಮದ ಸಂಪತ್ತೆಲ್ಲವೂ ಬೇರೆ ಗ್ರಾಮಕ್ಕೆ ಹೋಗುತ್ತದೆ ಎಂಬ ಕಾರಣಕ್ಕಾಗಿ ಚರಗ ಚೆಲ್ಲಿದ ದಿನದಂದು ಗ್ರಾಮಕ್ಕೆ ಕಾವಲು ಇಡುವರು. ತಮ್ಮ ಗ್ರಾಮದ 'ಹುಲುಸು' ಬೇರೆ ಗ್ರಾಮಕ್ಕೆ ಹೋಗದಂತೆ ನೋಡಿಕೊಳ್ಳುವರು. ಈ ರೀತಿಯ ಆಚರಣೆಯು ಉತ್ತರ ಕರ್ನಾಟಕದಲ್ಲಿ ಹೋಳಿ ಹಬ್ಬದಂದು ಕಾಮನನ್ನು ಸುಡುವ ಸಂದರ್ಭದಲ್ಲಿ ಕಂಡುಬರುತ್ತದೆ. ಕಾಮನ ಸುಟ್ಟ ಬೆಂಕಿಯ ಒಂದು ತುಣುಕನ್ನು ಸಹ ಬೇರೆ ಗ್ರಾಮದವರು ತೆಗೆದುಕೊಂಡು ಹೋಗದಂತೆ ಕಾವಲು ಕಾಯುವ ಪದ್ಧತಿಯು ಈಗಲೂ ಕಂಡುಬರುತ್ತದೆ.

ಇಂಥ ಆಚರಣೆಗಳನ್ನು ಒಂದೊಂದಾಗಿ ಪರಿಗಣಿಸಿ ನೋಡಿದರೆ, ಜನಪದದ ಆಚರಣೆಯ ವಲಯವು ವಿಸ್ತಾರಗೊಳ್ಳುತ್ತಾ ಹೋಗುವುದು. ಆದ್ದರಿಂದ ಈ ಎಳ್ಳಅಮವಾಸೆಯ ಹಬ್ಬವು ವಿಶೇಷವಾಗಿ ಫಸಲಿನ ಸಂತೋಷದ ಹಬ್ಬವೇ ಆಗಿದೆ. ಹೀಗೆ ಇದಕ್ಕೆ ಮತ್ತೊಂದು ಐತಿಹಾಸಿಕ ಕಾರಣ ಇರಬಹುದು. ಅದೇನೆಂದರೆ, ಈ ಎಳ್ಳಅಮವಾಸೆ ಹಬ್ಬದ ಆಚರಣೆ ನೋಡಿದರೆ, ಪಾಂಡವರ ಸವಿನೆನಪಿಗಾಗಿ ಆಚರಿಸುವ ಆಚರಣೆ ಎಂದೂ ಕಂಡುಬರುತ್ತದೆ. ಏಕೆಂದರೆ, ಐದು ಕಲ್ಲುಗಳನ್ನಿಟ್ಟು ಪೂಜೆ ಮಾಡುವುದು ಪಾಂಡವರ ಸಂಕೇತ ಇರಬಹುದು. ಪಾಂಡವರು ವನವಾಸದಲ್ಲಿದ್ದಾಗ ಕ್ರೂರ ಪ್ರಾಣಿಗಳ ಭಯ ಅವರಿಗಿದ್ದಿರಬಹುದು. ಅದಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡಿ ಅದರ ಮಾಂಸವನ್ನು ತಾವು ವಾಸಿಸುತ್ತಿದ್ದ ಸ್ಥಳದ ಸುತ್ತಮುತ್ತಲು ಚೆಲ್ಲಿದರೆ ಇತರ ಪ್ರಾಣಿಗಳು ಮಾಂಸವನ್ನು ನೋಡಿ ತಮ್ಮನ್ನೂ ಹೀಗೇ ಕೊಲ್ಲುತ್ತಾರೆಂದು ಹೆದರಿ ಹಿಂತಿರುಗಿ ಹೋಗುತ್ತಿದ್ದವು ಎಂಬುದು ಈ ಆಚರಣೆಯ ಹಿಂದಿನ ನಂಬಿಕೆ ಇರಬೇಕು. ಕಿಟಲ್ ಕೋಶದಲ್ಲಿ ಇದೇ ಅರ್ಥ ಇದೆಯಾದರೂ 'ಚರಗ' ಎಂದರೆ ಮೂಲತಃ ಬಲಿ, ಆಹುತಿ ಎನ್ನುವ ಅರ್ಥವನ್ನು ಕೊಡಲಾಗುತ್ತದೆ. ಹೀಗೆ ಚರಗ ಎಂದರೆ, ಭೂಮಿತಾಯಿಯ ಪ್ರತೀಕ ಮತ್ತು ರೈತರು ಭೂಮಿತಾಯಿಗೆ ಸಲ್ಲಿಸುವ ಬುತ್ತಿಯ ರೂಪದ ಕಾಣಿಕೆ ಎಂದು ಹೇಳಲಾಗುತ್ತದೆ.

ಜನಪದ ಜೀವನಕ್ಕೆ ಸ್ಫೂರ್ತಿ ನೀಡಿ, ಆದರ್ಶ ಬಾಳಿಗೆ ಕಾರಣರಾದ ಸ್ತ್ರೀ ಪುರುಷರನ್ನೆ ದೇವರೆಂದು ಆರಾಧಿಸುವ ಸಂಪ್ರದಾಯಗಳು ನಮ್ಮಲ್ಲಿ ಹಾಸುಹೊಕ್ಕಾಗಿ ಬಂದಿವೆ. ಅಂಥವುಗಳಲ್ಲಿ ಹಳ್ಳಿಗರ ಜೀವನದಲ್ಲಿ ಹೆಚ್ಚು ಪ್ರಚಲಿತದಲ್ಲಿರುವ ಹಬ್ಬಗಳಲ್ಲಿ ಈ ಎಳ್ಳಅಮವಾಸೆ ಹಬ್ಬವೂ ಒಂದು. ಈ ಹಬ್ಬವು ಉತ್ತರ ಕರ್ನಾಟಕದಲ್ಲಿ ಗಮನಾರ್ಹವಾಗಿ ಕಂಡುಬರುತ್ತದೆ. ಆದರೆ ಧಾರವಾಡ, ಬೆಳಗಾವಿ ಮುಂತಾದೆಡೆ ಈ ಹಬ್ಬವನ್ನು ಸೀಗೆ ಹುಣ್ಣಿಮೆಯ ಸಂದರ್ಭದಲ್ಲಿ ಆಚರಿಸುವುದು ಕಂಡಬರುತ್ತದೆ.



ಹೀಗೆ ಜನಪದ ಸಂಪ್ರದಾಯಗಳು ಭಕ್ತಿ, ಶ್ರದ್ಧೆಗಳಿಂದ ನಡೆದುಕೊಂಡುಬಂದಿವೆ. ಅವು ಜನಪದರು ಕಾಲಕಾಲಕ್ಕೆ ಅವುಗಳನ್ನು ಆಚರಿಸಿ ಮುಂದಿನ ಪೀಳಿಗೆಗೆ ತಾವು ಕೊಡುವ 'ಬಾಜ' ಎಂಬಂತೆ ನಡೆದುಕೊಂಡು ಬಂದಿವೆ. ಅಂತೆಯೇ, ಈ ಸಂಪ್ರದಾಯಗಳ ಅರ್ಥ ನಮಗಿಂದು ಸಂಪೂರ್ಣವಾಗಿ ತಿಳಿದಿಲ್ಲ. ಆದರೂ ಅವು ಉಳಿದಿವೆ. ಈ ಸಂಪ್ರದಾಯಗಳು ಋತುಮಾನಕ್ಕನುಸಾರವಾಗಿ ನಮ್ಮ ಜನಪದರಲ್ಲಿ ಹಾಸುಹೊಕ್ಕಾಗಿ ಸಾಗಿಬಂದಿವೆ.

ಹಬ್ಬಗಳ ಆಚರಣೆಯಿಂದ ಹಳ್ಳಿಗರು ಇಹಪರಗಳ ಸಾರ್ಥಕ್ಯವನ್ನು ಕಂಡಿದ್ದಾರೆ. ನಾಗರಿಕ ಬದುಕಿನಲ್ಲಿ ಸಿಗದ ಸುಖ, ಸಂತೋಷ, ಸಹಜತೆಗಳನ್ನು ಸರಳವಾದ ಮಾರ್ಗದಲ್ಲಿ ಹಳ್ಳಿಗರು ಅನುಭವಿಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಹಬ್ಬಗಳು ಹಳ್ಳಿಗರ ಅಂಧಶ್ರದ್ಧೆ, ಅಜ್ಞಾನಗಳ ಕುರುಹುಗಳಾಗಿ ಕಂಡರೂ ಅವುಗಳಲ್ಲಿ ಅರ್ಥವಿಲ್ಲದೆ ಇಲ್ಲ. ಪ್ರತಿಯೊಂದು ನಂಬಿಕೆ, ಆಚರಣೆಗಳು ಕಾಲಕಾಲಕ್ಕೆ ಬದಲಾಗುತ್ತವೆ. ಹೊರ ರೂಪಕ್ಕಿಂತ ಅಂತಃಸತ್ವದ ಕಡೆಗೆ ಗಮನ ಹರಿಸಿದಾಗ ಹಳ್ಳಿಯ ಹಬ್ಬಗಳ ಉದ್ದೇಶ, ವ್ಯಾಪ್ತಿ ಸ್ಪಷ್ಟವಾಗುತ್ತವೆ. ಕಾಲಕ್ಕೆ ತಕ್ಕಂತೆ ಸೂಕ್ತ ಬದಲಾವಣೆ ಮಾಡಿ, ಮೂಲ ಸತ್ವವನ್ನೂ ಉಳಿಸಿ, ಹಬ್ಬಗಳ ಆಚರಣೆಯನ್ನು ಊರ್ಜಿತಗೊಳಿಸುವುದು ಇಂದಿನ ಅಗತ್ಯವಾಗಿದೆ. ಹಳ್ಳಿ ಪಟ್ಟಣಗಳ ಸಂಸ್ಕೃತಿಯು, ಜನಪದ ಜೀವಾಳವಾಗಿರುವ ಹಬ್ಬಗಳು ಲೌಕಿಕ ಸುಖ-ಶಾಂತಿಯನ್ನು ಪಾರಮಾರ್ಥಿಕ ಬೆಳಕಿಂಡಿಯನ್ನು ಕಾಣಿಸುವ ಭಾಗ್ಯದ ಬಾಗಿಲುಗಳಾಗಿವೆ. ಹಳ್ಳಿಯ ನೈಜ ಬದುಕಿನ ಅನಾವರಣಗೊಳಿಸುವ ವಿಶಿಷ್ಟ ಸಂಪ್ರದಾಯಗಳಾಗಿವೆ.

ರೈತರ ಇಂತಹ ದಟ್ಟ ಪ್ರತಿಭೆಯನ್ನು ಕಂಡರಿಸಲು ಜನಪದ ಸಾಹಿತ್ಯದಲ್ಲಿ ಮೂಡಿ ಬರುವ ಕೆಲವು ಉದಾಹರಣೆಗಳನ್ನು ಸಮೀಕ್ಷಿಸಬಹುದು :

*ಬೆಳಗಾಗಿ ನಾನೆದ್ದು ಯಾರ್‍ಯಾರ ನೆನಿಯಲಿ*
*ಎಳ್ಳು ಜೀರಿಗೆ ಬೆಳಿಯೋಳ । ಭೂ ತಾಯಿ*
*ಎದ್ದೊಂದು ಅರಗಳಿಗೆ ನೆನದೇನ ॥*

ಹೀಗೆ ಮಣ್ಣನ್ನು ಸರ್ವಸ್ವವೆಂದು ನಂಬಿರುವ ಜನಪದ ಮಹಿಳೆಗೆ ''ಎದ್ದೊಂದು ಗಳಿಗೆ ನೆನದೇನು'' ಎನ್ನುವಷ್ಟು ಭಕ್ತಿ ತಾಯಿಯ ಬಗ್ಗೆ ಇದೆ. ಹಾಗೆಯೇ ಪ್ರಕೃತಿಯ ಘಟನೆಗಳನ್ನು ಕಂಡಾಗ ಕೂಡ ಇಂತಹ ಉದಾಹರಣೆಗಳನ್ನು ಕಾಣಬಹುದು :

*ಆಕಾಶದಡವ್ಯಾಗ ಧೂಪದ ಹೊಗೆಯೆದ್ದು*
*ಆಯ್ತು ಮಲ್ಲಯ್ಯನ ಶಿವಪೂಜೆ । ಆಗಾಗ*
*ಆಕಾಶದ ಘಂಟೆ ಘಳಲೆಂದು ।*
*ಶಿವ ಶಿವ ಅಂದರ ಶಿಡಿಲೆಲ್ಲ ಬಯಲಾಗಿ*
*ಕಲ್ಲು ಬಂದೆರಗಿ ಕಡಿಗಾಗಿ । ಎಲೆ ಮನವೆ*
*ಶಿವನೆಂಬ ಶಬುದ ಬಿಡಬ್ಯಾಡ ।*

ಇಲ್ಲಿ ಹೀಗೆ ಶಿವಪೂಜೆಯ ಸಂದರ್ಭದಲ್ಲಿ ಕ್ರಿಯೆಗಳಿಗೂ ಮಳೆ ಬೀಳುವ ಮೊದಲು ಆಕಾಶದಲ್ಲುಂಟಾಗುವ ಕ್ರಿಯೆಗಳಿಗೂ ಸಂಬಂಧವನ್ನು ಕಲ್ಪಿಸುವರು. ಹೀಗೆ ಯೋಚಿಸಿದಂತೆಲ್ಲಾ ಹಾಡುಗಳ ಅರ್ಥವ್ಯಾಪ್ತಿ ಹೆಚ್ಚುತ್ತಾ ಹೋಗುತ್ತದೆ.

ಒಟ್ಟಿನಲ್ಲಿ ಹಬ್ಬಗಳು ಗ್ರಾಮೀಣ ಜೀವನದ ಸಾಂಸ್ಕೃತಿಕ ಪ್ರೇರಣೆಗಳೇ ಅಲ್ಲದೆ ಜಾನಪದರ ರಸಿಕತೆಗೂ ಕಲಾಭಿಜ್ಞತೆಗೂ ಹಿಡಿದ ಕನ್ನಡಿ ಎಂದು ಧಾರಾಳವಾಗಿ ಹೇಳಬಹುದು.

**ಎಚ್. ಬಿ. ನಡುವಿನಕೇರಿ**
ಸಂಶೋಧನಾ ವಿದ್ಯಾರ್ಥಿ, ಜಾನಪದ ಅಧ್ಯಯನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

# ಬಸವಣ್ಣ ಮತ್ತು ಲೋಹಿಯಾ





ಡಾ॥ ದಸ್ತಗೀರ್‌ಸಾಬ್ ದಿನ್ನಿ

ಹನ್ನೆರಡನೆಯ ಶತಮಾನದ ಬಸವಣ್ಣ ಮತ್ತು ಇಪ್ಪತ್ತನೆಯ ಶತಮಾನದ ಲೋಹಿಯಾ ಸಮಾಜದ ಎರಡು ಅನುಪಮ ಕಣ್ಣುಗಳು. ಅವರೀರ್ವರ ಜೀವಿತ ಕಾಲದ ಅಂತರ ಶತಮಾನಗಳದ್ದಾಗಿದ್ದರೂ ಅವರು ಕಂಡುಂಡ ಭಾರತದ ಸಾಮಾಜಿಕ ವ್ಯವಸ್ಥೆ ಒಂದೇ ತೆರನಾಗಿತ್ತು ಎನ್ನುವುದೂ ಅಷ್ಟೇ ಸತ್ಯ. ಬಸವಣ್ಣನವರು ಮಾದರಸ ಮಾದಲಾಂಬಿಕೆಯ ಮಗನಾಗಿ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದರು. ವರ್ಣಾಶ್ರಮ ಪದ್ಧತಿಯ ಕಾಲಘಟ್ಟವದು. ಬಾಲ್ಯದಲ್ಲಿಯೇ ಜನಿವಾರವನ್ನು ಕಿತ್ತೊಗೆದು ವೈದಿಕ ಸಂಸ್ಕೃತಿಯನ್ನು ವಿರೋಧಿಸಿ ಹೊರಬಂದ ಬಸವಣ್ಣನವರು ತಮ್ಮ ಕ್ರಾಂತಿಕಾರಕ ಮನೋಭಾವದಿಂದಾಗಿ ಎಲ್ಲರನ್ನು ದಂಗುಬಡಿಸಿದರು.

ಡಾ॥ ರಾಮ ಮನೋಹರ ಲೋಹಿಯಾ ೧೯೧೦ರ ಮಾರ್ಚ್ ೨೩ರಂದು ಹೀರಾಲಾಲ್ ಶ್ಯಾಮಾ ದಂಪತಿಗಳಿಗೆ ಒಬ್ಬನೇ ಮಗನಾಗಿ ಉತ್ತರ ಪ್ರದೇಶದ ಅಕ್ಬರಪುರ ಎಂಬ ಹಳ್ಳಿಯಲ್ಲಿ ಜನಿಸಿದರು. ಮಗುವಾಗಿದ್ದಾಗಲೇ ತಾಯಿಯನ್ನು ಕಳೆದುಕೊಂಡ ಲೋಹಿಯಾ ಅಜ್ಜಿಯ ಪ್ರೀತಿ ಮಮತೆಯನ್ನು ಉಂಡು ತಮಸಾ ನದಿಯ ತೀರದಲ್ಲಿ ಬೆಳೆದರು. ಬಾಲ್ಯದಲ್ಲಿರುವಾಗಲೇ ತಂದೆಯೊಂದಿಗೆ ಕಾಂಗ್ರೆಸ್ ಅಧಿವೇಶನ ನೋಡಲು ಹೊರಟರು. ಅಲ್ಲಿ ಎಂ. ಎನ್. ರಾಯ್ ಅವರ ಮೂಲಕ 'ಸಮಾಜವಾದ' ಎಂಬ ಪದ ಇವರ ಕಿವಿಗೆ ಬಿತ್ತು. ಅದೇ ಸಂದರ್ಭದಲ್ಲಿ ಲೋಕಮಾನ್ಯ ಬಾಲ ಗಂಗಾಧರ ತಿಲಕರು ತೀರಿಕೊಂಡರು. ಆಗ ಇಡೀ ನಾಡು ದುಃಖಸಾಗರದಲ್ಲಿ ಮುಳುಗಿತ್ತು. ಇದು ಲೋಹಿಯಾರ ವ್ಯಕ್ತಿತ್ವದ ಮೇಲೆ ಗಾಢವಾದ ಪ್ರಭಾವ ಬೀರಿತು. ಬಾಲಕ ಲೋಹಿಯಾರಿಗೆ ಏನನಿಸಿತೋ ಏನೋ ಶಾಲೆಯನ್ನು ಬಂದ್ ಮಾಡಿಸಿ ತನ್ನ ಸಹಪಾಠಿಗಳನ್ನೆಲ್ಲ ತಿಲಕರ ಅಂತ್ಯಕ್ರಿಯೆ ನಡೆವ ಸ್ಥಳಕ್ಕೆ ಕರೆದುಕೊಂಡು ಹೋದರು. ಆಗಲೇ ರಾಜಕೀಯ ಬದುಕಿನೆಡೆಗಿನ ಆಸೆಗೆ ಹೊಸ ರೆಕ್ಕೆ ಪುಕ್ಕಗಳು ಮೂಡಿದವು.

ಬಸವಣ್ಣನವರು ಬಿಜ್ಜಳನ ರಾಜ್ಯಭಾರದಲ್ಲಿ ಮಂತ್ರಿಯಾಗಿದ್ದುಕೊಂಡು ಮೌಲಿಕ ಕೆಲಸವನ್ನು ಮಾಡುತ್ತಲೇ ಅದನ್ನು ಕಲ್ಯಾಣರಾಜ್ಯವನ್ನಾಗಿ ಪರಿವರ್ತಿಸಿದರು. ಆಗ ಬಸವಣ್ಣನರ ವ್ಯಕ್ತಿತ್ವ ಸೂಜಿಗಲ್ಲಿನಂತೆ ಎಲ್ಲರನ್ನು ಸೆಳೆಯಿತು. ರಾಜನ ಆಸ್ಥಾನದಲ್ಲಿ ಕೆಲವರು ಸೋಮಾರಿಗಳಿದ್ದರು. ಶ್ರಮಸಂಸ್ಕೃತಿಗೆ ಮೋಸವೆಸಗಿ ಹಣ ಪಡೆಯುತ್ತಿದ್ದರು. ಇದನ್ನು ಗಮನಿಸಿದ ಬಸವಣ್ಣನವರು ಅವರಿಗೆ ದುಡಿದು ಉಣ್ಣುವುದನ್ನು ಕಲಿಸಿಕೊಡುತ್ತಲೇ ಕಾಯಕದ ಮಹತ್ವವನ್ನು ಅರುಹಿದರು. ಆ ಮೂಲಕ ಕಾಯಕಪ್ರಜ್ಞೆಯನ್ನು ಎತ್ತಿಹಿಡಿದರು. ಡಾ॥ ರಾಮ ಮನೋಹರ ಲೋಹಿಯಾ ಅವರು ಕೂಡ ಸಮಾಜದಲ್ಲಿ ಶ್ರಮದ ಮೌಲ್ಯವನ್ನು ಎತ್ತಿಹಿಡಿದರು. ಲೋಹಿಯಾರಿಗೆ ಈ ತೆರನಾದ ಚಿಂತನೆಗೆ ಮೂಲ ಪ್ರೇರಣೆಯೆಂದರೆ ರೂಸೋ, ಸ್ಯಾಂ ಸಿಮೋ, ಶಾರ್ಲ್ ಫೂರಿಯೆ ಮುಂತಾದವರ ವಾದಗಳೇ ಆಗಿದ್ದವು. ಆಗ ಲೋಹಿಯಾ ಅವರು ಊಳಿಗಮಾನ್ಯ ಪದ್ಧತಿ, ಬಂಡವಾಳಶಾಹಿ ವ್ಯವಸ್ಥೆ, ಭೂಮಾಲಿಕತ್ವಗಳ ವಿರುದ್ಧ ದನಿ ಎತ್ತಿದರು. ಇವೆಲ್ಲ ಮೂಲೆಗುಂಪಾಗಿ ದುಡಿತಕ್ಕೆ ತಕ್ಕ ಪ್ರತಿಫಲ ಸಿಗಬೇಕು ಎಂದು ಜನರನ್ನು ಆ ದಿಶೆಯಲ್ಲಿ ಹೋರಾಟಕ್ಕೆ ಅಣಿಗೊಳಿಸಿದರು. ''ಭೂಮಿ ಮತ್ತು ಕೂಲಿಕಾರ್ಮಿಕನ ನಡುವೆ ಬೆಚ್ಚನೆಯ ಸಂಬಂಧವೇರ್ಪಡಬೇಕು. ಆಗ ಮಾತ್ರ ಒಳ್ಳೆಯ ಸಮಾನತೆಯ ಸಮಾಜ ಕಾಣಸಿಗಲು ಸಾಧ್ಯ'' ಎಂಬುದು ಲೋಹಿಯಾರ ಬಲವಾದ ತತ್ವ ಸಿದ್ಧಾಂತವಾಗಿತ್ತು. ಭೂಮಿ ಇದ್ದವರಿಗೆ ಮಾತ್ರ ಮತ ಚಲಾಯಿಸುವ ಹಕ್ಕಿದೆ ಎನ್ನುವುದನ್ನು ಲೋಹಿಯಾ ಇಡಿಯಾಗಿ ತಳ್ಳಿಹಾಕಿದರು. ಅನ್ಯಾಯ, ಅಸಮಾನತೆಗಳನ್ನು ಕಂಡರೆ ಲೋಹಿಯಾರ ಮನಸ್ಸು ತಳಮಳಕ್ಕೀಡಾಗುತ್ತಿತ್ತು.

ಬಸವಣ್ಣ ಜಾತಿ ವ್ಯವಸ್ಥೆ, ಮೂಢನಂಬಿಕೆ, ಗೊಡ್ಡು ಸಂಪ್ರದಾಯ, ಅಂಧಶ್ರದ್ಧೆಗಳನ್ನು ಹೊಡೆದೋಡಿಸಲು ಪ್ರಯತ್ನಿಸಿದರು. ಧರ್ಮದ ಹೆಸರಿನಲ್ಲಿ ಜನರನ್ನು ಶೋಷಣೆ ಮಾಡುವ ಕಂಟಕ ಪ್ರವೃತ್ತಿ ಅಂದು ಹೇರಳವಾಗಿತ್ತು. ಇಂತಹ ಅಮಾನುಷ ಕ್ರೂರಪದ್ಧತಿಯ ವಿರುದ್ಧ ಬಸವಣ್ಣ ಅವಿರತವಾಗಿ ಹೋರಾಟವನ್ನು ಕೈಗೊಂಡರು. ಜನರಲ್ಲಿ ಮುಖ್ಯವಾಗಿ ಆತ್ಮವಿಶ್ವಾಸವನ್ನು ತುಂಬುವ, ಹೋರಾಟದ ಪ್ರಜ್ಞೆಯನ್ನು ಮೂಡಿಸುವ ಕೆಲಸವನ್ನು ಅವರು ಮಾಡಿದರು. ಬಾಯಿ ಇದ್ದು ಮೂಕರಾದವರಿಗೆ ದನಿಯನ್ನು ಕೊಟ್ಟ ಶ್ರೇಯಸ್ಸು ಬಸವಣ್ಣನವರಿಗೆ ಸಲ್ಲುತ್ತದೆ. ವರ್ಣ, ಜಾತಿ, ಲಿಂಗತಾರತಮ್ಯಗಳನ್ನು ಲೋಹಿಯಾ ಅವರು ಕೂಡ ಒಪ್ಪುತ್ತಿರಲಿಲ್ಲ. ಮನುಷ್ಯನನ್ನು ಮನುಷ್ಯನನ್ನಾಗಿ ನೋಡಬೇಕೆನ್ನುವ ವಿಶಾಲ ಮನೋಭಾವ ಅವರದಾಗಿತ್ತು. ವಿದ್ಯಾರ್ಥಿ ಜೀವನದಿಂದಲೇ ಹೋರಾಟದ ಮನೋಭಾವನೆಯನ್ನು ಮೈಗೂಡಿಸಿಕೊಂಡು ಬೆಳೆದ ಲೋಹಿಯಾರವರು ಅಸಮಾನತೆಯಿಂದ ಕೂಡಿದ ವ್ಯವಸ್ಥೆಯ ವಿರುದ್ಧ ಸಿಡಿದೇಳುತ್ತಿದ್ದರು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಮಾನತೆ ಎನ್ನುವುದು ಮನುಷ್ಯನ ಅಸ್ತಿತ್ವವಾಗಬೇಕೆಂದು ಬಯಸಿದ್ದರು. ಲೋಹಿಯಾ ಅಂದಿನ ಸಮಾಜದಲ್ಲಿ ಯಾರಿಗೆ ದೇವಾಲಯ ಪ್ರವೇಶ ಇರಲಿಲ್ಲವೋ ಅಂಥವರಿಗೆ ದೇವಾಲಯ ಪ್ರವೇಶವನ್ನು ಮಾಡಿಸಿಕೊಟ್ಟರು.

ತಲೆಕೆಳಗಾದ ಮೌಲ್ಯಗಳು, ತತ್ವರಹಿತ ಸಾಮಾಜಿಕ ಸನ್ನಿವೇಶ, ಸೂತ್ರಹರಿದ ಗಾಳಿಪಟವಾಗಿರುವ ಇಂದಿನ ರಾಜಕೀಯ ಸನ್ನಿವೇಶಕ್ಕೆ ಇವರೀರ್ವರ ವಿಚಾರಗಳು ಖಂಡಿತ ದಿಕ್ಸೂಚಿಯಾಗಬಲ್ಲವು, ಹೊಸ ಆಯಾಮವನ್ನು ಒದಗಿಸಬಲ್ಲವು. ಜಾಗತೀಕರಣದ ಈ ಹೊತ್ತಿನಲ್ಲಿ ನಮ್ಮ ಸಾಮಾಜಿಕ ವ್ಯವಸ್ಥೆಯು ಕಂಡರಿಯದ ಅನೇಕ ಅಶಾಂತಿ, ಕ್ಷೋಭೆ, ತಲ್ಲಣಗಳಿಗೀಡಾಗಿ ನೆಮ್ಮದಿಯನ್ನು ಕಳೆದುಕೊಂಡು ತತ್ತರಿಸುತ್ತಿದೆ. ಇಂತಹ ಪ್ರಕ್ಷುಬ್ಧ ಸಂದರ್ಭಕ್ಕೆ ಇವರೀರ್ವರ ವಿಚಾರ ಚಿಂತನೆಯ ಗಾಳಿ-ಬೆಳಕು ತುಂಬಾ ಅಗತ್ಯ ಮತ್ತು ಪ್ರಸ್ತುತವೂ ಹೌದು.

ಬಿಜ್ಜಳ ರಾಜ ಪ್ರಜೆಗಳು ಹೊತ್ತುಕೊಂಡು ಬರುತ್ತಿದ್ದ ಅಹವಾಲುಗಳನ್ನು ಸ್ವೀಕರಿಸುತ್ತಿದ್ದನೇ ಹೊರತು ಕಾರ್ಯರೂಪಕ್ಕೆ ತರುತ್ತಿರಲಿಲ್ಲ. ಅದು ಆತನ ಜಾಯಮಾನವೂ ಆಗಿರಲಿಲ್ಲ. ಬಿಜ್ಜಳನ ಈ ಜನವಿರೋಧಿ ಧೋರಣೆಯೇ ಭಕ್ತಿ ಭಂಡಾರಿ ಬಸವಣ್ಣ ರಾಜೀನಾಮೆ ಕೊಟ್ಟು ಹೊರಬರಲು ಮುಖ್ಯ ಕಾರಣವಾಯಿತು. ದುಡಿವ ವರ್ಗದ ದನಿಯಾಗಿದ್ದ ಜನಪರ ಚಿಂತನೆಯನ್ನೇ ಉಸಿರಾಗಿಸಿಕೊಂಡಿದ್ದ ಬಸವಣ್ಣ ಜನರೊಂದಿಗೆ ಬೆರೆತರು. ಎಲ್ಲರನ್ನು ಅನುಭವ ಮಂಟಪದ ಮೂಲಕ ಹತ್ತಿರವಾಗಿಸಿದರು.

ಲೋಹಿಯಾ ಅವರು ಗಾಂಧೀಜಿಯವರ ವ್ಯಕ್ತಿತ್ವಕ್ಕೆ ಮಾರುಹೋಗಿ ಅವರ ಸಿದ್ಧಾಂತದಲ್ಲಿ ನಂಬಿಕೆಯಿಟ್ಟು ಅವರ ಅನುಯಾಯಿಗಳಾದರು. ಆದರೂ ಲೋಹಿಯಾ ಕೆಲವೊಂದು ವಿಷಯಗಳಲ್ಲಿ ವಿಭಿನ್ನವಾದ ತಮ್ಮದೇ ನಿಲುವನ್ನು ತಾಳಿಕೊಂಡು ಎತ್ತರಕ್ಕೆ ಬೆಳೆದದ್ದು ಕಂಡುಬರುತ್ತದೆ. ಮಹಾತ್ಮಾ ಗಾಂಧೀಜಿಯವರೊಂದಿಗೆ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡು ಸೆರೆಮನೆಯ ರುಚಿಯನ್ನು ಕಂಡಿದ್ದಲ್ಲದೆ ಅದೆಷ್ಟೋ ಸಲ ಮತ್ತೆ ಮತ್ತೆ ಆ ರುಚಿಯನ್ನು ಅನುಭವಿಸಿದ್ದರು. ೧೯೩೪ರಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷ ಸ್ಥಾಪನೆಯಾಗಲಿಕ್ಕೆ ಲೋಹಿಯಾ ಅವರು ಪ್ರಮುಖ ಕಾರಣರು. ಪಕ್ಷದ ಸಂಘಟನೆಯನ್ನು ಬಲಪಡಿಸಲು ಅದನ್ನು ಇನ್ನಷ್ಟು ತೀವ್ರವಾಗಿ ಜನಪರಗೊಳಿಸಲು ಅವರು ಇಟ್ಟ ಹೆಜ್ಜೆಗಳು ಅಸಾಧಾರಣವಾದುವು. ತಮ್ಮ ಕ್ರಿಯಾಶೀಲ ವ್ಯಕ್ತಿತ್ವದಿಂದಾಗಿಯೇ ಅವರು ಬೇಗ ಭಾರತ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ವಿದೇಶಾಂಗ ವ್ಯವಹಾರ ವಿಭಾಗದ ಕಾರ್ಯದರ್ಶಿಯಾಗಲು ಸಾಧ್ಯವಾಯಿತು. ಅವರನ್ನು ಹತ್ತಿರದಿಂದ ಬಲ್ಲವರೇ, ಕಾಂಗ್ರೆಸ್ ಸಮಾಜವಾದಿ ಪಕ್ಷದಲ್ಲಿದ್ದವರೇ ಅವರ ಬೆಳವಣಿಗೆಯನ್ನು ಸಹಿಸದಾದರು. ಒಳಗೊಳಗೆ ಕಿಡಿಕಾರಲು ಪ್ರಯತ್ನಿಸಿದರು. ಲೋಹಿಯಾರಿಗೆ ಇದ್ಯಾವುದು ಸುಲಭವಾಗಿ ಅರ್ಥವಾಗುತ್ತಿರಲಿಲ್ಲ ಎಂದೇನಲ್ಲ. ಆದರೂ ರಾಮ ಮನೋಹರ ಲೋಹಿಯಾ ಕನಸು ಕಂಡಿದ್ದು ಈ ದೇಶದ ಬಡಜನತೆಯ ಬಗೆಗೆ, ಹೊಸ ಸಾಮಾಜಿಕ ವ್ಯವಸ್ಥೆಯ ಬಗೆಗೆ. ಹೀಗಾಗಿ ಅವರು ಎಂದೂ ಯಾರನ್ನೂ ಎದುರುಹಾಕಿಕೊಳ್ಳಲು ಮನಸ್ಸು ಮಾಡಲಿಲ್ಲ. ಕಾಂಗ್ರೆಸ್‌ನಲ್ಲಿ ದೊಡ್ಡ ದೊಡ್ಡ ನಾಯಕರಿದ್ದರು. ಆದರೆ ಲೋಹಿಯಾ, ಅವರಷ್ಟು ಮಿಂಚದೆ ತಮ್ಮ ಕಾಯಕದಲ್ಲಿ ಮಗ್ನರಾಗಿ ನಾಯಕತ್ವ ನೀಡಿದ್ದರು.

ಡಾ॥ ರಾಮ ಮನೋಹರ ಲೋಹಿಯಾ ಅಧಿಕಾರ ವಿಕೇಂದ್ರೀಕರಣಕ್ಕೆ ಮಹತ್ವ ಕೊಡುತ್ತಲೇ ಆ ಮೂಲಕ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಗಟ್ಟಿಗೊಳಿಸಲು ಯತ್ನಿಸಿದರು. ಬಸವಣ್ಣನವರಲ್ಲಿ ಕೂಡ ಈ ಬಗೆಯ ಗ್ರಹಿಕೆಗಳಿದ್ದವು. ಬಸವಣ್ಣನವರು ಸ್ತ್ರೀಯರಿಗೂ ಒಂದು ವ್ಯಕ್ತಿತ್ವವಿದೆ, ಮನಸ್ಸಿದೆ ಎನ್ನುವುದನ್ನು ಅರ್ಥಮಾಡಿಕೊಂಡು ಮಹಿಳೆಯರಿಗೆ ವಿಶೇಷವಾದ ಸ್ಥಾನಮಾನವನ್ನು ಕಲ್ಪಿಸಿಕೊಟ್ಟು ವಚನ ಮಾಧ್ಯಮದ ಮೂಲಕ ತಮ್ಮ ಸಂವೇದನೆಗಳನ್ನು ಹೊರಹಾಕಲು ಅನುಭವ ಮಂಟಪದಂತಹ ವೇದಿಕೆಯನ್ನು ಕಲ್ಪಿಸಿಕೊಟ್ಟರು. ಲೋಹಿಯಾ ಅವರಿಗೂ ಮಹಿಳೆಯರ ಬಗೆಗೆ ಗೌರವಾದರಗಳಿದ್ದವು. ಮಹಿಳೆ ಶಿಕ್ಷಣದಿಂದ ವಂಚಿತಳಾಗದೆ ಬದುಕಿನಲ್ಲಿ ಬರುವ ಸಮಸ್ಯೆಗಳನ್ನು ಸವಾಲಾಗಿ ಸ್ವೀಕರಿಸಿ ಧೈರ್ಯದಿಂದ ಎದುರಿಸಬೇಕೆಂದು ನಂಬಿದ್ದರು.

ಅಂದಿನ ದಿನಗಳಲ್ಲಿ ದೇವರು ಧರ್ಮದ ಹೆಸರಿನಲ್ಲಿ ಪ್ರಾಣಿಬಲಿ ಜಾಸ್ತಿ ನಡೆಯುತ್ತಿತ್ತು. ಇದನ್ನು ತೀವ್ರವಾಗಿ ಖಂಡಿಸಿದ ಬಸವಣ್ಣನವರು ಅಹಿಂಸೆಗೆ ಆದ್ಯತೆ ನೀಡಿದರು. 'ದಯವಿಲ್ಲದ ಧರ್ಮ ಅದಾವುದಯ್ಯ', 'ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವವನೇ ಶರಣ' ಎನ್ನುವ ವಚನದ ಸಾಲುಗಳು ಅವರ ಚಿಂತನೆಗಳನ್ನು ಸಾಬೀತುಪಡಿಸುತ್ತವೆ. ಲೋಹಿಯಾ ಅವರು ಗಾಂಧೀಜಿಯ ಅನುಯಾಯಿಯಾಗಿದ್ದರಿಂದ ಅವರ ಅಹಿಂಸಾತತ್ವವನ್ನು ಕೂಡ ಇವರು ಗೌರವಿಸಿದ್ದರು. ಅಹಿಂಸೆಯಿಂದ ಮಾತ್ರ ನಾವು ಒಳ್ಳೆಯ ನಾಡನ್ನು ಕಟ್ಟಲು ಸಾಧ್ಯ ಎಂಬ ನಿಲುವು ಇವರದಾಗಿತ್ತು.

ಬಸವಣ್ಣ ಮತ್ತು ಲೋಹಿಯಾ ಇಬ್ಬರದೂ ಅಸಾಧಾರಣ ವ್ಯಕ್ತಿತ್ವ. ಅವರ ಜೀವನವಿಧಾನ ಮತ್ತು ಹೋರಾಟಸಿದ್ಧಾಂತ ಸಾಮಾಜಿಕ ನೆಲೆಗಟ್ಟಿನ ಮೇಲೆ ನಿಂತಿತ್ತು. ಅದು ಜೀವಪರ-ಜನಪರ ಧೋರಣೆಯಿಂದ ಕೂಡಿದುದಾಗಿತ್ತು ಎನ್ನುವುದು ಗಮನಾರ್ಹ. ಅವರ ಬದುಕು ಮತ್ತು ಸಾಮಾಜಿಕ ಚಿಂತನೆಗಳಲ್ಲಿ ಅನೇಕ ಸಾಮ್ಯತೆಗಳನ್ನು ಕಾಣಬಹುದು. ತಲೆಕೆಳಗಾದ ಮೌಲ್ಯಗಳು, ತತ್ವರಹಿತ ಸಾಮಾಜಿಕ ಸನ್ನಿವೇಶ, ಸೂತ್ರಹರಿದ ಗಾಳಿಪಟವಾಗಿರುವ ಇಂದಿನ ರಾಜಕೀಯ ಸನ್ನಿವೇಶಕ್ಕೆ ಇವರೀರ್ವರ ವಿಚಾರಗಳು ಖಂಡಿತ ದಿಕ್ಸೂಚಿಯಾಗಬಲ್ಲವು, ಹೊಸ ಆಯಾಮವನ್ನು ಒದಗಿಸಬಲ್ಲವು. ಜಾಗತೀಕರಣದ ಈ ಹೊತ್ತಿನಲ್ಲಿ ನಮ್ಮ ಸಾಮಾಜಿಕ ವ್ಯವಸ್ಥೆಯು ಕಂಡರಿಯದ ಅನೇಕ ಅಶಾಂತಿ, ಕ್ಷೋಭೆ, ತಲ್ಲಣಗಳಿಗೀಡಾಗಿ ನೆಮ್ಮದಿಯನ್ನು ಕಳೆದುಕೊಂಡು ತತ್ತರಿಸುತ್ತಿದೆ. ಇಂತಹ ಪ್ರಕ್ಷುಬ್ಧ ಸಂದರ್ಭಕ್ಕೆ ಇವರೀರ್ವರ ವಿಚಾರ ಚಿಂತನೆಯ ಗಾಳಿ-ಬೆಳಕು ತುಂಬಾ ಅಗತ್ಯ ಮತ್ತು ಪ್ರಸ್ತುತವೂ ಹೌದು.

ಡಾ॥ ದಸ್ತಗೀರ್‌ಸಾಬ್ ದಿನ್ನಿ
೪-೪-೫೭೮/೧, ಜಹೀರಾಬಾದ, ರಾಯಚೂರು

## ಹೊಸ ಪುಸ್ತಕ

**ಹರಿಶ್ಚಂದ್ರ ಚಾರಿತ್ರ : ಸತ್ಯದ ತೊಡಕು**
ಡಾ॥ ಬಿ. ಎಂ. ಪುಟ್ಟಯ್ಯ
ಪುಟ : ೪೦ ಬೆಲೆ : ರೂ. ೨೦
ಅನುಭವ ಪ್ರಕಾಶನ, ಎಂ. ಪಿ. ಪ್ರಕಾಶ್‌ನಗರ, ಹೊಸಪೇಟೆ

**ಅಲೆಮಾರಿಯ ಕಥೆಗಳು** (ಕಥಾಸಂಕಲನ) ಪ್ರೇಮಶೇಖರ
ಪುಟ : ೧೭೬ ಬೆಲೆ : ೯೦
ಹೇಮಂತ ಸಾಹಿತ್ಯ, ೯೭೨-ಸಿ, ೪ನೇ 'ಇ' ವಿಭಾಗ, ೧೦-ಎ ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೧೦

**ದೂರದ ಪದ** (ಕವಿತಾ ಸಂಕಲನ) ಮಹಾಂತಪ್ಪ ನಂದೂರ
ಪುಟ : ೧೦೮ ಬೆಲೆ : ರೂ. ೭೫
ಮೇಘ ಪಬ್ಲಿಕೇಷನ್ಸ್, ನಂ. ೪೧೯, ಡಿ. ನಂ. ೧೧೯, ೪ನೇ ಕ್ರಾಸ್, ರಾಜಗೋಪಾಲ ನಗರ, ಬೆಂಗಳೂರು - ೫೮

**ಆಯಿತಾರ ಅಮಾಸಿ** (ಕಥಾಸಂಕಲನ) ಮಹಾಂತಪ್ಪ ನಂದೂರ
ಪುಟ : ೧೦೦ ಬೆಲೆ : ರೂ. ೭೫
ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು, ಮುಖ್ಯರಸ್ತೆ, ಗುಲಬರ್ಗಾ - ೫೮೫ ೧೦೧

**ಡಾ॥ ಆ. ನೇ. ಉಪಾಧ್ಯೆ** (ಪರಿಚಯ)
ಡಾ॥ ಪ್ರೀತಿ ಶುಭಚಂದ್ರ
ಪುಟ : ೨೮ ಬೆಲೆ : ರೂ. ೫
ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು - ೬

**ಭಾಮಿನಿ ಷಟ್ಪದಿ** (ಅಂಕಣ ಕಾದಂಬರಿ) ಚೇತನಾ ತೀರ್ಥಹಳ್ಳಿ
ಪುಟ : ೮೨ ಬೆಲೆ : ರೂ. ೫೦
ಮೇಫ್ಲವರ್ ಮೀಡಿಯಾ ಹೌಸ್, ೧, ಯಮುನಾಬಾಯಿ ರಸ್ತೆ, ಯೂನಿಟ್ ೫, ಮಾಧವನಗರ, ಬೆಂಗಳೂರು - ೧

**ನಕ್ಷತ್ರಗಳು** (ಕವನ ಸಂಕಲನ) ಸಂ.: ವಿದ್ಯಾಧರ ಮುತಾಲಿಕ ದೇಸಾಯಿ, ಗುರುಸಿದ್ಧಯ್ಯ ಸ್ವಾಮಿ
ಪುಟ : ೯೦ ಬೆಲೆ : ರೂ. ೬೦
ನಮ್ಮ ಬಳಗ, ಕರಜಗಿ ತಾ. ಅಕ್ಕಲಕೋಟ. ಜಿ. ಸೊಲ್ಲಾಪುರ

**ಕಾವ್ಯ ವಿಚಾರ ಚರ್ಚೆ** ಸಿ.ಪಿ.ಕೆ.
ಪುಟ : ೨೦೦ ಬೆಲೆ : ರೂ. ೧೫೦
ಅಖಿಲಾ ಏಜೆನ್ಸೀಸ್, ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮಿ ಟಾಕೀಸ್ ಹಿಂಭಾಗ, ಮೈಸೂರು - ೫೭೦ ೦೨೪

**ಹೊಳೆದದ್ದು ತಾರೆ** (ಲೇಖನಗಳು)
ಡಾ॥ ಧನವಂತ ಹಾಜವಗೋಳ
ಪುಟ : ೧೧೩ ಬೆಲೆ : ರೂ. ೫೦

**ಶೋಧ ಪ್ರತಿಶೋಧ** (ಸಂಶೋಧನ ಲೇಖನ ಸಂಗ್ರಹ)
ಡಾ॥ ಧನವಂತ ಹಾಜವಗೋಳ
ಪುಟ : ೧೨೬ ಬೆಲೆ : ರೂ. ೭೫
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಮಹಾದೇವಿ ಪ್ರಕಾಶನ, ಸಿರಿಸಂಪದ, ವಿಜಯನಗರ, ಕೆಳಗೇರಿ ರಸ್ತೆ, ಧಾರವಾಡ - ೮

**ಗಾಂಧಿ ಚಿತ್ರದ ನೋಟು** (ಕಥಾ ಸಂಕಲನ)
ಸುನಂದಾ ಪ್ರಕಾಶ ಕಡಮೆ
ಪುಟ : ೯೬ ಬೆಲೆ : ರೂ. ೭೦
ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ (ಕರ್ನಾಟಕ)

**ಸೌಹಾರ್ದ ಸಾಹಿತ್ಯ ಸಂಗಮ** ಸಂ.: ಗೋಪಾಲ ಬಿ. ಶೆಟ್ಟಿ
ಪುಟ : ೧೪೪ ಬೆಲೆ : ರೂ. ೭೫
ಸ್ವಾಗತ ಸಮಿತಿ, ಸೌಹಾರ್ದ ಸಾಹಿತ್ಯ ಸಮ್ಮೇಳನ - ೨೦೦೭, ಉಡುಪಿ, ಕರಂಬಳ್ಳಿ, ಜನತಾ ಕಾಲನಿ ರಸ್ತೆ, ದೊಡ್ಡಣ್ಣ ಗುಡ್ಡೆ, ಅಂಚೆ : ಕುಂಜಿಬೆಟ್ಟು, ಉಡುಪಿ - ೨

ಡಾ॥ ಡಿ. ಕೆ. ಮಹಾಬಲರಾಜು

'ವೃದ್ಧಾಪ್ಯ' ಜೀವನದ ಅವಿಭಾಜ್ಯ ಮತ್ತು ಅನಿವಾರ್ಯ. ಇದು ಬದುಕಿನ ಉತ್ಕೃಷ್ಟ, ಉಚ್ಛ್ರಾಯ ಹಾಗೂ ಉತ್ಕ್ರಮಣ ಘಟ್ಟ.

ಜಗತ್ತಿನ ಜೀವಿಗಳೆಲ್ಲಾ 'ಸೃಷ್ಟಿ, ಸ್ಥಿತಿ, ಲಯ' ಎಂಬ ಬದ್ಧತೆಗೆ ಒಳಗಾಗಿವೆ. ಮಾನವ ಇದಕ್ಕೆ ಹೊರತಾಗಿಲ್ಲ. ಮಾನವನ ಪೂರ್ಣ ಜೀವನದ ಅಂತ್ಯದಲ್ಲಿ 'ವೃದ್ಧಾಪ್ಯ' ಸಾರ್ವತ್ರಿಕವಾಗಿ, ಸಹಜವಾಗಿ ಘಟಿಸುತ್ತಿರುವ ವಿದ್ಯಮಾನವಾಗಿದೆ.

ವೈಜ್ಞಾನಿಕ ಬೆಳವಣಿಗೆಗಳ ಉಪಕೃತಿಯಿಂದ ವಿಶ್ವದೆಲ್ಲೆಡೆ ಮಾನವ ದೀರ್ಘಾಯುವಾಗುತ್ತಿದ್ದಾನೆ. ಕಳೆದ ಐವತ್ತು ವರ್ಷಗಳ ಹಿಂದೆ ನಮ್ಮ ದೇಶದಲ್ಲಿ ಮಾನವನ ಸರಾಸರಿ ಜೀವಿತಾವಧಿ (ಆಯುಷ್ಯ) ಕೇವಲ ೩೨ ವರ್ಷವಾಗಿತ್ತು. ಈಗ ಇದು ೬೨ ವರ್ಷಕ್ಕಿಂತಲೂ ಹೆಚ್ಚಾಗಿದೆ. ಜಪಾನ್‌ನಲ್ಲಿ ಜನರ ಸರಾಸರಿ ಆಯುರ್ಮಾನ ೮೦ ವರ್ಷಕ್ಕೆ ತಲುಪಿದೆ. ಭಾರತದಲ್ಲಿ ಇತರೆ ಯಾವುದೇ ವಯಸ್ಸಿನವರ ಸಂಖ್ಯೆ ಹೆಚ್ಚಳಕ್ಕಿಂತಲೂ ವಯೋವೃದ್ಧರ ಸಂಖ್ಯೆ ವೇಗವಾಗಿ ಹೆಚ್ಚುತ್ತಿದೆ. ಈಗ ಭಾರತದಲ್ಲಿನ ಜನಸಂಖ್ಯೆಯ ಶೇ. ೪ರಷ್ಟು ಭಾಗ ೬೫ ವರ್ಷ ಮೀರಿದ ವೃದ್ಧರದ್ದಾಗಿದೆ. ಮುಂದುವರೆದ ದೇಶಗಳಲ್ಲಿ ವಯೋವೃದ್ಧರ ಪ್ರಮಾಣ ಇನ್ನೂ ಹೆಚ್ಚಾಗಿದೆ. (ಉದಾಹರಣೆಗೆ, ಇಂಗ್ಲೆಂಡ್ ಶೇ. ೧೫, ಜಪಾನ್ ಶೇ. ೨೦). ವಿಶ್ವದಲ್ಲೀಗ ಸುಮಾರು ೧೦೦೦ ಮಿಲಿಯನ್, ಭಾರತದಲ್ಲಿ ೧೦೦ ಮಿಲಿಯನ್ ಜನ ೬೫ ವರ್ಷ ಸಂದ ವೃದ್ಧರಿದ್ದಾರೆ ಎಂದು ಅಂದಾಜಿಸಲಾಗಿದೆ. ವೃದ್ಧರಲ್ಲಿ ಹೆಂಗಸರ ಸಂಖ್ಯೆಯೇ ಅಧಿಕ. ಏಕೆಂದರೆ ವಿಶ್ವದೆಲ್ಲೆಡೆ ಗಂಡಸರಿಗಿಂತ ಹೆಂಗಸರಿಗೆ ಸರಾಸರಿ ೧೫ ವರ್ಷ ಆಯಸ್ಸು ಹೆಚ್ಚಾಗಿರುತ್ತದೆ.

**ವೃದ್ಧಾಪ್ಯ ಏಕೆ ಬರುತ್ತದೆ ?**

ಕಳೆದ ಮೂವತ್ತು ವರ್ಷಗಳಿಂದೀಚೆಗೆ ವೃದ್ಧಾಪ್ಯದ ಬಗ್ಗೆ ಅನೇಕ ವೈಜ್ಞಾನಿಕ ಸಂಶೋಧನೆಗಳು ನಡೆದಿವೆ. ಆದರೂ ವೃದ್ಧಾಪ್ಯಕ್ಕೆ ಖಚಿತ ಕಾರಣ ಸ್ಪಷ್ಟವಾಗಿಲ್ಲ. ಡಿ.ಎನ್.ಎ., ಪ್ರೋಟೀನ್, ಆನುವಂಶಿಕತೆಯ ಅಂಕಿತದಲ್ಲಿ ಮುಪ್ಪು ಜರುಗುತ್ತಿದೆ ಎಂಬ ಸುಳಿವು ದೊರೆತಿದೆ. ವಯಸ್ಸಾಗುವುದು ಹುಟ್ಟಿನಿಂದಲೇ ಆರಂಭಗೊಳ್ಳುತ್ತದೆ ಎನ್ನಬಹುದು. ಹುಟ್ಟಿದಂದಿನಿಂದಲೂ ದೇಹದಲ್ಲಿ ಜೀವಕೋಶಗಳು ಸಾಯುತ್ತಿರುತ್ತವೆ, ಸವಕಳಿಗೊಳ್ಳುತ್ತವೆ. ಇವುಗಳ ಬದಲಿಗೆ ಹೊಸ ಜೀವಕಣಗಳು ಹುಟ್ಟಿಕೊಳ್ಳುತ್ತಿರುತ್ತವೆ. ಕಾಲ ಕ್ರಮೇಣ ಸಾಯುವ ಜೀವಕೋಶಗಳ ಸಂಖ್ಯೆಯೇ ಹೆಚ್ಚಾಗಿ, ಹುಟ್ಟುವ ಜೀವಕೋಶಗಳ ಪ್ರಮಾಣ ಕಡಿಮೆಯಾಗುತ್ತಾ ಹೋಗುತ್ತದೆ. ಇದೇ ವೃದ್ಧಾಪ್ಯಕ್ಕೆ ಸೂಚಕ. ಇಲ್ಲಿಂದಲೇ ನಿಧಾನ ನಿಧಾನವಾಗಿ ದೇಹದ ಅಂಗ-ಕ್ರಿಯೆಯಲ್ಲಿ ಶಿಥಿಲತೆ, ಸವಕಳಿ ಮುಂದುವರೆಯುತ್ತದೆ. ದೀರ್ಘಾಯು ಪಥದಲ್ಲಿ ವೃದ್ಧಾಪ್ಯ ನಿಶ್ಚಿತ. ವೃದ್ಧಾಪ್ಯದಲ್ಲಿ ಮುಪ್ಪಿನ ಬದಲಾವಣೆಗಳು ಖಚಿತ. ವಾಸ್ತವವಾಗಿ ವೃದ್ಧಾಪ್ಯ ಮೊಳಕೆಯೊಡೆಯುವುದು ಮೂವತ್ತರ ಹೊಸ್ತಿಲಲ್ಲಿಯೇ. ಅಲ್ಲಿಂದಲೇ ದೇಹದ ಕ್ರಿಯಾ ಸಾಮರ್ಥ್ಯ ಪ್ರತಿವರ್ಷ ಶೇ. ೧ರಷ್ಟು ಕಡಿಮೆಯಾಗುತ್ತಾ ಸಾಗುತ್ತದೆ.

**ವೃದ್ಧಾಪ್ಯದ ಬದಲಾವಣೆಗಳು**

ಚರ್ಮ ಒಣಗುವುದು, ಸುಕ್ಕುಗಟ್ಟುವುದು, ಕಾಂತಿರಹಿತವಾಗುವುದು, ಬಣ್ಣಗೆಡುವುದು. ಕೂದಲುಗಳು ವಿರಳವಾಗುವುದು, ಉದುರುವುದು, ನೆರೆಯುವುದು; ಮುಖ ಚಹರೆ ಬದಲಾಗುವುದು, ಮಾಂಸಖಂಡಗಳು ದುರ್ಬಲಗೊಳ್ಳುವುದು, ಮೂಳೆಗಳು ಪೊಳ್ಳಾಗುವುದು, ಹಲ್ಲುಗಳು ಉದುರುವುದು, ದೃಷ್ಟಿ ಶ್ರವಣ, ರುಚಿಗ್ರಹಣ, ಚಲನೆ, ಚುರುಕುತನ, ದೇಹ ಸಮತೋಲನ, ರಕ್ತಪರಿಚಲನೆ ಕುಂಠಿತವಾಗುವುದು, ಲೈಂಗಿಕ ಹಾರ್ಮೋನ್‌ಗಳ ಅಭಾವ ಉಂಟಾಗಿ ಲೈಂಗಿಕ ಶಕ್ತಿ, ಆಸಕ್ತಿ ಕಡಿಮೆಯಾಗುತ್ತದೆ, ಗಂಡಸರ ಪ್ರಾಸ್ಟೇಟ್ ಗ್ರಂಥಿ ದೊಡ್ಡದಾಗುತ್ತದೆ, ಹೆಂಗಸರಲ್ಲಿ ಗರ್ಭಕೋಶ ಉಡುಗುತ್ತದೆ, ಸ್ತನಗಳು ಜೋಲುತ್ತವೆ. ಬೆನ್ನು ಬಾಗುವುದು, ಮೂತ್ರಪಿಂಡ, ಹೃದಯ ಮೆದುಳು ಮತ್ತಿತರ ಮಹತ್ವದ ಅಂಗಾಂಗಗಳ ಕಾರ್ಯದಕ್ಷತೆ ಕುಂದುವುದು, ಜೊತೆಗೆ ಪಚನಶಕ್ತಿ, ರಕ್ತನಾಳದ ಮೃದುತ್ವ, ಅಂಗಾಂಗದ ಮೇಲಿನ ಹತೋಟಿ ಕಡಿಮೆಯಾಗುತ್ತದೆ.

ದೇಹದ ಅಂಗಾಂಗಗಳಲ್ಲಾಗುವ ಪರಿವರ್ತನೆಗಳಿಂದ ವೃದ್ಧರಲ್ಲಿ ಆಯಾಸ, ನಿಶ್ಶಕ್ತಿ, ತಲೆಸುತ್ತು, ಉಬ್ಬಸ, ಕೆಮ್ಮು, ಮಲಮೂತ್ರ ವಿಸರ್ಜನಾ ತೊಡಕು, ಅಸಮತೋಲನ, ಕೀಲು ನೋವು, ನಿದ್ರಾಹೀನತೆ, ಆಕಳಿಕೆ, ಗ್ಲಾನಿ, ಮುರುಕು ನಿದ್ದೆ, ತೊದಲು ಮಾತು, ಬಿಕ್ಕಳಿಕೆ, ಚಲನೆಯ ಮಂದತ್ವ, ಅಜೀರ್ಣ, ಪದೇ ಪದೇ ಸೋಂಕು ಜಾಡ್ಯತೆಗೆ ಸೆರೆಯಾಗುವುದು, ಅಪಘಾತ, ಮೂಳೆ ಮುರಿಯುವುದು ಮತ್ತಿತರ ತೊಂದರೆ ಉಂಟಾಗುವುದು ಸಾಮಾನ್ಯ.

ಮೆದುಳಿನ ನರಕೋಶಗಳ ಕುಂದುವಿಕೆಯಿಂದ, ಕಲಿಕೆ, ಬುದ್ಧಿವಂತಿಕೆ, ತರ್ಕಬದ್ಧ ಯೋಚನೆ, ಆಲೋಚನೆ, ನಿರ್ಧಾರ, ನೆನಪು, ಲೆಕ್ಕಾಚಾರ, ಚುರುಕುತನ, ಸೃಜನಶೀಲತೆ ಕಡಿಮೆಯಾಗುತ್ತಾ ಹೋಗುತ್ತದೆ. ದೇಹ ಮುಪ್ಪಾದ ಹಾಗೆ ಮನಸ್ಸಿಗೂ ಮುಪ್ಪಡರುತ್ತದೆ.

ದೇಹದ ಬದಲಾವಣೆಗಳೊಂದಿಗೆ ಹೃದ್ರೋಗ, ರಕ್ತದ ಒತ್ತಡ, ಸಕ್ಕರೆ ಕಾಯಿಲೆ, ಕ್ಯಾನ್ಸರ್, ಲಕ್ವ, ಹರ್ನಿಯಾ, ಶ್ವಾಸಕೋಶ, ಚರ್ಮ, ಕೀಲು ಮೂಳೆಗಳ ರೋಗರುಜಿನಗಳು ವೃದ್ಧಾಪ್ಯದಲ್ಲಿ ಕಾಣುವುದು ಹೆಚ್ಚಾಗಿದೆ. ಅಲ್ಜೀಮರ್, ಪಾರ್ಕಿನ್‌ಸನ್ ಕಾಯಿಲೆ, ಮನೋವೈಕಲ್ಯ, ವೃದ್ಧರನ್ನು ವಿಶೇಷವಾಗಿ ಕಾಡುತ್ತವೆ.

ದೈಹಿಕವಾಗಿ ಜರ್ಜರಿತಗೊಂಡ ವೃದ್ಧರು ಮಾನಸಿಕವಾಗಿಯೂ ಜರ್ಜರಿತಗೊಳ್ಳುವುದುಂಟು. ಹತಾಶೆ, ಖಿನ್ನತೆ, ಚಿಂತೆ, ವಿಷಣ್ಣತೆ, ಉತ್ಸಾಹಹೀನತೆ, ಇಚ್ಛಾಶಕ್ತಿನಾಶ, ಗಾಬರಿ, ದುಃಖ, ಕೋಪ, ವ್ಯಥೆ, ಸಾವಿನ ಭಯ, ಆತ್ಮಹತ್ಯ ಯೋಚನೆ, ಸ್ವಯಂ ನಾಶ ಪ್ರವೃತ್ತಿ, ಗೊಂದಲ, ಕಿರಿಕಿರಿ, ಸಿಡಿಮಿಡಿ, ಅಂತರ್ಮುಖಿತ್ವ, ಹೊಟ್ಟೆಕಿಚ್ಚು, ಕಹಿ ಅನುಭವ, ಬುದ್ಧಿಮಾಂದ್ಯತೆ, ಬದಲಾದ ಸಾಮಾಜಿಕ ವಾತಾವರಣ, ವ್ಯವಸ್ಥೆ, ಮೌಲ್ಯದ ಬಗ್ಗೆ ಕಿಡಿಕಾರುವಿಕೆ, ಹಠ, ನಿರುತ್ಸಾಹ, ನಿರಾಸಕ್ತಿ, ಅನುಮಾನ ಎಲ್ಲವೂ ಬೇರೂರುತ್ತವೆ.

# ವೃದ್ಧಾಪ್ಯದ ವಿಚಾರಗಳು



ಕಳೆದ ಮೂವತ್ತು ವರ್ಷಗಳಿಂದೀಚೆಗೆ ವೃದ್ಧಾಪ್ಯದ ಬಗ್ಗೆ ಅನೇಕ ವೈಜ್ಞಾನಿಕ ಸಂಶೋಧನೆಗಳು ನಡೆದಿವೆ. ಆದರೂ ವೃದ್ಧಾಪ್ಯಕ್ಕೆ ಖಚಿತ ಕಾರಣ ಸ್ಪಷ್ಟವಾಗಿಲ್ಲ. ಡಿ.ಎನ್.ಎ., ಪ್ರೋಟೀನ್, ಆನುವಂಶಿಕತೆಯ ಅಂಕಿತದಲ್ಲಿ ಮುಪ್ಪು ಜರುಗುತ್ತಿದೆ ಎಂಬ ಸುಳಿವು ದೊರೆತಿದೆ. ವಯಸ್ಸಾಗುವುದು ಹುಟ್ಟಿನಿಂದಲೇ ಆರಂಭಗೊಳ್ಳುತ್ತದೆ ಎನ್ನಬಹುದು. ಹುಟ್ಟಿದಂದಿನಿಂದಲೂ ದೇಹದಲ್ಲಿ ಜೀವಕೋಶಗಳು ಸಾಯುತ್ತಿರುತ್ತವೆ, ಸವಕಳಿಗೊಳ್ಳುತ್ತವೆ. ಇವುಗಳ ಬದಲಿಗೆ ಹೊಸ ಜೀವಕಣಗಳು ಹುಟ್ಟಿಕೊಳ್ಳುತ್ತಿರುತ್ತವೆ. ಕಾಲಕ್ರಮೇಣ ಸಾಯುವ ಜೀವಕೋಶಗಳ ಸಂಖ್ಯೆಯೇ ಹೆಚ್ಚಾಗಿ, ಹುಟ್ಟುವ ಜೀವಕೋಶಗಳ ಪ್ರಮಾಣ ಕಡಿಮೆಯಾಗುತ್ತಾಹೋಗುತ್ತದೆ. ಇದೇ ವೃದ್ಧಾಪ್ಯಕ್ಕೆ ಸೂಚಕ.

**ಸಾಮಾಜಿಕ ಗದಾ ಪ್ರಹಾರ**

ವೃದ್ಧಾಪ್ಯದಲ್ಲಿ ಸಮಾಜ ಸಂಬಂಧಿ ಬದಲಾವಣೆಗಳೂ ಕಾಡುವುದುಂಟು. ಉದ್ಯೋಗ, ಆದಾಯ ಇಲ್ಲವಾಗುವುದು, ಸಂಗಾತಿ, ಸ್ನೇಹಿತ, ಕುಟುಂಬದಲ್ಲಿನ ಸಾವು-ನೋವು, ಭವಿಷ್ಯದ ಅನಿರ್ದಿಷ್ಟತೆ, ಒಂಟಿತನ, ಭರವಸೆ ತೋಚದಿರುವುದು, ಸಮಾಜದಲ್ಲಿ ಸ್ಥಾನಮಾನ, ಅಧಿಕಾರ, ಆಸ್ತಿ, ಸ್ಥಿರತೆ ಪ್ರಾಮುಖ್ಯತೆ, ಭದ್ರತೆ, ಪ್ರೀತಿ, ಪ್ರಾಬಲ್ಯ ಕಡಿಮೆ (ಇಲ್ಲ) ಯಾಗುವುದು.

ಬಲವಂತದ ಒಂಟಿತನ, ನಿರುಪಯುಕ್ತತೆ, ನಿಷ್ಪ್ರಯೋಜಕತೆಯ ಭಾವ ಕಾಡುತ್ತದೆ. ಮನೆಯವರ ಉದಾಸೀನ, ತಿರಸ್ಕಾರಗಳಿಂದ ಕರುಣಾಜನಕ ಪರಾವಲಂಬಿತನದ ಬಾಳು ಗೋಳಾಗುತ್ತದೆ. ಬದುಕು ಬೇಸರವಾಗಿ, ಬರೀ ನಿರಾಸೆ, ಭ್ರಮನಿರಸನ ತುಂಬಿಕೊಳ್ಳುತ್ತದೆ. ಅಧೀನತೆ, ಜಿಗುಪ್ಸೆಯಿಂದ ಸಾವಿನ ಇಚ್ಛೆ ಉಂಟಾಗುತ್ತದೆ. ಸಾವಿನ ಭಯವೂ ತುಂಬಿಕೊಳ್ಳುತ್ತದೆ.

ಈಗ ಅವಿಭಕ್ತ ಕುಟುಂಬಗಳು ತುಂಡಾಗಿ ವಿಭಕ್ತ ಕುಟುಂಬಗಳಾಗುತ್ತಿವೆ. ವಿಭಕ್ತ ಕುಟುಂಬದಲ್ಲೂ ಜನಸಂಖ್ಯೆ ಬಹಳ ಕಡಿಮೆಯಾಗುತ್ತಿದೆ. ಉದ್ಯೋಗ, ವಿದ್ಯಾಭ್ಯಾಸಕ್ಕಾಗಿ ಇಲ್ಲವೆ ವಿರಸದ ಕಾರಣಗಳಿಂದ ಕುಟುಂಬದ ಸದಸ್ಯರು ಬೇರೆ ಊರಿಗೆ ಅಥವಾ ವಿದೇಶಗಳಿಗೆ ಹೋಗುತ್ತಿದ್ದಾರೆ. ಈ ಎಲ್ಲಾ ಬದಲಾವಣೆಗಳ ಗದಾಪ್ರಹಾರವೂ ವಿಶೇಷವಾಗಿ ವೃದ್ಧರ ಮೇಲೆ ಬೀಳುತ್ತದೆ.

ದೀರ್ಘಾಯುಷ್ಯದ ಏಕೈಕ ಹಾದಿ ವೃದ್ಧಾಪ್ಯ. ಇದು ಕಟು ಸತ್ಯ. ಆದಾಗ್ಯೂ ಎಲ್ಲರೂ ದೀರ್ಘಾಯುಷ್ಯವನ್ನು ಬಯಸುತ್ತಾರೆಯೇ ಹೊರತು, ಯಾರೂ ಮುಪ್ಪನ್ನು ಇಷ್ಟಪಡುವುದಿಲ್ಲ. ಒಪ್ಪಿಕೊಳ್ಳುವುದೂ ಇಲ್ಲ. ಬದಲಿಗೆ ವೃದ್ಧಾಪ್ಯ ಶಾಪವೆಂದು ಪರಿಗಣಿಸುತ್ತಾರೆ.

ಇಂದಿನ ವೈಜ್ಞಾನಿಕ, ಸಾಮಾಜಿಕ, ರಾಜನೀತಿಗಳ ಫಲಶ್ರುತಿಯಿಂದ ವೃದ್ಧರ ಬದುಕಿನಲ್ಲಿ ಆಶಾಕಿರಣ ಮೂಡುತ್ತಿದೆ. ಬದುಕಿಗೆ ಆಯುಷ್ಯ ತುಂಬುವುದರ ಜೊತೆಗೆ, ಆಯುಷ್ಯಕ್ಕೆ ಜೀವಕಳೆ ತುಂಬುವುದು ಸಾಧ್ಯವಾಗಿದೆ. ವೃದ್ಧಾಪ್ಯದ ಬವಣೆಗಳು ಈಗ ಅನಿವಾರ್ಯವಾಗಿ ಉಳಿದಿಲ್ಲ. ವೃದ್ಧಾಪ್ಯವನ್ನು ಹಿಂತಿರುಗಿಸಲಾಗುವುದಿಲ್ಲವಾದರೂ, ಇದನ್ನು ರಕ್ಷಿಸಬಹುದು, ವಿಸ್ತರಿಸಬಹುದು, ಸಮಸ್ಯೆಗಳನ್ನು ಪರಿಹರಿಸಬಹುದು. ವೃದ್ಧಾಪ್ಯವನ್ನು ಪ್ರವರ್ಧಮಾನಕ್ಕೇರಿಸಬಹುದು.

**ಆರೋಗ್ಯಕರ ವೃದ್ಧಾಪ್ಯ**

ಆರ್ಥಿಕ ಅಡಚಣೆ, ಒಂಟಿತನ, ಕಾಯಿಲೆ ಇವು ವೃದ್ಧಾಪ್ಯದ ಮೂರು ಪ್ರಮುಖ ಶತ್ರುಗಳು. ವೃದ್ಧರಲ್ಲಿ ರೋಗಗಳನ್ನು ಪ್ರತಿಬಂಧಿಸಿ, ದೈಹಿಕ ಊನತೆಗಳನ್ನು ನಿವಾರಿಸಿ, ಜೀವನ ಗುಣಮಟ್ಟದಲ್ಲಿ ಸುಧಾರಣೆ ಯಾದಲ್ಲಿ ವೃದ್ಧಾಪ್ಯದ ಬದುಕು ಸುಖಮಯ. ಪರಾವಲಂಬಿಯಾಗದೆ ಸ್ವತಂತ್ರವಾಗಿ ಊಟ, ಸ್ನಾನ, ಶೌಚ, ಚಲನೆ, ವಸ್ತ್ರಧಾರಣೆ, ಮಲ-ಮೂತ್ರ ನಿಯಂತ್ರಣ ನಿರ್ವಹಿಸಲು ಸಾಧ್ಯವಾದಲ್ಲಿ ವೃದ್ಧರ ಬದುಕು ನಿಜಕ್ಕೂ ಆನಂದಮಯ. ದೇಹದ ಶಿಥಿಲತೆಗಳನ್ನು ಕನಿಷ್ಠಗೊಳಿಸಿ, ಚಟುವಟಿಕೆಗಳನ್ನು ಸುಸ್ಥಿತಿಗೊಳಿಸಿ, ಇರುವ ಕಾಯಿಲೆಗಳನ್ನು ನಿಯಂತ್ರಣದಲ್ಲಿರಿಸುವುದೇ ಆರೋಗ್ಯಕರ ವೃದ್ಧಾಪ್ಯ. ಆರೋಗ್ಯಕರ ವೃದ್ಧಾಪ್ಯಕ್ಕಾಗಿ ವೈದ್ಯ ವಿಜ್ಞಾನವು ಹಲವು ಸಲಹೆಗಳನ್ನು ಸೂಚಿಸಿದೆ. ಕಳೆದ ಇಪ್ಪತ್ತು ವರ್ಷಗಳಿಂದ ನಡೆದಿರುವ ಸಂಶೋಧನೆಗಳು ವೃದ್ಧಾಪ್ಯದಲ್ಲಿ ಅನಾರೋಗ್ಯ ಅನಿವಾರ್ಯವಲ್ಲ ಎಂಬುದನ್ನು ಸ್ಪಷ್ಟಪಡಿಸಿವೆ.

ಹರಯದಲ್ಲಿನ ಪರಿಸರ, ಆಹಾರ, ಚಟ, ಸ್ವೇಚ್ಛಾಜೀವನ, ದುರ್ನಡತೆ, ದುರ್ವ್ಯವಹಾರ, ಕಷ್ಟ-ಸುಖ, ನೋವು-ನಲಿವು, ಸುಖ-ದುಃಖ, ಜೀವನಶೈಲಿ, ರೋಗರುಜಿನ, ತೃಪ್ತಿ-ಅತೃಪ್ತಿ, ಮಾನಸಿಕ ಒತ್ತಡ, ಪ್ರಾಕೃತಿಕ ವೈಪರೀತ್ಯ, ಕಾಯಿಲೆ ಬಗ್ಗೆ ನಿಷ್ಕಾಳಜಿ ಇವೆಲ್ಲವುಗಳ ಪ್ರಭಾವವೂ ಮುಪ್ಪಿನಲ್ಲಿ ಆರೋಗ್ಯವನ್ನು ಕೆಣಕಿ ಕದಡುವುದುಂಟು. ಹೀಗಾಗಿ ಆರೋಗ್ಯ ಪೂರ್ಣ ವೃದ್ಧಾಪ್ಯಕ್ಕೆ ಹರೆಯದಿಂದಲೇ ಆರೋಗ್ಯಕರ ಜೀವನಶೈಲಿ ರೂಢಿಸಿಕೊಳ್ಳಬೇಕಾಗಿರುವುದು ಅತಿಮುಖ್ಯ. ವೃದ್ಧಾಪ್ಯದಲ್ಲಿನ ದೈಹಿಕ, ಮಾನಸಿಕ, ಸಾಮಾಜಿಕ, ಆಧ್ಯಾತ್ಮಿಕ ಸ್ವಾಸ್ಥ್ಯತೆಯನ್ನು ನಿರೂಪಿಸಿಕೊಳ್ಳಲು ವೃದ್ಧರು ಕೆಲ ನಿಯಮಗಳನ್ನು ಪಾಲಿಸುವುದು ಅತಿ ಅವಶ್ಯಕ. ದೇಹ-ಮನಸ್ಸಿನ ಸ್ವಾಸ್ಥ್ಯ ಸಂವರ್ಧನೆಗೊಂಡರೆ, ವೃದ್ಧಾಪ್ಯ ಸುದೀರ್ಘ ಮತ್ತು ಸುಖಮಯ. ಮನುಷ್ಯ ಹೆಚ್ಚಾಗಿ ಸಾಯುವುದು ರೋಗರುಜಿನಗಳಿಂದಲೇ ಹೊರತು, ವೃದ್ಧಾಪ್ಯದಿಂದಲ್ಲ ಎಂಬ ಮಾತು ಇಲ್ಲಿ ಪ್ರಸ್ತುತ.

**ವೃದ್ಧಾಪ್ಯದ ಆರೋಗ್ಯಕ್ಕಾಗಿ**

**ಆಹಾರ** : ವಯಸ್ಸು ಹೆಚ್ಚುತ್ತಾ ಹೋದಂತೆ ಕಡಿಮೆ ಆಹಾರ ಸಾಕಾಗುತ್ತದೆ. ಹೆಚ್ಚು ತಿಂದದ್ದು ಹೊರೆಯಾಗುತ್ತದೆ. ವೃದ್ಧರು ಹಿತ-ಮಿತ ಸಮತೋಲನ ಆಹಾರ ಸೇವಿಸಬೇಕು. ಆಹಾರ ಪೌಷ್ಟಿಕವಾಗಿರಬೇಕು, ಸುಲಭವಾಗಿ ಜೀರ್ಣವಾಗುವಂತಿರಬೇಕು. ಆಹಾರದಲ್ಲಿ ಹಣ್ಣು-ತರಕಾರಿ-ಸೊಪ್ಪು ಹೇರಳವಾಗಿರಲಿ, ಉಪ್ಪು, ಸಿಹಿ, ಕೊಬ್ಬು ಮಿತವಾಗಿರಲಿ, ಮೂಳೆಗಳ ಬಲವರ್ಧನೆಗೆ ಕ್ಯಾಲ್ಸಿಯಂ ದೊರಕಿಸಿಕೊಡುವ ಹಾಲು, ಮೊಸರು, ಮಜ್ಜಿಗೆ, ಅತ್ಯವಶ್ಯಕ.

**ವ್ಯಾಯಾಮ ಚಟುವಟಿಕೆ** : ವ್ಯಾಯಾಮ ದೇಹದ ಆರೋಗ್ಯ, ಶಕ್ತಿ ಸಾಮರ್ಥ್ಯಗಳನ್ನು ಸುಸ್ಥಿತಿಯಲ್ಲಿಡುತ್ತದೆ. ದೇಹದ ಚಲನೆ ಹೆಚ್ಚಿಸುತ್ತದೆ. ಆಯಾಸ ಸುಸ್ತು ಎಲ್ಲವನ್ನು ಕಡಿಮೆ ಮಾಡುತ್ತದೆ. ಸ್ವಯಂ ಭರವಸೆ ಮತ್ತು ಸ್ವಾತಂತ್ರ್ಯವನ್ನು ಹೆಚ್ಚಿಸುವುದಲ್ಲದೇ ಮನಸ್ಸನ್ನು ಉಲ್ಲಾಸಗೊಳಿಸುತ್ತದೆ, ಹೃದ್ರೋಗ, ಸಕ್ಕರೆ ಕಾಯಿಲೆ, ರಕ್ತದೊತ್ತಡವನ್ನು ನಿಯಂತ್ರಿಸುತ್ತದೆ, ಪ್ರತಿಬಂಧಿಸುತ್ತದೆ.

**ಆರೋಗ್ಯ ತಪಾಸಣೆ** : ಪ್ರತಿ ಆರು ತಿಂಗಳಿಗೊಮ್ಮೆಯಾದರೂ ನಿಯಮಿತವಾಗಿ ವೈದ್ಯಕೀಯ ತಪಾಸಣೆ ಮಾಡಿಸಿಕೊಳ್ಳಬೇಕು. ಚಿಕ್ಕ ಪುಟ್ಟ ಕಾಯಿಲೆಗಳನ್ನು ಅಲಕ್ಷಿಸಬಾರದು. ಈಗಾಗಲೆ ಇರುವ ಕಾಯಿಲೆಗಳಿಗೆ ವೈದ್ಯರಿಂದ ಸೂಕ್ತ ಸಲಹೆ, ಚಿಕಿತ್ಸೆ ಪಡೆಯಬೇಕು.

**ಔಷಧಿ ಸೇವನೆ** : ವೈದ್ಯರ ಸಲಹೆ ಹೊರತಾಗಿ ಸ್ನೇಹಿತರು, ಹಿತೈಷಿಗಳು, ನಾಟಿ ಔಷಧಿ ನೀಡುವವರು ಹೇಳಿದ ಔಷಧಿ ಸೇವಿಸಬಾರದು, ವೃದ್ಧಾಪ್ಯ ಹಿಮ್ಮೆಟ್ಟಿಸುವ ಜಾಹೀರಾತಿನ ಔಷಧಿಗಳ ಆಮಿಷಕ್ಕೆ ಒಳಗಾಗಬಾರದು.

**ಚಟಗಳು** : ಮದ್ಯಪಾನ, ಧೂಮಪಾನ, ತಂಬಾಕು ಸೇವನೆ ಮುಂತಾದ ಚಟರಹಿತರಾಗಬೇಕು.

**ಕ್ರಿಯಾಶೀಲತೆ** : ಸೋಮಾರಿಯಾಗಿರದೆ ಸದಾ ಚಟುವಟಿಕೆಯಲ್ಲಿ ನಿರತರಾಗಬೇಕು. ಮಕ್ಕಳಿಗೆ ಪಾಠ ಹೇಳುವುದು, ಶಾಲೆಗೆ ಕಳುಹಿಸುವುದು, ಓದುವುದು, ಸಂಗೀತ ಆಲಿಸುವುದು, ಟಿ.ವಿ. ನೋಡುವುದು, ಚಿಕ್ಕ ಪುಟ್ಟ ಮನೆ ಕೆಲಸ, ಸಮಾಜದ ಕೆಲಸ ಮುಂತಾದ ತಮ್ಮ ಕೈಲಾಗುವ ಕ್ರಿಯೆಗಳಲ್ಲಿ ತೊಡಗಿಸಿಕೊಳ್ಳಬೇಕು. ಸಮಾಜದೊಂದಿಗೆ, ಸ್ನೇಹಿತರೊಂದಿಗೆ, ನೆಂಟರಿಷ್ಟರೊಂದಿಗೆ ಮುಕ್ತವಾಗಿ ಬೆರೆಯಬೇಕು. ಒಟ್ಟಾರೆ ಮನಸ್ಸೆಂದೂ ಖಾಲಿ ಬಿಡಬಾರದು. ಮಾನಸಿಕ ಒತ್ತಡಕ್ಕೊಳಗಾಗಬಾರದು.

**ವಿಶ್ರಾಂತಿ, ನಿದ್ದೆ** : ವೃದ್ಧರು ಸಾಕಷ್ಟು ವಿಶ್ರಾಂತಿ, ನಿದ್ದೆ ಪಡೆಯಬೇಕು.

**ದಿನಚರಿ** : ಏಳುವುದು, ಮಲಗುವುದು, ಊಟ ಮಾಡುವುದು, ವಾಕಿಂಗ್ ಹೋಗುವುದು, ಶೌಚ, ಸ್ನಾನ, ಧ್ಯಾನ ಎಲ್ಲವನ್ನೂ ನಿಗದಿತ ಸಮಯದಲ್ಲಿ ಮಾಡುವ ರೂಢಿ ಬೆಳೆಸಿಕೊಳ್ಳಬೇಕು.

**ದೃಷ್ಟಿಕೋನ** : ಹಳೆಯದಕ್ಕೆ ಜೋತುಕೊಳ್ಳುವ ಹಠಮಾರಿತನವನ್ನು ಬಿಟ್ಟು ಬದಲಾಗುತ್ತಿರುವ ಜಗತ್ತಿನ ವಾಸ್ತವತೆಗಳನ್ನು ಒಪ್ಪಿಕೊಳ್ಳುವ ವಿಶಾಲ ದೃಷ್ಟಿಕೋನ ಬೆಳೆಸಿಕೊಳ್ಳಬೇಕು. ಸಕಾರಾತ್ಮಕ ಭಾವನೆ ರೂಪಿಸಿಕೊಳ್ಳಬೇಕು.

**ಅಪಘಾತ** : ಅಪಘಾತಗಳಾಗದಂತೆ ಅತೀವ ಎಚ್ಚರ ವಹಿಸಬೇಕು. ವಾಸಸ್ಥಳದಲ್ಲಿ, ಮಲಗುವ ಮನೆಯಲ್ಲಿ ಸಾಕಷ್ಟು ಗಾಳಿ, ಬೆಳಕು ಇರಬೇಕು. ಎಲ್ಲಾ ಪರಿಕರ, ಪೀಠೋಪಕರಣಗಳನ್ನು ಅದೇ ಜಾಗದಲ್ಲಿರಿಸಿಕೊಳ್ಳಬೇಕು. ಮನೆಯ ಹೊರಗಡೆ ಹೋಗುವಾಗ ರಸ್ತೆಯಲ್ಲಿ ಹೆಚ್ಚು ಜಾಗ್ರತರಾಗಿರಬೇಕು.

**ಸೌಲಭ್ಯಗಳ ಉಪಯೋಗ** : ವೃದ್ಧರ ಸುಖಕ್ಕಾಗಿ, ಸ್ವಾಸ್ಥ್ಯಕ್ಕಾಗಿ ಲಭ್ಯವಿರುವ ವೈಜ್ಞಾನಿಕ, ಸಾಮಾಜಿಕ ಸೌಲಭ್ಯಗಳ ಸದುಪಯೋಗ ಪಡೆಯಬೇಕು, ಶಿಸ್ತು, ಸ್ವಚ್ಛತೆಗೆ, ಆದ್ಯತೆ ನೀಡಬೇಕು. ತನ್ನ ಬಗ್ಗೆ ತಾನು ಗುರುತಿಸಿಕೊಳ್ಳಬೇಕು. ಆತ್ಮಗೌರವವನ್ನು ಗಳಿಸಬೇಕು, ರಕ್ಷಿಸಿಕೊಳ್ಳಬೇಕು.

**ಛಳಿ-ಬಿಸಿಲು** : ವೃದ್ಧರಿಗೆ ಅತಿಯಾದ ಛಳಿ ಮತ್ತು ಅತಿ ಬಿಸಿ ಅಪಾಯಕಾರಿ. ವೃದ್ಧರು ಛಳಿ-ಬಿಸಿಲಿನಿಂದ ರಕ್ಷಣೆ ಪಡೆಯಬೇಕು. ದಿನವೂ ಸ್ವಲ್ಪಕಾಲ ಬೆಳಗಿನ ಹಾಗೂ ಸಂಜೆಯ ಬೆಳಕಿಗೆ ಮೈ ಒಡ್ಡಿಕೊಳ್ಳಬೇಕು.

**ಸಾವಿನ ಸಿದ್ಧತೆ** : ಮುಪ್ಪಿಗೆ, ಸಾವಿಗೆ ಹೆದರುವುದರ ಬದಲು ಭಯ ಭಕ್ತಿ ಬೆಳೆಸಿಕೊಳ್ಳಬೇಕು. ಸದಾ ಸಂತೋಷದಿಂದ ಸಾವಿಗೆ ಸಿದ್ಧರಾಗಬೇಕು.

**ಸಮಾಜದ ಬದ್ಧತೆ**

ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ವೃದ್ಧರಿಗೆ ವಿಶೇಷ ಗೌರವ, ಸ್ಥಾನ-ಮಾನ ನೀಡುತ್ತಿದ್ದಾರೆ. ವೃದ್ಧರಿಗಾಗಿ ಕ್ಲಬ್, ಡೇ-ಕೇರ್ ಸೆಂಟರ್, ದತ್ತು-ಗೃಹ, ಮನರಂಜನಾ ಕೂಟಗಳಿವೆ. ಅವರಿಗೆ ಮನೆ ಬಳಿಯೇ ವೈದ್ಯಕೀಯ ಸೌಲಭ್ಯ ಒದಗಿಸಲಾಗಿದೆ. ಊರುಗೋಲು, ಹಲ್ಲಿನ ಸೆಟ್, ಕನ್ನಡಕ, ಶ್ರವಣ ಸಾಧನ, ವೀಲ್‌ಛೇರ್ ಮತ್ತಿತರ ಅನೇಕ ಸೌಕರ್ಯಗಳಿಂದ ವೃದ್ಧರ ಬದುಕು ಸಂತಸಮಯವಾಗಿದೆ.

ಮುಂದುವರೆದ ದೇಶದ ವೃದ್ಧರಿಗೆ ಹೋಲಿಸಿದಾಗ, ವೃದ್ಧರಿಗೆ ನಾವು ನೀಡುತ್ತಿರುವ ಗೌರವ ಮತ್ತು ಸೌಲಭ್ಯಗಳು ಕಡಿಮೆ. ನಾವು ವೃದ್ಧಾಪ್ಯವನ್ನು ಗೆದ್ದಲು ಹತ್ತಿದ ಮರಕ್ಕೆ ಹೋಲಿಸಿದ್ದೇವೆ. ವೃದ್ಧರನ್ನು ಹೊರೆ ಎಂದು ಪರಿಗಣಿಸಿ, ಅಕ್ಷಮ್ಯ ಅಪರಾಧ ಎಸಗುತ್ತಿದ್ದೇವೆ. ವೃದ್ಧಾಪ್ಯ ಸಾರ್ಥಕ ಬದುಕಿನ ಸೋಪಾನ. ವೃದ್ಧಾಪ್ಯದಲ್ಲಿ ಜಗಮಟ್ಟದ ಅಮೂಲ್ಯ ಸಾಧನೆ ತೋರಿದ ಮಹನೀಯರು ಸಾವಿರ ಸಾವಿರ ಜನರಿದ್ದಾರೆ. ಇವರ ಜೀವನ ನಮಗೆ ದಾರಿದೀಪವಾಗಬೇಕಾಗಿದೆ. ನಮ್ಮನ್ನು ಬೆಳೆಸಿದ ವೃದ್ಧರ ಅಪಾರ ಜ್ಞಾನ ಅನುಭವಗಳ ಪೂರ್ಣ ಪ್ರಯೋಜನ ಪಡೆದು, ಅವರನ್ನು ಗೌರವಿಸಿ ಪಾಲನೆ-ಪೋಷಣೆ ಆರೋಗ್ಯ ರಕ್ಷಣೆಯತ್ತ ಗಮನಹರಿಸಿ, ವೃದ್ಧರ ಬದುಕಿನಲ್ಲಿ ಸಂತಸ ಮೂಡಿಸುವ ಹೊಣೆಗಾರಿಕೆ ಸಮಾಜದ ಮೇಲಿದೆ.

**ಡಾ|| ಡಿ. ಕೆ. ಮಹಾಬಲರಾಜು**
'ನಯನ', ೩೬೮೦/೨೨, ಹೌಸಿಂಗ್ ಬೋರ್ಡ್, ಎಂ.ಸಿ.ಸಿ. 'ಬಿ' ಬ್ಲಾಕ್
ಮೆಡಿಕಲ್ ಹಾಸ್ಟೆಲ್ ರಸ್ತೆ, ದಾವಣಗೆರೆ - ೫೭೭ ೦೦೪

# ಕೋಟಿಗೆ ಕಾದುಕೂತ ಶ್ರೀ ಬಂಡೇಶ್ವರ

ಬೀರಣ್ಣ

ಅನೇಕ ತಿಂಗಳ ನಂತರ ಊರಿಗೆ ಬಂದಿದ್ದ ಈರಾಂಜಣಿ, ಗೊಂದಲಪುರದವರ ಜಡ್ಡು ತಲೆಗಳಿಗೆ ಶಾಕ್ ಟ್ರೀಟ್‌ಮೆಂಟ್ ನೀಡಿ ಹೋಗಿದ್ದ. ಅವರೆಗೆ, ಶ್ರೀ ಬಂಡೇಶ್ವರ ಮಠ ತನ್ನ ಎದುರಿಗೆ ತೆರೆದುಕೊಂಡಿರುವ ಸದವಕಾಶದತ್ತ ಕುರುಡಾಗಿ, ಸರಿಸುಮಾರು ತೂಕಡಿಸುತ್ತ ಚಟುವಟಿಕೆ ನಡೆಸುತ್ತ ಬಂದಿತ್ತು.

ಹಾಗೆನ್ನುವುದಾದರೆ ಸಿದ್ದೇಶ್ವರಾನಂದಜಿಗೆ ಮೈಗಳ್ಳನೆಂಬ ಪ್ರಶಸ್ತಿಯನ್ನು ಆತನ ಹೆಂಡತಿ ಚೆಲುವಕ್ಕ, ಮನೆಯ ಮಕ್ಕಳೇ ನೀಡಿದ್ದುದರಿಂದ, ಬಂಡೇಶ್ವರ ಮಠವನ್ನು ಯಾರೂ ಸೀರಿಯಸ್ಸಾಗಿ ತೆಗೆದುಕೊಂಡಿರಲಿಲ್ಲ. ಸಿದ್ದೇಶ್ವರಾನಂದಜಿಯದೇ ವರಸೆಯ ಐದಾರು ಮಂದಿ ಅಧ್ಯಾತ್ಮವಾದಿಗಳು ಆಗಾಗ ಮಠದಲ್ಲಿ ಅವರ ಅಮೃತವಾಕ್ಯ ಆಲಿಸುತ್ತ, ಸಿದ್ದೇಶ್ವರಾನಂದಜಿಯ ಏಕತಾರಿಯ ಟುಂಯ್ ಟುಂಯ್ ನಾದದಲ್ಲಿ ಮೈಮರೆತು ತತ್ವಪದ ಕಿರಿಚುತ್ತ, ಸಾಧನೆ ಮಾಡುತ್ತಿದ್ದರು!

ಅಕಸ್ಮಾತ್ ಊರಿಗೆ ಬಂದ ಈರಾಂಜ್ಲಿ, ಬೇವಿನ ಕಟ್ಟೆಯ ಗುಂಪಿನ ಮೇಲೆ ಒಮ್ಮೆಲೇ ದಾಳಿ ಮಾಡಿದಂತೆ, ''ಥೂ ನಿಮ್ ಜಲ್ಮಕ್ಕಿಷ್ಟು... ನಮ್ಮ ಮುಖ್ಯಮಂತ್ರಿ ಯಡೂರಪ್ನೋರು 'ಮಠ' ಅನ್ನು ಶಬ್ದ ಕಿವಿಗೆ ಕೇಳಿಸಿದ್ ಕೂಡ್ಲೇ ತಗಳ್ಳಿ ಕೋಟಿ ರೂಪಾಯಿ ಅಂತ ರಡಿಯಾಗ್ ಕೂತವ್ರೆ. ಅದಕ್ಕೆ ಅಂತ್ಲೇ ಅಕ್ಕ ಸಮ್ಮೇಳನಕ್ಕೋಗಿ ಕೊಡ್ರಯ್ಯ ನಮ್ಮೂರ್ ಮಠಗಳಿಗೆಲ್ಲ ಅಂತ ಎನ್ನಾರೈಗಳಿಂದ ಇಸ್ಕೊಂಡಿಷ್ಟ್ ತಂದವ್ರೆ. ನೀವು ಇಲ್ಲೋಡಿದ್ರೆ ತೂಕಡಿಸ್ತಾ ಕುಂತಿದ್ದೀರಲ್ರಲೇ!''– ಎಂದು ಯಜಮಾನ ಗುರುವಪ್ಪನ ಮುಂದೆ ಇಡೀ ಊರನ್ನು ಛೇಡಿಸಿದ.

ಈರಾಂಜಣಿ ಗೊರಗುಂಟೆ ಪಾಳ್ಯದಲ್ಲಿ ನಾಲ್ಕೈದು ಮನೆ ಬಾಡಿಗೆಗಿದ್ರೂ, ಹುಟ್ಟಿದ ಊರಾದ ಗೊಂದಲಪುರ ಮರೆತಿರಲಿಲ್ಲ. 'ಜನಾನ ಪೆದ್ದೀ ಅವನ್ ಮಾತು ನಡೀತದೆ' – ಎಂಬುದು ಊರಿನವರಿಗೂ ತಿಳಿಯದ ಇಷ್ಟು. ತರ್ಲೆ ತಿಪ್ಪನ ಮಾತಿನಲ್ಲಿ ಹೇಳುವುದಾದರೆ, ಈರಾಂಜ್ಲಿ ಬೋ 'ಇನ್‌ಫ್ಲುಯೆಂಜ' ಇರುವ ಮನ್ಸ!

ಕೋಟಿ ರೂಪಾಯಿ ಕೊಡುಗೆ ಗಿಟ್ಟಿಸಲು ಯಾವ ಕ್ರಮ ಅನುಸರಿಸಬೇಕು, ಏನು ಉಪಾಯ ಮಾಡಬೇಕು ಎಂಬುದನ್ನೆಲ್ಲ ತಿಳಿಸಿಕೊಟ್ಟ ಈರಾಂಜಿಣಿ.

ಈರಾಂಜ್ಲಿ ಗುಲ್ಬೂರಿಗೆ ಹೋದನಂತರ ಊರಿನ ಪ್ರಜೆಗಳು ಕೋಟಿ ರೂಪಾಯನ್ನು ಅನಾಯಾಸವಾಗಿ ದಕ್ಕಿಸಿಕೊಳ್ಳುವ ಮಾರ್ಗೋಪಾಯಗಳನ್ನು ಹುಡುಕಲು ತುರ್ತಿನ ಸಭೆ ಸೇರಿದರು. ಎಂದಿನಂತೆ ಗುರುವಜ್ಜ ಅಧ್ಯಕ್ಷ.

ಈ ಕೋಟಿ ರೂಪಾಯಿನ ಪ್ರಸ್ತಾಪ ಬಂದಾಗಿನಿಂದ ಗುರುವಜ್ಜನ ತಲೆ ತುಂಬಾ ಭಾರವಾಗತೊಡಗಿತ್ತು. ಅದನ್ನು ನಿವಾರಿಸಿಕೊಳ್ಳುವ ಪ್ರಯತ್ನವಾಗಿ ತರ್ಲೆ ತಿಪ್ಪನನ್ನು ಹತ್ತಿರಕ್ಕೆ ಕರೆದು ''ಲೋ ತರ್ಲೆ... ಈ ಕೋಟಿ ಅಂದ್ರೆ ಎಷ್ಟು ರೂಪಾಯ್ಲ?'' – ಎಂದ.

ಗುರುವಜ್ಜನ ಯಜಮಾನಿಕೆಯನ್ನು ತಮಾಷೆಮಾಡಲು ತಿಪ್ಪನಿಗೆ ಒಂದು ಒಳ್ಳೆಯ ಅವಕಾಶ ಸಿಕ್ಕಿದಂತಾಯಿತು. ''ಕೇಳ್ರಪ್ಪೋ ಕೇಳ್ರಿ... ಈ ಗೊಂದಲಪುರದ ಯಜಮಾನನಿಗೆ ಕೋಟಿ ಅಂದ್ರೆ ಎಷ್ಟ್ ರೂಪಾಯಿ ಅಂತ್ಲೇ ಗೊತ್ತಿಲ್ಲ! ಸೇಮ್ ಸೇಮ್!'' ಎಂದು ಎಲ್ಲರನ್ನು ನಗಿಸಿದ. ಅನಂತರ ''ಅಯ್ಯೋ ನನ್ ಯಜ್ಮಾನ, ಕೋಟಿ ಅಂದ್ರೆ ಇಪ್ಪತ್ ಲಕ್ಷ ಅಲ್ವ! ಅದೂ ಗೊತ್ತಿಲ್ಲ...''

ಸಿಂಗ್ರಿ ಜೋರಾಗಿ ''ಬಡಿರ್ಲಾ ನನ್ ಮಗನ್ನ, ದೊಡ್ ಲೆಕ್ಕ ಗೊತ್ತಿರೋನಂಗೆ, ಥೂ ನಿನ್ನ. ಒಂದ್ ಕೋಟಿ ಅಂದ್ರೆ ಮೂವತ್ ಲಕ್ಷ ಅಲ್ವಲಾ?'' – ಆತನನ್ನು ತಿದ್ದಿದ.

ಅಬ್ಬಾ ಅಷ್ಟು ಲಕ್ಷ ಸಿಕ್ಕಿದರೆ ಏನೇನು ಮಾಡಬಹುದು ಎಂದು ನೆರೆದಿದ್ದವರೆಲ್ಲ ತಲೆ ತುರಿಸಿಕೊಳ್ಳತೊಡಗಿದರು.



ಚಿಕ್ಕೀರ ಸಂತೆಯಲ್ಲಿ ಯಾರೋ ಮಾತಾಡಿಕೊಳ್ಳುತ್ತಿದ್ದುದನ್ನು ನೆನಪು ಮಾಡಿಕೊಂಡು ''ಲೋ ಸರ್ಕಾರ್ದೋರು ಇನ್ನು ಒಂದ್ ಪ್ಲಾನ್ ಮಾಡಿದ್ದಾರಂತೆ ಕಣ್ರೋ. ಈ ಚಿಕ್ ಚಿಕ್ ಮಟಗಳಿಂದ ಏನೂ ಉಪ್ಯೋಗ ಇಲ್ಲಾಂತ, ಇವನ್ನೆಲ್ಲ ದೊಡ್ ಮಟಗೊಳ್ಗೆ ಕೊಟ್ಬುಡ್ತಾರಂತೆ. ನಮ್ ಬಂಡೇಸ್ವರನ ಮಟಾನ ಸುಂಕದ ಕಟ್ಟೆ ಇರುಪಾಕ್ಸಿ ಮಟಕ್ಕೆ ಕೊಟ್ಬುಟ್ರೆ ?''

''ಅದ್ಯಾಂಗಾದ್ದು ಕೂತ್ಕಳ್ಲಾ! ನಮ್ಮೂರ್ ಗುಡಿ, ನಮ್ಮೂರ್ ಮಟಾನ ಯಾರ್ಗ್ಗರ ಯಾಕ್ ಕೊಡನ ? ನಾವೇನು ಸುಮ್ಗೆ ಕುಂತಿದ್ದೇವಾ ? ಬಂದ್ಬುಟ್ಟ ಮೊನ್ಗಾರ...'' ಎಂದು ಸಿಂಗ್ರಿ ದಬಾಯಿಸಿದ.

ಮತ್ತೆ ಸಭೆ ಕೋಟಿ ರೂಪಾಯಿನ ದಾರಿಗೆ ಹಿಂದಿರುಗಿತು.

ಮುಖ್ಯ ನಿಬಂಧನೆ ಬಂಡೇಶ್ವರ ಮಠ ಸಾಕಷ್ಟು ಪುರಾತನವಾಗಿರಬೇಕು – ಎಂಬುದು. ಅದಕ್ಕೆ ಈರಾಂಜ್ಣಿಯ ಉಪಾಯ, ಅರ್ಜಿಯಲ್ಲಿ ಶ್ರೀ ಶ್ರೀ ಬಂಡೇಶ್ವರ ಮಠ ಕಳೆದ ಎಂಟುನೂರು ವರ್ಷಗಳಿಂದ ಬಡ ಭಕ್ತಾದಿಗಳ ಕಾಣಿಕೆಯಿಂದ ನಡೆಯುತ್ತಿದೆ ಎಂದು ತಪ್ಪದೆ ನಮೂದಿಸಬೇಕು ಎಂಬುದು. ಅದಕ್ಕೆ ತರ್ಲೆತಿಪ್ಪ ಯಾವುದಕ್ಕೂ ಇರಲಿ ಎಂದು ಇನ್ನೂ ನಲವತ್ತೈದು ವರ್ಷ ಸೇರಿಸುವಂತೆ ಸಲಹೆಮಾಡಿದ.

ಹನುಮಂತನ ಗುಡಿ ಪೂಜಾರಿ ಮಾಂತಪ್ಪ, ಪಟ್ಟಾಲಮ್ಮನ ಗುಡಿ ತಂಬಡಿ ಗೊರವಯ್ಯ ಆಕ್ಷೇಪ ತೆಗೆದರು. ಮೂಲ ದೇವರುಗಳಿರುವಾಗ ಇತ್ತೀಚಿನ ಬಂಡೇಶ್ವರನಿಗೆ ಒಂದು ಕೋಟಿ ಕೊಡೋದು ಅನ್ಯಾಯ ಅಲ್ಲವೆ ?

''ಏ ಅಂಗಲ್ಲ ಕಣ್ರಪ್ಪ, ಕೋಟಿ ಕೊಡ್ಬೇಕಾದ್ರೆ ಮಠ ಅನ್ನಿಸ್ಕಂಡಿರ್ಬೇಕು ! ಸುಮ್ನೆ ಅಲ್ಲ. ನಿನ್ ಗುಡಿ ಗೋಪ್ರಕ್ಕೆಲ್ಲ ಕೋಟಿ ಕೊಡು ಅಂದ್ರೆ ಎಲ್ಲಿಂದ ತಂದ್ ಕೊಟ್ಟಾರು ಸರ್ಕಾರ್ದ್ದೋರು ?'' ಎಂದು ಅವರ ಮಾತನ್ನು ತಳ್ಳಿ ಹಾಕಿದ ಸಿಂಗ್ರಿ. ಗುರುವಜ್ಜ ಪ್ರವೇಶಿಸಿ ಬರುವ ಹಣದಲ್ಲಿ ಒಂದು ಪಾಲನ್ನು ಮೂಲದೇವರುಗಳಿಗೂ ನೀಡಬಹುದು ಎಂದು ಸಲಹೆ/ತೀರ್ಮಾನ ನೀಡಿದ !

''ಮಠ ಅಂದ್ರೆ ದನಗೋಳು ಇರ್ಬೇಕಂತೆ ಕಣ್ರಪ್ಪೊ, ಸುಮ್‌ಸುಮ್ಕೆ ಅಣ ಮಂಜೂರ್ ಮಾಡುದಿಲ್ವಂತೆ ಸರಕಾರದೋರು''– ಎಂದು ಮತ್ತೊಂದು ಬಾಂಬು ಹಾಕಿದ ಗೊಜ್ಜ.

ಹಿಂದುಗಡೆ ಕುಳಿತಿದ್ದ ಬೋರಜ್ಜಿ ಬಾಯಿ ತುಂಬಿಸಿಕೊಂಡಿದ್ದ ಹೊಗೆಸೊಪ್ಪಿನ ರಸವನ್ನು ಉಗುಳಿ ಬಂದು ''ನೋಡ್ರಪ್ಪ, ನಾನು ಎಣ್ಣೆಂಗ್ಸು. ಆ ದೇವ್ರು ಒಪ್ಪುವಂಗೆ ಒಂದ್ ಮಾತ್ತೇಳ್ತೀನಿ'' ಎಂದಳು.

''ಓ ಹೋ... ಏಳ್ ನನ್ತಾಯಿ. ನೀನೇ ಅಲ್ವ ನಮ್ ಮಂತ್ರಿಗಳ್ಗೆಲ್ಲಾ ಅಡ್ವೈಜರು !'' ಎಂದು ತರ್ಲೆತಿಪ್ಪ ವ್ಯಂಗ್ಯದ ದನಿಯಲ್ಲಿ ಹೇಳಿದ.

''ದನ ಆದ್ರೇನು, ಎಮ್ಮೆ ಆದ್ರೇನು, ಆಡು ಕುರಿ ಕೋಳಿ ಆದ್ರೇನು ಎಲ್ಲ ಆ ದೇವ್ರ ಸ್ರುಸ್ಟಿ ಅಲ್ವ ಮೊಗಾ ! ನನ್ನೊವು ಮೂರು ಎಮ್ಮೆಗಳ್ನೂ ಬರ್ಕ್ಕಳಿ ಮಟದ್ ಲೆಕ್ಕಕ್ಕೆ. ಚಂದಾಗಿ ಉಲ್ಲು ಸೊಪ್ಪ ಆಕಿ ಸಾಕ್ರಪ್ಪ...'' ಎಂದಳು ಬೋರಜ್ಜಿ.

ಸಭೆ ಗೊಳ್ಳೆಂದಿತು. ನೂರು ಅನುಮಾನಗಳೊಂದಿಗೆ ಬೋರಜ್ಜಿಯ ಸಲಹೆಗೆ ಅಂಗೀಕಾರ ನೀಡಿತು ಸಭೆ.

ತಮ್ಮ ಮಕ್ಕಳನ್ನು ಶಾಲೆಗೆ, ಕೆಲಸಕ್ಕೆ ಸೇರಿಸಿದ ಅನುಭವವಿದ್ದ ಮತ್ತೆ ಒಬ್ಬಿಬ್ಬರಿಗೆ ಇನ್ನೊಂದು ದೊಡ್ಡ ಪ್ರಶ್ನೆ ಎದುರಾಯಿತು. ಅರ್ಜಿಯಲ್ಲಿ ಜಾತಿ ಕಾಲಮಿನಲ್ಲಿ ಏನಂತ ಬರೆಯಬೇಕು ಎಂಬುದು.

ಹಾಗಾದರೆ ಬಂಡೇಶ್ವರ ಯಾವ ಜಾತಿ ? ಎಂಬ ಪ್ರಶ್ನೆ ಎಲ್ಲರ ತಲೆ ಹೊಕ್ಕಿತು. ಮೊದಲೇ ಸರಕಾರದ ಸಹವಾಸ. ಬಂಡೇಶ್ವರನಿಗೆ ಯಾವುದಾದರೊಂದು ಜಾತಿ ಸೃಷ್ಟಿಸಬಹುದು. ಬಹಳ ಸುಲಭ ! ಹಾಳಾದ್ದು ಅದಕ್ಕೊಂದು ಸರ್ಟಿಫಿಕೇಟ್ ಬೇಕಲ್ಲ. ಅವರು ಬಂಡೇಶ್ವರನ ಅಪ್ಪ ಯಾವ ಜಾತಿ, ಅವ್ವ ಯಾವ ಜಾತಿ ಅಂತೆಲ್ಲ ಕೇಳಿದಾಗ ನಿಜ ಹೇಳಬೇಕಲ್ಲ! ಅದಕ್ಕೇನು ಮಾಡುವುದು. ಇದೊಳ್ಳೆ ಗ್ರಾಚಾರ !

ಲೋಕದ ವಿಷಯ ಅಲ್ಪಸ್ವಲ್ಪ ತಿಳಿದುಕೊಂಡಿದ್ದ ಚಿಕ್ಕೀರ ''ಸುಮ್ನೆ ಪಾರ್‍ವರ್ಡು ಅಂತ ಆಕಿದ್ರಾಯ್ತಪ್ಪ'' ಎಂದ. ಅವನ ಮಾತಿನಲ್ಲಿ ಸತ್ಯ ಇಲ್ಲದೆ ಇಲ್ಲ. ಸರಕಾರ ಈವರೆಗೆ ಬಾಚಿಬಾಚಿ ಎರಚಿದ್ದೆಲ್ಲ ಮುಂದುವರಿದ ಮಠ ದೇಗುಲಗಳಿಗೇ ಆಗಿತ್ತಲ್ಲ!

''ಅಂಗೆ ರಿಜರ್ವೇಜನ್ ಅನ್ನೋದಾದ್ರೆ ಬ್ಯಾಕ್‌ವರ್ಡ್ ಅಂತ್ಲೇ ಆಕಾನ'' ಎಂದ ಸಿಂಗ್ರಿ.

''ಅದೂ ಸರಿಯಲ್ಲ ಕಣ್ರೋ, ಓಬಿಸಿ ಆಗ್ಬೇಕು'' ಎಂದ ಗೊಜ್ಜ.

''ಅದೆಲ್ಲ ಯಾವ್ದೂ ಸರಿಯಾಗುದಿಲ್ಲ; ಬಂಡೇಶ್ವರ ಎಸ್ಸಿ /ಎಸ್ಟಿ ಅಂತ ಅಂದ್ರೆ ಯಾರೂ ಏನೂ ಅನ್ನಂಗಿಲ್ಲ...'' ಎಂದ ತಿಪ್ಪ.

ಇದು ಗೊಂದಲಪುರದವರ ಪಾಲಿಗೆ ಬಗೆಹರಿಯದ ಸಮಸ್ಯೆಯಾಯಿತು. ಶ್ರೀ ಬಂಡೇಶ್ವರನನ್ನು ಯಾವ ಜಾತಿಯ ದೇವರೆಂದು ನಮೂದಿಸಿದರೆ ಕೋಟಿ ರೂಪಾಯಿ ಮಂಜೂರಾಗಬಹುದು ಎಂಬುದನ್ನು ತಿಳಿದುಕೊಳ್ಳುವ ಸಲುವಾಗಿ ಈರಾಂಜ್ಣಿಯ ಬಳಿಗೆ ಗೊಂದಲಪುರದ ಒಂದು ಆಯೋಗ ನಾಳೆ ಬೆಳಗಿನ ಮಾದೇಸ್ವರ ಸರ್ವೀಸಿಗೆ ಹೋಗುವುದೆಂದು ನಿರ್ಣಯಿಸಲಾಯಿತು.

ಇಡೀ ಗೊಂದಲಪುರ ಕೋಟಿ ರೂಪಾಯಿ ಕೊಡುಗೆಯ ಕನಸಿನಲ್ಲಿ ತೇಲಾಡ ತೊಡಗಿತು. ಆದರೆ, ಸಿದ್ದೇಶ್ವರಾನಂದಜಿಗೆ ಈ ವಿಷಯ ಚೆಲುವಕ್ಕನಿಗೆ ತಿಳಿದರೆ ಆಕೆಯ ಪ್ರತಿಕ್ರಿಯೆ ಏನಾಗಿರಬಹುದು ಎಂಬ ಚಿಂತೆ ಹತ್ತಿತು. ಹಾಗೇನಾದರೂ ಎಡವಟ್ಟಾದರೆ ಆಕೆ ಮಕ್ಕಳ ಕೈಲಿ ಮಠಕ್ಕೆ ಕಳಿಸಿಕೊಡುತ್ತಿದ್ದ ಮುದ್ದೆಗೂ ಮೋಸವಾಗ ಬಹುದು ಎಂದು ಹೊಟ್ಟೆಯಲ್ಲಿ ತಳಮಳ ಪ್ರಾರಂಭವಾಯಿತು. ದಿನಕ್ಕೆರಡು ಬಾರಿ ಚೆಲುವಕ್ಕನ ಮುದ್ದೆ, ಸಾರು ಮಠಕ್ಕೆ ತಲುಪದಿದ್ದರೆ ಮಠದಲ್ಲಿ ಜೀವಾತ್ಮ ಪರಮಾತ್ಮರ ಬೇಳೆ ಬೇಯುವುದಿಲ್ಲ ಎಂಬುದನ್ನು ಸಿದ್ದೇಶ್ವರಾನಂದಜಿಗಿಂತ ಹೆಚ್ಚು ಬಲ್ಲವರು ಯಾರೂ ಇಲ್ಲ. ಆತ ಗುರುವಜ್ಜನಿಗೆ ಮಾತ್ರ ಕೇಳಿಸಿದರೆ ಸಾಕೆಂದು ದನಿ ತಗ್ಗಿಸಿ ಹೇಳಿದ. ''ಸರ್ಕಾರ್‌ದಿಂದ ಕೋಟಿ ರೂಪಾಯ್ ಸಿಕ್ಕತ್ತೆ ಅನ್ನೋ ಸಮಾಚಾರಾನಾ ಸ್ವಲ್ಪ ಗುಟ್ಟಾಗಿ ಯಾರಾದ್ರ ನಮ್ ಚೆಲುವಕ್ಕನ್ ಕಿವಿಗೆ ಹಾಕದಿದ್ರೆ ಒಳ್ಳೇದು'' – ಎಂದ. ಆತನ ಆತಂಕವನ್ನು ಅರ್ಥಮಾಡಿಕೊಂಡ ಎಲ್ಲರೂ ಗೊಳ್ಳೆಂದು ನಕ್ಕು ಹಗುರಾಗತೊಡಗಿದರು.



ಈ ವಿಷಯದಲ್ಲಿ ಚೆಲುವಕ್ಕನ ಅಭಿಪ್ರಾಯ ಯಾರಾದರೂ ಕೇಳಿದ್ದ ಪಕ್ಷದಲ್ಲಿ ಆಕೆ ಎಲ್ಲರ ಹೆಗಲೇರಿರುವ ಭೂತಗಳನ್ನು ಬಿಡಿಸುತ್ತಾಳೆಂದು ಹೆದರಿಕೆ. ಹಾಗೆ ಛೀಮಾರಿ ಹಾಕಿಸಿಕೊಳ್ಳಲು ಯಾರೂ ಸಿದ್ಧರಿರಲಿಲ್ಲ.

ಶ್ರೀಬಂಡೇಶ್ವರನನ್ನು ಯಾವ ಜಾತಿಗೆ ಸೇರಿಸಬಹುದೆಂದು ಚೆಲುವಕ್ಕನ ಸಲಹೆ ಕೇಳುವುದು ಸರಿಯೆಂದು ಕೆಲವರಿಗನ್ನಿಸಿತು. ಚೆಲುವಕ್ಕ ಹೇಗೂ ಪಂಚಾಯ್ತಿ ಮೆಂಬ್ರು. ಸ್ಕೂಲಿನ ಮೇಡಂ ಮತ್ತು ಚೆಲುವಕ್ಕ ಸೇರಿದರೆ ಇದಕ್ಕೊಂದು ಪರಿಹಾರ ಸೂಚಿಸಬಹುದೆಂದು ದೂರದ ಆಸೆ !

ಇದ್ದಕ್ಕಿದ್ದಂತೆ ಮಾಮೇರಿ ಮಳೆ ಬಂದು ರಪರಪ ಬಾರಿಸತೊಡಗಿದ್ದರಿಂದ ಗೊಂದಲಪುರದ ಮಹತ್ವದ ಸಭೆ ಚಲ್ಲಾಪಿಲ್ಲಿಯಾಯಿತು !

ಬೀರಣ್ಣ
ಗೊಂದಲಪುರ

# ಸಾಮ್ರಾಜ್ಯಶಾಹಿ ಧೋರಣೆಗಳಾಗಿ ಪಠ್ಯ ಮತ್ತು ಪಾಠಾಂತರಗಳು

**ಡಾ|| ವೀರೇಶ ಬಡಿಗೇರ**

'**ಹೊ**ಸತು' ಸಂಚಿಕೆಯಲ್ಲಿ (ಸಂಪುಟ-೯, ಸಂಚಿಕೆ ೧೨, ಜುಲೈ ೨೦೦೮) ಪ್ರಕಟವಾದ ಜಿ. ರಾಜಶೇಖರ ಅವರ ರಾಮಾನುಜನ್ ಪ್ರಬಂಧದ ವಿರುದ್ಧ ಸಂಘ ಪರಿವಾರದ ಒಂದು ಭಾಗದ ಗೂಂಡಾಗಿರಿ ಹಾಗೂ ಎ. ಕೆ. ರಾಮಾನುಜನ್ ಅವರ ಮುನ್ನೂರು ರಾಮಾಯಣಗಳು ಲೇಖನಗಳನ್ನು ಓದಿ ಈ ಕೆಳಗಿನ ಟಿಪ್ಪಣಿಗಳನ್ನು ಬರೆಯುತ್ತಿದ್ದೇನೆ.

ಎ. ಕೆ. ರಾಮಾನುಜನ್ ಅವರ ಮುನ್ನೂರು ರಾಮಾಯಣಗಳು ಲೇಖನವನ್ನು ಪ್ರೊ|| ಮಹಾಬಲೇಶ್ವರ ರಾವ್ ಅವರು ಸಮರ್ಥವಾಗಿ ಅನುವಾದಿಸಿದ್ದಾರೆ. ಪ್ರಾಚೀನ ಸಾಹಿತ್ಯದ ಅನುಸಂಧಾನವೇ ನಿಂತುಹೋಗಿರುವ ಹೊತ್ತಿನಲ್ಲಿ ಗ್ರಂಥಸಂಪಾದನೆಯಂಥ ಕ್ಲಿಷ್ಟಶಾಸ್ತ್ರಕ್ಕೆ ಸಂಬಂಧಿಸಿದ ಬಿಳಲುಗಳನ್ನು ಜಿ. ರಾಜಶೇಖರ ಅವರು ತಮ್ಮ ಲೇಖನದಲ್ಲಿ (ಪುಟ ೧೮-೨೦) ತುಂಬ ವೈಚಾರಿಕವಾಗಿ ವ್ಯಾಖ್ಯಾನಿಸಿದ್ದಾರೆ. 'ಪಠ್ಯ', 'ಪಾಠಾಂತರ', 'ಮೂಲ', 'ಶುದ್ಧ' ಹಾಗೂ ಅಧಿಕೃತ ಎನ್ನುವ ಮಡಿವಂತ ಪರಿಕಲ್ಪನೆಗಳು ಭಾರತೀಯ ಸಾಹಿತ್ಯದ ಓದಿನಲ್ಲಿ ಮಾಡಿದ ದಾಂಧಲೆ ಅಷ್ಟಿಷ್ಟಲ್ಲ. ಅಂಥ ಫ್ಯಾಸಿಸ್ಟ್ ಸಂಸ್ಕೃತಿ ಪ್ರಜಾಪ್ರಭುತ್ವದಲ್ಲಿ ರಾರಾಜಿಸುತ್ತಿರುವುದು ಭಾರತೀಯರ ಬೌದ್ಧಿಕ ದಿವಾಳಿತನದ ಸಂಕೇತವಾಗಿದೆ. ಇತ್ತೀಚೆಗಂತೂ ಇಡೀ ಭಾರತದುದ್ದಕ್ಕೂ ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ಹಲ್ಲೆಯಾಗುತ್ತಿರುವುದು ಮಾಮೂಲಿ ಸಂಗತಿಯಾಗಿದೆ. ಈ ವಿಷಯದಲ್ಲಿ ಆಳುವ ಸರಕಾರಗಳು ತೋರುತ್ತಿರುವ ಧೃತರಾಷ್ಟ್ರ ಸ್ವಭಾವ, ಕೃತಿಗಳ ಮುಟ್ಟುಗೋಲು, ಪಠ್ಯಗಳ ರದ್ದತಿ, ಲೇಖಕರಿಗೆ ಜೀವ ಬೆದರಿಕೆ ಅಥವಾ ಗಡಿಪಾರು ಮಾಡುವ ಹೀನ ಕೃತ್ಯಗಳಿಗೆ ಬೆನ್ನೆಲುಬಾಗಿ ನಿಂತಿದೆ. ಈ ದೃಷ್ಟಿಯಲ್ಲಿ ಎಲ್ಲಾ ರಾಜಕೀಯ ಪಕ್ಷಗಳಿಗೂ ಸಮಾನ ಪ್ರಣಾಳಿಕೆಯೇ ಇದೆ ಎನ್ನುವದು ಬೇರೆ ಮಾತು.

"ಮುನ್ನೂರು ರಾಮಾಯಣಗಳು: ಪಾಠಾಂತರ ಕುರಿತು ಮೂರು ವಿಚಾರಗಳು, ಐದು ಉದಾಹರಣೆಗಳೊಂದಿಗೆ" ಲೇಖನವು ರಾಮಾನುಜನ್ ಅವರ ವಿಶಾಲ ವಿದ್ವತ್ತಿನ ಫಲಿತವಾಗಿದೆ. ಗ್ರಂಥಸಂಪಾದನೆ ಏಕಮುಖಿಯೂ ಹಾಗೂ ಶುಷ್ಕ ಶಾಸ್ತ್ರೀಯವೂ ಆಗದೆ ಅದು ಬಹುಮುಖಿಯಾಗಿರಬೇಕೆಂದು ಚಿಂತಿಸುತ್ತಿರುವ ಗ್ರಂಥ ಸಂಪಾದನಾ ಶಾಸ್ತ್ರದ ಗಂಭೀರ ವಿದ್ಯಾರ್ಥಿಯಾದ ನನ್ನಂಥವರಿಗೆ ಒಂದು ಹೊಸ ನೈತಿಕ ಸ್ಥೈರ್ಯವನ್ನು ಇಲ್ಲಿನ ಚಿಂತನೆಗಳು ನೀಡಿದವು.

ಭಾರತೀಯ ಲಿಖಿತ ಸಾಹಿತ್ಯ ಚರಿತ್ರೆಯಲ್ಲಿ ಪ್ರತಿಯೊಂದನ್ನು ಸಂಸ್ಕೃತ ಸಾಹಿತ್ಯ ಹಾಗೂ ಸಂಸ್ಕೃತಿಯ ಕಣ್ಣಳತೆಯಲ್ಲಿಯೇ ತೂಗಿ ನೋಡುತ್ತ ಬರಲಾಗಿದೆ. ಮ್ಯಾಕ್ಸ್ ಮುಲ್ಲರ್‌ನಂಥ ಐರೋಪ್ಯ ಪಂಡಿತರು ಸಂಸ್ಕೃತದ ವೇದ-ಪುರಾಣ ಹಾಗೂ ಕಾವ್ಯಗಳನ್ನು ಐರೋಪ್ಯ ಭಾಷೆಗಳಿಗೆ ಭಾಷಾಂತರಿಸಿದ ನಂತರ ಭಾರತೀಯ ಸಾಹಿತ್ಯವೆಂದರೆ ಸಂಸ್ಕೃತ ಸಾಹಿತ್ಯ, ಭಾರತೀಯ ಸಂಸ್ಕೃತಿ ಎಂದರೆ ಸಂಸ್ಕೃತಿ ಮೂಲದ ತಾತ್ವಿಕತೆ ಎನ್ನುವ ಸಂಗತಿಗಳು ಬಳಕೆಗೆ ಬಂದವು.

ಮೊದಲಿನಿಂದಲೂ ಸಂಸ್ಕೃತ ಸಾಹಿತ್ಯ ಮತ್ತು ಸಂಸ್ಕೃತಿಗಳು ಸಾಮ್ರಾಜ್ಯಶಾಹಿ ನೈತಿಕ ಪ್ರಜ್ಞೆಯ ಭಾಗವಾಗಿದ್ದನ್ನು ಚರಿತ್ರೆಯಲ್ಲಿ ನೋಡಿದ್ದೇವೆ. ಶೆಲ್ಡನ್ ಪೊಲಾಕ್ ಗುರುತಿಸುವಂತೆ ಪಾಂಡಿತ್ಯ, ಪ್ರತಿಷ್ಠೆ, ಕೀರ್ತಿ, ಗೌರವ ಹಾಗೂ ಮೂಲ ಎನ್ನುವ ಪರಿಕಲ್ಪನೆಗಳು ಸನಾತನ ಧರ್ಮದ ಪ್ರತಿನಿಧಿಯಾಗಿ ಬೆಳೆದುಬಂದಿವೆ. ೯, ೧೦ನೇ ಶತಮಾನದಲ್ಲಂತೂ ತನ್ನ ಪ್ರಭಾವಿ ಹಾಗೂ ನಿಯಮಬದ್ಧ ನೆಲೆಗಳಾದ ವ್ಯಾಕರಣ, ಛಂದಸ್ಸು, ಅಲಂಕಾರ ಮತ್ತು ಛಂದಸ್ಸಂಪ್ರದಾಯಗಳು ಸಾರ್ವಭೌಮತ್ವವನ್ನೇ ನಿಯಂತ್ರಿಸುವ ಶಕ್ತಿ ಪಡೆದಿದ್ದವು. ಸಂಸ್ಕೃತದ ಈ ನಿಯಮಬದ್ಧ ಸ್ವರೂಪಕ್ಕೆ ಕೇವಲ ಉಪಯುಕ್ತತೆ ಮಾತ್ರ ಕಾರಣವಾಗಿರಲಿಲ್ಲ. ಅದು ಒಂದು ಜನಾಂಗದ ನಿಯಂತ್ರಿತ ಸಾಧನವಾಗಿಯೂ ಪ್ರಭಾವ ಬೀರಿತು. ಸಂಸ್ಕೃತ ಕಾವ್ಯ ವ್ಯವಸ್ಥೆಯ ಈ ಬಿಗಿ ಬಂಧ ವಿಶಾಲ ರಾಜಕೀಯ, ನೈತಿಕ, ಸಾಮಾಜಿಕ ವ್ಯವಸ್ಥೆಗಳ ಪ್ರತಿರೂಪವಾಗಿಯೂ ಕೆಲಸ ಮಾಡಿತು. ಒಬ್ಬ ಸುಸಂಸ್ಕೃತ ವ್ಯಕ್ತಿ ಅಥವಾ ರಾಜನೆಂದರೆ ಶುದ್ಧಭಾಷೆ ಬಳಸುವಾತ. ಅಂದರೆ ವ್ಯಕ್ತಿ ಮತ್ತು ರಾಜನಿರೂಪದ ಅಭಿವ್ಯಕ್ತಿಗೆ ಸಂಸ್ಕೃತವು ಉತ್ತಮ ವಾಹಕವಾಯಿತು. ಸಂಸ್ಕೃತದ ಈ ಪ್ರಮಾಣಬದ್ಧ ವ್ಯಾಕರಣವು ಭಾಷೆಗೆ ಪ್ರತಿಷ್ಠೆಯನ್ನೂ ಸುಸ್ಥಿತಿಯನ್ನೂ ತಂದುಕೊಡಬಲ್ಲುದು ಎನ್ನುವುದು ಅದರ ನಂಬಿಕೆಯಾಗಿತ್ತು. ಇದರಿಂದ ಬಹುಕಾಲ ಉಳಿಯುವಂಥ ಜ್ಞಾನ, ಕೀರ್ತಿ ಹಾಗೂ ಔನ್ನತ್ಯಗಳನ್ನು ಗಳಿಸಲು ಸಾಧ್ಯ. ಭಾಷೆಗಿರುವ ಛಿದ್ರೀಕರಣ ಗುಣವನ್ನು ತಡೆಹಿಡಿಯಲು ಸಾಧ್ಯ ಎನ್ನುವ ನಂಬಿಕೆಯನ್ನು ಪ್ರಸಾರಮಾಡಿತು. ಕಾರಣ ಇಡೀ ಸಂಸ್ಕೃತೇತರ ಸಾಹಿತ್ಯ ಹಾಗೂ ಬದುಕುಗಳು ಸಂಸ್ಕೃತದ ವಿಶ್ವದಿಂದಾಚೆ ಬೆಳೆಯಲಿಲ್ಲ, ಬೆಳೆದರೂ ಅವು 'ಉಪೇಕ್ಷೆ', 'ಕ್ಷುದ್ರತೆ', 'ಅಶುದ್ಧತೆ' ಎನ್ನುವ ಪಾಪ ಪ್ರಣೀತ ನೆಲೆಗಳಲ್ಲಿ ಹುದುಗಿಹೋದವು. ಯಾವ ಕಾವ್ಯ ಸಾಹಿತ್ಯ ಸಂಸ್ಕೃತಿಗಳನ್ನು ತೆಗೆದುಕೊಂಡರೂ ಸಂಸ್ಕೃತದ ಶಾಸ್ತ್ರಸಿದ್ಧಾಂತಗಳು ಅಂತರ್ವಾಹಿನಿಯಾಗಿರುವುದನ್ನು ಕಾಣುತ್ತೇವೆ.

ಗ್ರಂಥಸಂಪಾದನೆ ಬಗ್ಗೆ ಕೆಲಸ ಮಾಡಿದ ನಮ್ಮ ಹಿರಿಯರು ಬುದ್ಧಿವಂತ ಮೇಲ್ವರ್ಗ ಮತ್ತು ಮಧ್ಯಮ ವರ್ಗದಿಂದ ಬಂದವರಾಗಿದ್ದರು. ಇವರು ತಾವು ಬಂದ ನೆಲೆ, ಶಿಕ್ಷಣದಿಂದ ಪಡೆದ ಪರಿಕಲ್ಪನೆಗಳಿಗನುಗುಣವಾಗಿ ಸಂಪಾದನೆಯ ದಾರಿಗಳನ್ನು ಸಂರಚಿಸಿಕೊಂಡರು. ಇಂಗ್ಲಿಷ್ ವಿದ್ಯಾಭ್ಯಾಸ ಮತ್ತು ಇಂಗ್ಲಿಷಿನಿಂದ ಪ್ರೇರಣೆ ಪಡೆದ ಸುಧಾರಿತ ಸಾಮಾಜಿಕ ಸಂದರ್ಭದಲ್ಲಿ ಬದುಕಿದ ಈ ವರ್ಗ ವ್ಯಕ್ತಿವಿಶಿಷ್ಟವಾದ ಅನುಭವದ ಒಂದು ನೆಲೆಯ ಕಾಳಜಿಯನ್ನೇ ಎತ್ತಿಹಿಡಿಯಿತು. ಇವರಿಗೆ ಬದುಕು ಮತ್ತು ಸಂಸ್ಕೃತಿಗಿಂತ ಶಾಸ್ತ್ರವೇ ಮುಖ್ಯವಾಯಿತು. ಹೀಗೆ ಒಂದೆಡೆ ಪುರೋಹಿತಶಾಹಿ ಮತ್ತೊಂದೆಡೆ ವಸಾಹತುಶಾಹಿ ಪರಂಪರೆಗಳಲ್ಲದೆ ಭಾರತೀಯ ಪರಂಪರೆ ಎನ್ನುವ ಕ್ಲಾಸಿಕಲ್ ಮನೋಧರ್ಮ ಗ್ರಂಥಸಂಪಾದನೆಯಲ್ಲಿ ಕಾಣುವಂತೆ ಆಯಿತು. ನಮ್ಮ ಸಂದರ್ಭದ ದೊಡ್ಡ ಬೌದ್ಧಿಕ ದುರಂತವೆಂದರೆ ಶ್ರಮ ಮತ್ತು ಸಂಸ್ಕೃತಿಗಳನ್ನು ಪ್ರತ್ಯೇಕಗೊಳಿಸಿದ್ದು.

> ಗ್ರಂಥಸಂಪಾದನೆ ಬಗ್ಗೆ ಕೆಲಸ ಮಾಡಿದ ನಮ್ಮ ಹಿರಿಯರು ಬುದ್ಧಿವಂತ ಮೇಲ್ವರ್ಗ ಮತ್ತು ಮಧ್ಯಮ ವರ್ಗದಿಂದ ಬಂದವರಾಗಿದ್ದರು. ಇವರು ತಾವು ಬಂದ ನೆಲೆ, ಶಿಕ್ಷಣದಿಂದ ಪಡೆದ ಪರಿಕಲ್ಪನೆಗಳಿಗನುಗುಣವಾಗಿ ಸಂಪಾದನೆಯ ದಾರಿಗಳನ್ನು ಸಂರಚಿಸಿಕೊಂಡರು. ಇಂಗ್ಲಿಷ್ ವಿದ್ಯಾಭ್ಯಾಸ ಮತ್ತು ಇಂಗ್ಲಿಷಿನಿಂದ ಪ್ರೇರಣೆ ಪಡೆದ ಸುಧಾರಿತ ಸಾಮಾಜಿಕ ಸಂದರ್ಭದಲ್ಲಿ ಬದುಕಿದ ಈ ವರ್ಗ ವ್ಯಕ್ತಿವಿಶಿಷ್ಟವಾದ ಅನುಭವದ ಒಂದು ನೆಲೆಯ ಕಾಳಜಿಯನ್ನೇ ಎತ್ತಿಹಿಡಿಯಿತು. ಇವರಿಗೆ ಬದುಕು ಮತ್ತು ಸಂಸ್ಕೃತಿಗಿಂತ ಶಾಸ್ತ್ರವೇ ಮುಖ್ಯವಾಯಿತು. ಹೀಗೆ ಒಂದೆಡೆ ಪುರೋಹಿತಶಾಹಿ ಮತ್ತೊಂದೆಡೆ ವಸಾಹತುಶಾಹಿ ಪರಂಪರೆಗಳಲ್ಲದೆ ಭಾರತೀಯ ಪರಂಪರೆ ಎನ್ನುವ ಕ್ಲಾಸಿಕಲ್ ಮನೋಧರ್ಮ ಗ್ರಂಥಸಂಪಾದನೆಯಲ್ಲಿ ಕಾಣುವಂತಾಯಿತು. ನಮ್ಮ ಸಂದರ್ಭದ ದೊಡ್ಡ ಬೌದ್ಧಿಕ ದುರಂತವೆಂದರೆ ಶ್ರಮ ಮತ್ತು ಸಂಸ್ಕೃತಿಗಳನ್ನು ಪ್ರತ್ಯೇಕಗೊಳಿಸಿದ್ದು. ಇದರಿಂದ ಹುಸಿ ಸಂಸ್ಕೃತಿ ಅಧಿಕೃತವಾಗಿ ಜನಸಂಸ್ಕೃತಿ ಧಾರೆಗಳು ಮೂಲೆ ಹಿಡಿದವು.

ಇದರಿಂದ ಹುಸಿ ಸಂಸ್ಕೃತಿ ಅಧಿಕೃತವಾಗಿ ಜನಸಂಸ್ಕೃತಿ ಧಾರೆಗಳು ಮೂಲೆ ಹಿಡಿದವು. ಸಮಾಜದ ಸಹಜ ಬೆಳವಣಿಗೆಗಳೊಂದಿಗೆ ಸಾವಯವ ಸಂಬಂಧ ಹೊಂದಿದ್ದ ಮಾತು ಮತ್ತು ಬರೆಹಗಳನ್ನು ಪಾವಿತ್ರ್ಯ, ಶುದ್ಧತೆ ಹಾಗೂ ಅಧಿಕೃತತೆಯ ಹೆಸರಿನಲ್ಲಿ ಶಾಸ್ತ್ರೀಯಗೊಳಿಸಲಾಯಿತು. ಇದರಿಂದ ಸ್ಥಳೀಯ ಬದುಕಿನ ಕ್ರಿಯಾತ್ಮಕ ನೆಲೆಗಳು ಉಪೇಕ್ಷೆಗೊಂಡವು. ಬಹುಮುಖಿಯಾದ ಜನಪರ ಪಠ್ಯಗಳು ಅನಧಿಕೃತಗೊಂಡವು ಅವಮಾನಕ್ಕೊಳಗಾದವು. ಈ ರೀತಿಯಾಗಿ ಧಾರ್ಮಿಕ ಎನ್ನುವ ವೈದಿಕ ಪ್ರಣೀತ ರಚನೆಗಳನ್ನು ನಿರ್ದಿಷ್ಟ ಆಕಾರ ಹಾಗೂ ಆಕೃತಿಗಳಲ್ಲಿ ಮುಕ್ಕಾಗದಂತೆ ರಕ್ಷಿಸಿಕೊಂಡು ಬರಲಾಯಿತು.

'ಪಠ್ಯ' ಎನ್ನುವ ಪರಿಕಲ್ಪನೆಯೇ ಒಂದು ನಿರ್ದಿಷ್ಟ ಚಾರಿತ್ರಿಕ ಸಂಸ್ಕೃತಿಕ ಸೃಷ್ಟಿಯ ಫಲ. ಇದನ್ನು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಸೃಷ್ಟಿಯೆಂದು ಕರೆದರೂ ಅದರ ಹಿಂದೆ ಚರಿತ್ರೆಯು ರೂಪಿಸಿದ ರಾಜಕೀಯ ಹಾಗೂ ಸಾಮಾಜಿಕ ಅಂಶಗಳು ಇದ್ದೇ ಇರುತ್ತವೆ. 'ರಚನೆ'ಯೊಂದನ್ನು 'ಸ್ಥಿರ' ಮತ್ತು 'ಶುದ್ಧಸಾಹಿತ್ಯ' 'ಅಧಿಕೃತ ಸಾಹಿತ್ಯ' ಎಂದೂ ಸ್ವಯಂಸಿದ್ಧ ಹಾಗೂ ಸ್ವಯಂಪೂರ್ಣವೆಂದೂ ಕಾಣುವ ಪ್ರಮೆಯಗಳೇ ನಿರ್ದಿಷ್ಟ ಕೇಂದ್ರಕ್ಕೆ ಪಠ್ಯವೊಂದನ್ನು ಕಟ್ಟಿಹಾಕಿ ಅದರ ಬಹುಮುಖೀ ಚಲನೆಗಳನ್ನು ತೊಡೆದುಹಾಕುತ್ತವೆ. ಎಡ್ವರ್ಡ್ ಸೈದ್‌ನ ಒಂದು ಮಾತು ಈ ಸಂದರ್ಭದಲ್ಲಿ ಮುಖ್ಯವೆನಿಸುತ್ತದೆ. ಸಾಹಿತ್ಯವಾಗಲೀ ಸಾಂಸ್ಕೃತಿಕ ಚಿಂತನೆಯಾಗಲೀ ಅಥವಾ ವಿದ್ವತ್‌ಪೂರ್ಣ ಸಂಶೋಧನೆಯಾಗಲೀ ಯಾವುದೂ ರಾಜಕೀಯ ಹಿತಾಸಕ್ತಿಗಳಿಂದ ಮುಕ್ತವಾಗಿರಲು ಸಾಧ್ಯವಿಲ್ಲ. ರಾಜಕೀಯವಾಗಿ ಅಲಿಪ್ತವಾದ ಶುದ್ಧಜ್ಞಾನ ಎಂಬುದು ಇರಲು ಸಾಧ್ಯವಿಲ್ಲ. ಕಾರಣ ಸಾಹಿತ್ಯ ಅಥವಾ ಸಂಸ್ಕೃತಿ ಎಂಬುದು ಒಂದು ಸಾಮಾಜಿಕ ಅರಿವಿನ ಹಾಗೂ ವೈಚಾರಿಕತೆಯ ಅತಿ ಶ್ರೇಷ್ಠ ಗುಣಗಳ ಮೊತ್ತವಾಗಿದ್ದು ಕಾಲ ಹಾಗೂ ಪರಿಸರದ ಸ್ವಭಾವಗಳನ್ನು ಹಿಂದಿಟ್ಟು ಸೃಷ್ಟಿಯಾಗಲಾರದು. ಕವಿ ಅಥವಾ ಕಥೆಗಾರನ ಬದುಕಿನ ಅನುಭವ ಹಾಗೂ ತಿಳುವಳಿಕೆಗಳ ಸಂಕೀರ್ಣ ಮೊತ್ತವೇ ಪಠ್ಯ. ಅಂತಹ ಪಠ್ಯಗಳನ್ನು ಆಯಾ ಭಾಷಿಕ ಅಥವಾ ಪರಿಸರದ ಮಾನವ ಸ್ವಭಾವಗಳು ತನ್ನ ಕಾಲದ ತುರ್ತುಗಳಿಗೆ ತಕ್ಕಂತೆ ಅರ್ಥಮಾಡಿಕೊಳ್ಳುತ್ತವೆ, ಹಿಗ್ಗಿಸುತ್ತವೆ, ಕುಗ್ಗಿಸುತ್ತವೆ ಹಾಗೂ ಪುನರ್ ಕಥನಿಸುತ್ತವೆ. ಹೀಗೆ ಪುನರ್ ಕಥನಗೊಳ್ಳುವಾಗ ಹಲವಾರು ಮೂಲಭೂತ ಬದಲಾವಣೆಗಳು ನಡೆಯುತ್ತವೆ. ಈ ಅರ್ಥಗಳೆಲ್ಲ ಸೇರಿ ಒಂದು 'ಬಯಾಗ್ರಫಿ ಆಫ್ ಟೆಕ್ಸ್ಟ್' ಆಗುತ್ತದೆ. ಯಾವ ಪಠ್ಯ ಕೂಡ ಮೂಲ ರೂಪದಲ್ಲಿ ನಮಗೆ ದೊರೆಯುವುದಿಲ್ಲ. ಮಹಾಭಾರತದ ಕಥೆ ವ್ಯಾಸನಿಂದ ಹಿಡಿದು ಕನ್ನಡದ ಪಂಪ, ರನ್ನ, ಕುಮಾರವ್ಯಾಸ ಕೊನೆಗೆ ಆಧುನಿಕ ಕಾಲದ ಸೃಜನಶೀಲ ಮನಸ್ಸುಗಳಲ್ಲಿ ಪುನರ್ ಕಥನಿಸಿಕೊಂಡ ಬಗೆ ಕಣ್ಮುಂದಿದೆ. ಅದೇ ರೀತಿ ರಾಮಾಯಣದ ಕಥಾವಸ್ತು ಕೂಡ. ವಾಲ್ಮೀಕಿ ರಾಮಾಯಣ ಕಂಬನಲ್ಲಿ ಪಡೆದಿರುವ ಪುನರ್‌ಕಥನ ಇದಕ್ಕೆ ಒಳ್ಳೆ ಉದಾಹರಣೆ. ಒಟ್ಟು ಏಷಿಯಾದ ಸಂಸ್ಕೃತಿ ಭಾಷೆ ಹಾಗೂ ಸಮುದಾಯಗಳಲ್ಲಿ ಹಲವು ರೀತಿಯಲ್ಲಿ ರಾಮಾಯಣ ಕಥೆ ಪುನರ್‌ರೂಪ ಪಡೆದಿದ್ದನ್ನು ಜ್ವಲಂತ ಉದಾಹರಣೆಗಳ ಮೂಲಕ ಶ್ರೀ ಎ. ಕೆ. ರಾಮಾನುಜನ್ ಅವರು ತೋರಿಸಿಕೊಟ್ಟಿದ್ದಾರೆ. ಮೇಲ್ನೋಟಕ್ಕೆ ಹೀಗೆ ಪುನರ್‌ಕಥನಗೊಳ್ಳುವ ರಾಮಾಯಣ ಎಂಬ ಹೆಸರಿನ ಎಲ್ಲ ಪಠ್ಯಗಳೂ ಒಂದೇ ಆಗಿ ಕಾಣಬಹುದು. ಸೂಕ್ಷ್ಮವಾಗಿ ಗಮನಿಸಿದಾಗ ಒಂದು ಇನ್ನೊಂದರ ಹಾಗಿಲ್ಲ. ಇದು ಒಂದೇ ಹೆಸರಿನ ಒಂದಷ್ಟು ಜನರ ಗುಂಪಿನ ಹಾಗೆ. ಹೆಸರಿನ ಕಾರಣವಾಗಿ ಪಠ್ಯದ ಸಮಾನತೆ ಇದೆ ಎನ್ನುವುದು ಹೇಗೆ ಸತ್ಯವಲ್ಲವೋ ಹಾಗೆ ಪಠ್ಯದ ವಿಷಯ ಕೂಡ ಎನ್ನುವ ಅವರ ಮಾತು ಗಮನಾರ್ಹವಾದುದು.

ಎ. ಕೆ. ರಾಮಾನುಜನ್ ಅವರೇ ಹೇಳುವಂತೆ 'ರಾಮಾಯಣವೆಂದರೆ ಕೇವಲ ವ್ಯಕ್ತಿಗತ ಪಠ್ಯಗಳ ಕಂತೆಯಲ್ಲ; ಅದು ವೈವಿಧ್ಯಮಯ ಪ್ರಯತ್ನಗಳ ಒಂದು ಮಾರ್ಗ-ಜಾತಿ ಎನ್ನಬಹುದು' ಎನ್ನುವ ಮಾತು ಭಾರತೀಯ ಶುದ್ಧ ಪಠ್ಯದ ಪರಿಕಲ್ಪನೆಯನ್ನು ವಿಘಟಿಸುತ್ತದೆ. ಯಾವುದೇ ಪ್ರಾಚೀನ ಕಾವ್ಯ ಅಥವಾ ಕಥಾನಕಗಳನ್ನು ತೆಗೆದುಕೊಂಡರೂ ಅವು ಕಥಾನಕಗಳ ದೃಷ್ಟಿಯಿಂದ ಒಂದೊಮ್ಮೆ ಒಂದೇ ಹೋಲಿಕೆಯಿದ್ದರೂ ಆ ಕಥಾನಕಗಳಿಗೆ ಆಯಾ ಕಾಲದ ಸ್ಥಳೀಯ ವಿವರಗಳು, ಜಾನಪದ ಸಂಗತಿಗಳು, ಇತ್ಯಾದಿಗಳು ಸೇರಿಕೊಳ್ಳುತ್ತವೆ. ಇತ್ತೀಚಿಗೆ ನಾವು ಸಂಪಾದಿಸಿದ 'ವಿಷ್ಣುಶರ್ಮನ ಪಂಚತಂತ್ರದ ಕಥೆಗಳ ಕನ್ನಡಸಾರ ಸಂಗ್ರಹ' ಕೃತಿಯ ಸಂಪಾದನ ಅನುಭವ ಉತ್ತಮ ನಿದರ್ಶನವಾಗಬಹುದು. ಸಾಮಾನ್ಯವಾಗಿ ಪಂಚತಂತ್ರ ಸಂಪ್ರದಾಯಗಳಲ್ಲಿ ದಕ್ಷಿಣ ಭಾರತದಲ್ಲಿ ಪ್ರಚಲಿತವಾಗಿರುವುದು ದುರ್ಗಸಿಂಹನ ಪಂಚತಂತ್ರ. ಉತ್ತರ ಭಾರತದಲ್ಲಿ ಹಾಗೂ ಆಗ್ನೇಯ ಏಷಿಯಾದಲ್ಲಿ ಪ್ರಚಲಿತವಿರುವುದು ವಿಷ್ಣುಶರ್ಮನ ಸಂಪ್ರದಾಯದ ಪಂಚತಂತ್ರ. ವಿಚಿತ್ರವೆಂದರೆ ಬಳ್ಳಾರಿ ಜಿಲ್ಲೆಯ ಕುರುಗೋಡಿನ ಮಿಂಚಿಕೇರಿಯಲ್ಲಿ ವಿಷ್ಣುಶರ್ಮನ ಸಂಪ್ರದಾಯದ ಪಂಚತಂತ್ರದ ಕನ್ನಡ ಹಸ್ತಪ್ರತಿ ದೊರಕಿತು. ಕಥಾನಕದಲ್ಲಿ ದುರ್ಗಸಿಂಹ ಹಾಗೂ ವಿಷ್ಣುಶರ್ಮರಲ್ಲಿ ಅಂಥ ಮೇಲ್ನೋಟದ ವ್ಯತ್ಯಾಸಗಳೇನಿಲ್ಲ. ಆದರೆ ಕಥಾ ನಿರೂಪಣೆ, ಪಾತ್ರ ನಿರ್ವಹಣೆ, ತಂತ್ರಗಾರಿಕೆಗಳಲ್ಲಿ ತುಂಬಾ ವ್ಯತ್ಯಾಸಗಳಿವೆ. ಸ್ಥಳೀಯ ಸಂಗತಿಗಳೂ ಸೇರಿವೆ. ಸಂಸ್ಕೃತ ಶ್ಲೋಕ ಹಾಗೂ ಕನ್ನಡ ಟೀಕುಗಳಿಂದ ಕೂಡಿರುವ ಈ ಪ್ರತಿಯು ಪಕ್ಕಾ ಬಳ್ಳಾರಿಯ ಭಾಷಿಕ ಚಹರೆಯನ್ನು ಹೊಂದಿದೆ. ಸಂಸ್ಕೃತ ಶ್ಲೋಕಗಳು ಶುದ್ಧ ಸಂಸ್ಕೃತದಲ್ಲಿ ಇಲ್ಲ. ಕನ್ನಡವನ್ನೇ ಓದಿದಂತೆ ಸಂಸ್ಕೃತ ಇಲ್ಲಿ ಒಗ್ಗಿಕೊಂಡಿದೆ. ಅದೇ ರೀತಿ ತಮಿಳಿನ ಕಂಬರಾಮಾಯಣ, ಬಂಗಾಳಿಯ ಕೃತಿವಾಸನ ವ್ಯಕ್ತಗಳಲ್ಲೂ ತಮಿಳು ಹಾಗೂ ಬಂಗಾಳಿ ಸಂಪ್ರದಾಯದ ಚಹರೆಗಳು ಕಾಣಿಸಿಕೊಂಡಿವೆ.

ಹೀಗೆ ಕೃತಿ ಹಲವು ಪಠ್ಯದ ಆವರಣವನ್ನು ಹೊಂದಿರುತ್ತದೆ. ಕೃತಿಕಾರ ಕೃತಿರಚನೆಗಾಗಿ ಆಯ್ದುಕೊಂಡ ಕಥಾವಸ್ತು ಒಂದು ಪಠ್ಯವಾದರೆ, ಕಥಾವಸ್ತುವಿಗಾಗಿ ಕಲ್ಪಿಸಿಕೊಂಡಿರುವ ಸಂದರ್ಭಗಳು ಮತ್ತು ವ್ಯಾಖ್ಯಾನಗಳ ಪಠ್ಯ ಮತ್ತೊಂದು, ಸಂಕಲನಕಾರರ ತಾತ್ವಿಕತೆಯನ್ನು ಮಂಡಿಸುವ ಪಠ್ಯ ಮಗದೊಂದಾಗಿರುತ್ತದೆ. ಅದೇ ರೀತಿ ಪಠ್ಯಗಳೊಳಗೇ ಕಾಣುವ 'ಪೊಸತಾಗಿ ಹೇಳಿದೆ', 'ಕೇಳು ಜನಮೇಜಯ', 'ಹೇಳಿದವರಿಗೆ ಕೇಳಿದವರಿಗೆ ಸನ್ಮಂಗಲವಾಗಲಿ' ಎನ್ನುವ ಮಾತಾಗಲಿ ''ಕಾವ್ಯವಿದು ಭುವನದೊಳ್ ಸಕಲಜನರಿಂದ ಸುಶ್ರಾವ್ಯಮಪ್ಪಂತೆ...'' ಎನ್ನುವ ಕವಿ ಲಕ್ಷ್ಮೀಶನ ಮಾತಾಗಲಿ ಕಾವ್ಯ - ಕಥಾನಕಗಳ ಶ್ರವ್ಯ ಪರಂಪರೆಗಳನ್ನೇ ಹೇಳುತ್ತವೆ. ರಾಮಾಯಣ – ಮಹಾಭಾರತದ ಕಥೆಗಳು ಭಾರತೀಯ ಸಾಹಿತ್ಯದಲ್ಲಿ ಇಂದಿಗೂ ಪುನರ್‌ಕಥನಗೊಳ್ಳುತ್ತಿರುವ ಸಂಗತಿಗಳು ಸೃಜನಶೀಲ ಕಾವ್ಯ ನೆಲೆಗಳೊಂದಿಗೆ ಭಾರತೀಯ ಕಾವ್ಯ ಪರಂಪರೆಯ ಜನಪ್ರಿಯ ಪರಂಪರೆಗಳ

ಮುಖ್ಯ ಸತ್ವಗಳನ್ನು ಒಳಗೊಂಡಿದ್ದು ಗ್ರಹಿತವಾಗುತ್ತದೆ. ಇದು ನಮ್ಮ ಸಾಹಿತ್ಯ ಹಾಗೂ ಸಂಸ್ಕೃತಿಗಳ ಆಂತರಿಕ ವಿನ್ಯಾಸಕ್ಕೆ ಹಿಡಿದ ಕನ್ನಡಿಯಾಗಿದೆ. ಅಂದರೆ ಯಾವುದನ್ನು ನಿರ್ದಿಷ್ಟ ಪಥ್ಯವೆಂದು ಕರೆಯುತ್ತೇವೆಯೋ ಆ ಪಥ್ಯಗಳೊಳಗೆ ಆ ನಿರ್ದಿಷ್ಟತೆಯನ್ನು ನಿರಾಕರಿಸುವ ಸಂಗತಿಗಳಿರುವುದು ಇದರಿಂದ ಸ್ಪಷ್ಟವಾಗುತ್ತದೆ.

ಕನ್ನಡದ ಮೊದಲ ಕೃತಿ ಕವಿರಾಜಮಾರ್ಗ ಹೇಳುವಂತೆ :

*ದೋಷಮನೆ ಗುಣದವೋಲು।*
*ದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್।*
*ದೇಶಿಯನೆನಿರಿಸಿ ಖಂಡ।*
*ಪ್ರಾಸಮನತಿಶಯಮಿದೆಂದು ಯತಿಯಂಮಿಕ್ಕರ್ । (ಕವಿರಾ, ೨೫-೮೫)*

ಎನ್ನುವ ಪದ್ಯವಾಗಲೀ,

*ದೋಷಂಗಳಿಂತು ಸಂ*
*ಶ್ಲೇಷದೊಳಾದಂದು ಸಕಲ ವಿದ್ವತ್ಸಭೆಯೊಳ್*
*ದೂಷಿಸುಗುಂ ಕೃತಿವಧುವಂ*
*ಭಾಷಾವಿದರದರ ತೆರನುಳಿಗೀ ದೆಸೆಯಿಂ (ಕವಿರಾ, ೧೦೦-೮೯)*, ಎನ್ನುವುದಾಗಲೀ, ಸಂಸ್ಕೃತ ಅಭಿಜಾತ ಪರಂಪರೆ ಯಾವುದನ್ನು ದೋಷವೆಂದು ಹೇಳುತ್ತದೋ ಕನ್ನಡದಂಥ ದೇಶೀ ಭಾಷೆಗಳು ಆರಂಭದಿಂದಲೂ ಅದನ್ನು ನಿರಾಕರಿಸುತ್ತ ಬಂದಿರುವುದನ್ನು ಸ್ಪಷ್ಟಗೊಳಿಸುತ್ತವೆ. ದೋಷಗಳನ್ನು ಕೇಡುಗಳನ್ನಾಗಿ ಗಣಿಸದೆ ಭಿನ್ನತೆಗಳನ್ನಾಗಿ ಗುಣಗಳನ್ನಾಗಿ ಪರಿಭಾವಿಸಿ ಚಲನಶೀಲ ಸಂಸ್ಕೃತಿಯೊಂದನ್ನು ಕಟ್ಟಿಕೊಡುವ ಕವಿರಾಜಮಾರ್ಗ, ಪಂಪಭಾರತ, ವಡ್ಡಾರಾಧನೆ. ಕುಮಾರವ್ಯಾಸ ಭಾರತದಂಥ ಕೃತಿಗಳು ಕನ್ನಡದ ಜಾಯಮಾನವನ್ನು ಎತ್ತಿತೋರಿಸುತ್ತವೆ. ಅದೇ ಕಾಲಕ್ಕೆ ಸಂಸ್ಕೃತದ ನಿರಾಕರಣೆಯನ್ನು ಮಂಡಿಸುತ್ತವೆ. ಸಂಸ್ಕೃತದ ಏಕಸ್ವಾಮ್ಯ ಗುಣಕ್ಕೆ ಪೆಟ್ಟುಕೊಟ್ಟ ಇಂಥ ಕೃತಿಗಳನ್ನು ಎಲ್ಲಾ ದೇಶಭಾಷೆಗಳಲ್ಲೂ ಕಾಣುತ್ತೇವೆ. ಆದರೂ ಅವನ್ನು ಶುದ್ಧೀಕರಿಸುವ ಏಕೀಕರಿಸುವ ಒತ್ತಾಯದ ಪ್ರಹಾರಗಳೂ ಬೌದ್ಧಿಕಕ್ರಿಯೆಯ ಭಾಗಗಳಾಗಿ ನೆಲೆಗಾಣುತ್ತಲೇ ಬಂದಿವೆ. ಭಾರತೀಯ ಸಾಹಿತ್ಯ - ಸಂಸ್ಕೃತಿ ಕುರಿತು ಇಂಥ ಓರಿಯಂಟಲಿಸ್ಟ್ ಗ್ರಹಿಕೆಗಳನ್ನು ತಮ್ಮ ಶ್ರಮಪೂರ್ವ ಕ್ಷೇತ್ರಾನುಭವ ಹಾಗೂ ತೀಕ್ಷ್ಣವೈಚಾರಿಕತೆಯಿಂದ ಬುಡಮೇಲು ಮಾಡಿದ ಸಮಕಾಲೀನ ಭಾರತೀಯ ವಿದ್ವಾಂಸರಲ್ಲಿ ಶ್ರೀ ಎ. ಕೆ. ರಾಮಾನುಜನ್ ಅವರು ಮುಖ್ಯರಾಗುತ್ತಾರೆ. ಧರ್ಮ ಹಾಗೂ ಸಂಸ್ಕೃತಿಗಳನ್ನು ಕುರಿತು ಸಾಮ್ರಾಜ್ಯಶಾಹಿ ಹಾಗೂ ವಸಾಹತುಶಾಹಿ ಧೋರಣೆಗಳನ್ನೇ ತಮ್ಮ ಸಿದ್ಧಾಂತವನ್ನಾಗಿಸಿಕೊಂಡ ಕೆಲವು ಹಿತಾಸಕ್ತಿಗಳು ಇಂಥ ವೈಚಾರಿಕ ಹಾಗೂ ಉಪಯುಕ್ತ ಹೊಸತನದ ಚಿಂತನೆಗಳನ್ನು ಕುರುಡುತನದಿಂದ ಹತ್ತಿಕ್ಕುತ್ತಿರುವುದು ಪ್ರಜಾಪ್ರಭುತ್ವಕ್ಕೆ ಮಾಡಿದ ಅವಮಾನವಾಗಿದೆ. ಕನ್ನಡ ಜಾನಪದ ಹಾಗೂ ವಚನ ಸಾಹಿತ್ಯದ ಸತ್ವಗಳನ್ನು ವಿದೇಶದಲ್ಲಿ ಮೆರೆಯುವಂತೆ ಮಾಡಿದ 'ಜಗತ್‌ಶ್ರೇಷ್ಠ ಕನ್ನಡ ಚಿಂತಕ'ನಿಗೆ ಮಾಡಿದ ಅವಮಾನದ ವಿರುದ್ಧ ಸ್ವಾಭಿಮಾನದ ಧ್ವನಿ ಎತ್ತಿದ 'ಹೊಸತು' ಪತ್ರಿಕೆಗೆ ನನ್ನ ಅಭಿನಂದನೆಗಳು. ಈ ಸ್ವಾಭಿಮಾನದ ಕೂಗಿಗೆ ಈ ಮೂಲಕ ನನ್ನ ಧ್ವನಿಯನ್ನು ಸೇರಿಸುತ್ತಿದ್ದೇನೆ.

**ಡಾ॥ ವೀರೇಶ ಬಡಿಗೇರ**
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

# ನ್ಯೂಕ್ಲಿಯರ್ ಒಪ್ಪಂದ – ಮುಂದಿನ ಹೆಜ್ಜೆ

## ಪರಮಾಣು ಒಪ್ಪಂದ : 'ಎಡಪಕ್ಷಗಳು ಎಡವಿದ್ದು ತಪ್ಪು' (ಸೆಪ್ಟೆಂಬರ್ ೨೦೦೮) ಲೇಖನಕ್ಕೆ ಸಂಬಂಧಿಸಿದಂತೆ ಒಂದು ಟಿಪ್ಪಣಿ

ನ್ಯೂಕ್ಲಿಯರ್ ಒಪ್ಪಂದ ಒಂದೇ ನಮ್ಮ ಆದ್ಯ ಸಮಸ್ಯೆಯಲ್ಲ. ಆದರೆ ೨೦೦೫ರಲ್ಲಿ ಪ್ರಾರಂಭವಾದ ಒಪ್ಪಂದ ಮಾತುಕತೆಯ ಬಿಳಲುಗಳಿಗೊಂದು ರೂಪ ಕೊಟ್ಟು ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಸಾಗಲಿರುವ ಹೊಳಹನ್ನು ಸಾಧ್ಯವಿದ್ದಷ್ಟು ಬೇಗನೆ ಸ್ಪಷ್ಟಗೊಳಿಸಬೇಕಾದದ್ದು ಆಡಳಿತ ನಡೆಸುವವರ ಹೊಣೆ. ಏಕೆಂದರೆ ಶಕ್ತಿಯ ಬಿಕ್ಕಟ್ಟಿನೊಂದಿಗೆ ಇದು ದೇಶದ ಅಸ್ಮಿತೆಗೆ ಸಂಬಂಧಿಸಿದ ಹಲವು ಪ್ರಶ್ನೆಗಳನ್ನು ಹುಟ್ಟುಹಾಕಿದೆ. ಒಪ್ಪಂದಕ್ಕೆ ಸಂಬಂಧಿಸಿದ ಒಂದೊಂದು ತಿರುವೂ ತೀವ್ರ ಗಮನ ಸೆಳೆಯುತ್ತಿದೆ. ಆದ್ದರಿಂದಲೇ ಹಣದುಬ್ಬರ, ಕೃಷಿ ಸಮಸ್ಯೆ, ನೆರೆ-ಬರ, ಆಂತರಿಕ ಅಭದ್ರತೆಗಳಂತೆ ಶಕ್ತಿಯ ಪೂರೈಕೆಗೆ ಸಂಬಂಧಿಸಿದ ಈ ಒಪ್ಪಂದವೂ ಚರ್ಚೆಗೆ ಒಳಗಾಗಿದೆ.

**ಒಪ್ಪಂದಕ್ಕೆ ಹಿನ್ನೆಲೆಯಾದ ಕೆಲವು ಅಂಶಗಳು ಹೀಗಿವೆ :**

೧. ಭಾರತ ನಡೆಸಿದ ಮೊದಲ ನ್ಯೂಕ್ಲಿಯರ್ ಸ್ಫೋಟಕ್ಕೆ (೧೯೭೪) ಉತ್ತರ ಎಂಬಂತೆ ನ್ಯೂಕ್ಲಿಯರ್ ಪೂರೈಕೆ ಗುಂಪು ಎನ್.ಎಸ್.ಜಿ. ಹುಟ್ಟಿಕೊಂಡಿತು (೧೯೭೫). ಅಂದಿಗೂ ಒಂದು ೧೨೩ ಒಪ್ಪಂದ ಇತ್ತು. ಆದರೆ ತಾರಾಪುರ ರಿಯಾಕ್ಟರಿಗೆ ಬೇಕಾದ ಇಂಧನ ಪೂರೈಕೆಯನ್ನು ಅಮೆರಿಕ ರದ್ದು ಮಾಡಿತು. ಆಗ ಭಾರತಕ್ಕೆ ಅಂತರರಾಷ್ಟ್ರೀಯ ನ್ಯೂಕ್ಲಿಯರ್ 'ಕೊಡು-ಕೊಳ್ಳು' ಕಷ್ಟವಾಯಿತು. ಆದರೂ ಭಾರತ ಸ್ವಪ್ರಯತ್ನದಿಂದ 'ನ್ಯೂಕ್ಲಿಯರ್ ಶಸ್ತ್ರವಂತ' ರಾಷ್ಟ್ರವಾಯಿತು. ಆದರೆ ನ್ಯೂಕ್ಲಿಯರ್ ಕ್ಲಬ್ಬಿಗೆ ಸೇರಿದ ರಾಷ್ಟ್ರಗಳು ಈ ವಾಸ್ತವತೆಯನ್ನು ಒಪ್ಪಲಿಲ್ಲ. ಅವರ ಪಾಲಿಗೆ ಔಪಚಾರಿಕವಾಗಿ ಭಾರತ 'ನ್ಯೂಕ್ಲಿಯರ್ ಶಸ್ತ್ರ ರಹಿತ' ರಾಷ್ಟ್ರ, ಆದರೆ ತಾಂತ್ರೀಯವಾಗಿ ಮುಂದುವರಿದಿರುವುದರಿಂದ ನ್ಯೂಕ್ಲಿಯರ್ ವ್ಯಾಪಾರಕ್ಕೆ ಯೋಗ್ಯ ಗಿರಾಕಿ !

೨. ಕಳೆದ ಆರು ದಶಕಗಳಲ್ಲಿ ನ್ಯೂಕ್ಲಿಯರ್ ತಾಂತ್ರದಲ್ಲಿ (ನ್ಯೂಕ್ಲಿಯರ್ ಪ್ರತಿಕ್ರಿಯೆಗಳ ಜ್ಞಾನ, ಸಾಧನ-ಸಾಮಗ್ರಿಗಳ ಬೆಳವಣಿಗೆ, ನ್ಯೂಕ್ಲಿಯರ್ ತ್ಯಾಜ್ಯದ ಮರುಸಂಸ್ಕರಣೆ ಇತ್ಯಾದಿ) ಭಾರತ ಒಂಟಿಯಾಗಿ ಸಾಗಿ ತನ್ನದೇ ದಾರಿಯನ್ನು ಕಂಡುಕೊಂಡಿದೆ. ನ್ಯೂಕ್ಲಿಯರ್ ಇಂಧನದ ಇಬ್ಬಗೆಯ ಬಳಕೆಯನ್ನು ರಿಯಾಕ್ಟರ್-ಬಾಂಬು ಕರಗತ ಮಾಡಿಕೊಂಡಿದೆ. ನ್ಯೂಕ್ಲಿಯರ್ ತಾಂತ್ರವನ್ನು ಮುನ್ನಡೆಸಬಲ್ಲ ಪರಿಣತಿಯುಳ್ಳ ಮಾನವ ಸಂಪನ್ಮೂಲವನ್ನು ಬೆಳೆಸಿದೆ.

೩. ದೇಶದಲ್ಲಿ ಪೂರೈಕೆಯಾಗುವ ವಿದ್ಯುತ್ತಿನಲ್ಲಿ ನ್ಯೂಕ್ಲಿಯರ್ ಶಕ್ತಿಯ ಪಾಲು ಈಗ ಕೇವಲ ಶೇ. ೩. ಕಲ್ಲಿದ್ದಲು, ಕಚ್ಚಾತೈಲಗಳಂಥ ಫಾಸಿಲ್ ಇಂಧನಗಳು, ಜಲವಿದ್ಯುತ್ತು ಮತ್ತು ಸದಾ ನವೀಕರಿಸಬಹುದಾದ ಸೌರಶಕ್ತಿ, ಪವನಶಕ್ತಿಗಳು ಉಳಿದ ಹೆಚ್ಚಿನ ಪಾಲನ್ನು ತುಂಬುತ್ತವೆ. ವಿವಿಧ ಆಕರಗಳಿಂದ ಒದಗುವ ವಿದ್ಯುತ್ತಿನ ಪ್ರಮಾಣಗಳು ಹಿಂದಿನಂತೆ ಈಗ ಇಲ್ಲ; ಈಗಿನಂತೆ ಮುಂದೆ ಉಳಿಯುವುದಿಲ್ಲ. ನಮ್ಮಲ್ಲಿ ಸಮೃದ್ಧವಾಗಿರುವ ಥೋರಿಯಮ್ ಅದಿರನ್ನು ಬಳಸಿ ಮೂರು ಹಂತಗಳ ಇಂಧನ ಚಕ್ರವನ್ನು ಆಧರಿಸಿ ನ್ಯೂಕ್ಲಿಯರ್ ಶಕ್ತಿಯ ಪಾಲನ್ನು ಅನೇಕಪಟ್ಟು ಹೆಚ್ಚಿಸಲು ಸಾಧ್ಯವಿದೆ. ಅಧಿಕ ಪ್ರಮಾಣದಲ್ಲಿ ನ್ಯೂಕ್ಲಿಯರ್ ಶಕ್ತಿಯನ್ನು ಬಳಸುವ ಫ್ರಾನ್ಸ್ ಮತ್ತು ಜಪಾನ್ ಕೂಡ ಇದನ್ನು ಅನುಸರಿಸುವುದಿಲ್ಲ. ಈ ಚಕ್ರವನ್ನು ಓಡಿಸಲು ನಮಗೆ ವಿದೇಶೀ ಯುರೇನಿಯಮ್ ಬೇಕು, ಇತರೆಡೆಗಳಲ್ಲಿ ಪ್ರಚಲಿತವಾಗಿರುವ ತಂತ್ರಗಳ ತಿಳಿವಳಿಕೆಯೂ ಬೇಕು.

ಈ ಹಿನ್ನೆಲೆಯಲ್ಲಿ ಎನ್.ಎಸ್.ಜಿ.ಯ ಪ್ರಭಾವೀ ಸದಸ್ಯವಾದ ಅಮೆರಿಕದೊಡನೆ (ಅದರ ಅಧ್ಯಕ್ಷರೊಡನೆ) ಮಾತುಕತೆ ನಡೆಯುವಾಗ ಅಮೆರಿಕದ ಆದ್ಯತೆಗಳು ತನ್ನ ರಾಷ್ಟ್ರೀಯ ಆಸಕ್ತಿಗಳಿಗನುಗುಣವಾಗಿ ಬೇರೆಯೇ ಇರುವುದು ಸಹಜ. ಆದರೆ ಅವು ಭಾರತದ ಮೇಲೆ ಯಾವುದೇ ಪರಿಣಾಮ ಬೀರುವುದಿಲ್ಲ ಎಂದು ಮಿತ್ರ ಪಕ್ಷಗಳಿಗೆ ವಿರೋಧ ಪಕ್ಷಗಳಿಗೆ ಮನವರಿಕೆ ಮಾಡುವುದರಲ್ಲಿ ಸರಕಾರ ಯಶಸ್ವಿಯಾಗಲಿಲ್ಲ. ಇರಾನಿನ ಶಾಂತಿಯುತ ನ್ಯೂಕ್ಲಿಯರ್ ಚಟುವಟಿಕೆಗಳ ಬಗ್ಗೆ ನಮ್ಮ ಸರಕಾರ ತಳೆದ ಧೋರಣೆ ವಸ್ತುನಿಷ್ಠವಾಗಿರಲಿಲ್ಲ. ಅಂತರರಾಷ್ಟ್ರೀಯ ಪರಮಾಣು ಶಕ್ತಿ ಮಂಡಲಿ ಐ.ಎ.ಇ.ಎ.ಯ ಸುರಕ್ಷತಾ ಶರ್ತಗಳನ್ನು ಗೌಪ್ಯತೆಯ ಕಾರಣ ಒಡ್ಡಿ ಮಿತ್ರಪಕ್ಷಗಳೊಡನೆ ಹಂಚಿಕೊಳ್ಳದ ಸರಕಾರ ಅನಂತರ ವರ್ಲ್ಡ್‌ವೈಡ್ ವೆಬ್‌ನಲ್ಲಿ ಸಾರ್ವತ್ರಿಕಗೊಳಿಸಿತು. ಇಂಥ ವರ್ತನೆಗಳಿಂದ ಅಮೆರಿಕದ ನೈಜ ಉದ್ದೇಶಗಳ ಬಗ್ಗೆ ಮೊದಲೇ ಸಂದೇಹದಿಂದಿದ್ದ ಎಡಪಕ್ಷಗಳ ಗುಮಾನಿ ಮತ್ತೂ ಬಲವಾಯಿತು. ನ್ಯೂಕ್ಲಿಯರ್ ಒಪ್ಪಂದದ ಬಗ್ಗೆ ಇಡೀ ದೇಶ ಒಂದು ಸಾಮಾನ್ಯ ನಿಲುವನ್ನು ತೆಗೆದುಕೊಳ್ಳುವುದಕ್ಕೆ ಸಾಧ್ಯವಿತ್ತು. ಒಪ್ಪಂದವನ್ನು ಜಾರಿ ಮಾಡಲು ಇನ್ನೂ ಕೆಲವು ವರ್ಷಗಳು ಬೇಕಾದುದರಿಂದ ಮುಂದೆ ಬರುವ ಯಾವುದೇ ಸರಕಾರಕ್ಕೆ ಅದು ಸಾಧ್ಯವಾಗುವಂಥ ವಾತಾವರಣ ಮೂಡಬೇಕಾಗಿತ್ತು. ಆದರೆ ಹಾಗೆ ಆಗಲಿಲ್ಲ.

ನಾವು ನಡೆಸಬಹುದಾದ ನ್ಯೂಕ್ಲಿಯರ್ ವ್ಯವಹಾರವನ್ನು ಎನ್.ಎಸ್.ಜಿ. ಈಗ ಮಾನ್ಯ ಮಾಡಿದೆ. ಅಮೆರಿಕದ ೧೨೩ ಒಪ್ಪಂದದ ಶರ್ತಗಳನ್ನು ಭಾರತ ಒಪ್ಪಲೇಬೇಕೆಂದಿಲ್ಲ. ಈಗಿನ ಸ್ಥಿತಿಯಲ್ಲಿ ಫ್ರಾನ್ಸ್, ರಷ್ಯ ಮತ್ತಿತರ ರಾಷ್ಟ್ರಗಳೊಂದಿಗೆ ನೇರವಾಗಿ ವ್ಯವಹರಿಸಲು ಸಾಧ್ಯವಾದೀತು. ಈ ಬೆಳವಣಿಗೆಗಳನ್ನು ನೋಡಿದಾಗ ಎಡಪಕ್ಷಗಳನ್ನು ಕಾಡಿದ ಆತಂಕವೂ ಹೆಚ್ಚಾಯಿತೆನಿಸುತ್ತದೆ.

- ಅದ್ಯನಡ್ಕ ಕೃಷ್ಣಭಟ್, ಮೈಸೂರು



## ಶಿಕ್ಷಣದಲ್ಲಿ ಮನೋವಿಜ್ಞಾನ

*ಡಾ|| ಮಹಾಬಲೇಶ್ವರ ರಾವ್*

**ಪುಟ : ೨೮೦** ಬೆಲೆ : ರೂ. ೧೫೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಅಂಚೆ ಪೆಟ್ಟಿಗೆ ಸಂಖ್ಯೆ ೫೧೪೯, ಬೆಂಗಳೂರು - ೫೬೦ ೦೦೧

'ಕಲಿಕೆ'ಗೆ ಸಂಬಂಧಿಸಿದಂತೆ ಅಪರೂಪದ ಕೃತಿಯಿದು. ಒಂದೆಡೆ ಮನೋವಿಜ್ಞಾನದ ಸಿದ್ಧಾಂತಗಳನ್ನು ಸ್ಪಷ್ಟವಾಗಿ ವಿವರಿಸಿಕೊಳ್ಳುತ್ತಾ ಕಲಿಕೆಯಲ್ಲಿ ಅವುಗಳ ಬಳಕೆಯ ಸಾಧ್ಯತೆಗಳನ್ನು ಚರ್ಚಿಸುತ್ತಿದ್ದರೆ, ಮತ್ತೊಂದೆಡೆ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಶೈಕ್ಷಣಿಕ ಚಟುವಟಿಕೆಗಳನ್ನು ರಚನಾತ್ಮಕವಾಗಿ ಸಜೀವಗೊಳಿಸಲು ಸಾಧ್ಯವಾಗುವುದನ್ನು ಈ ಕೃತಿಯ ವಿವರಗಳು ಕಟ್ಟಿಕೊಡುತ್ತವೆ. ಇಲ್ಲಿ ಶಿಸ್ತುಬದ್ಧ, ಕ್ರಮಬದ್ಧ ನಿರೂಪಣೆಯಿದೆ. ಪ್ರತಿಯೊಂದನ್ನೂ ಹಂತಹಂತವಾಗಿ ಬಿಡಿಸಿ ಬಿಡಿಸಿ ಉಪಶೀರ್ಷಿಕೆಗಳ ಮೂಲಕ ದೀರ್ಘವಾಗಿಯೇ ಚರ್ಚಿಸಲಾಗಿದೆ. ಹೀಗಾಗಿ ಶಿಕ್ಷಕರಿಗೆ, ವಿದ್ಯಾರ್ಥಿಗಳಿಗೆ, ತುಂಬಾ ಉಪಯುಕ್ತವಾಗಿದ್ದು ಅನೇಕ ವೇಳೆ ಸಿದ್ಧಾಂತ ಅಥವಾ ತತ್ತ್ವಗಳನ್ನು ರೂಪಿಸುವವರಿಗೆ ಅವುಗಳ ಪ್ರಾಯೋಗಿಕ ಸಾಧ್ಯತೆಗೆ ನೆರವಾಗುತ್ತದೆ.






## ವೋರ್ಝಾ ಆಲ್‌ಬರ್ಟ್ (ಅನುವಾದಿತ ನಾಟಕ)

*ಅನು : ಡಾ|| ಸಿದ್ಧಗಂಗಯ್ಯ ಹೊಲತಾಳ್*

**ಪುಟ : viii + ೧೦೦** ಬೆಲೆ : ರೂ. ೮೦

**ಅಕ್ಕ ಪ್ರಕಾಶನ,** ಇ.ಎಲ್.ಎನ್., ನಂ. ೯೩೦
ಕುವೆಂಪು ನಗರ, ಬಿ. ಎಂ. ರಸ್ತೆ, ಕುಣಿಗಲ್ - ೫೭೨ ೧೩೦

ಆಫ್ರಿಕಾ ದೇಶದ ಹೋರಾಟದ ಪ್ರತೀಕವಾದ ಇದು ಬೀದಿ ನಾಟಕದ ಸ್ವರೂಪದಲ್ಲಿದೆ. ಇದರಲ್ಲಿ ಪಾರ್ಸಿ ಮತ್ತು ಜೊಂಗೆನಿ ಎಂಬ ಎರಡೇ ಪಾತ್ರಗಳಿದ್ದು ಅವು ಹತ್ತಾರು ಪಾತ್ರಗಳನ್ನು ಧರಿಸುತ್ತವೆ. ಜನಾಂಗೀಯ ನಿಂದನೆಗೆ ಒಳಗಾದ, ಹಿಂಸೆ, ತುಳಿತಕ್ಕೆ ಬಲಿಯಾದವರ ಪ್ರತಿರೋಧವನ್ನು ಜೀವಾಳವಾಗಿ ಉಳ್ಳ ಈ ನಾಟಕ ಸಮಾಧಿಗಳಲ್ಲಿರುವ ಹೋರಾಟಗಾರರ ಸ್ಮರಣೆಗಾಗಿಯೇ ರೂಪುಗೊಂಡಿದೆ. ತಾಯ್ನಾಡಲ್ಲೇ ಅನಾಥರಾಗುವ, ಪರಕೀಯ ಭಾವದಲ್ಲಿ ಒದ್ದಾಡುವ, ಗುಲಾಮರಾಗುವ ಸಂಕೀರ್ಣ ಹಾದಿಯನ್ನು ಈ ನಾಟಕ ಸೆರೆಹಿಡಿಯುವ ಪರಿಯೇ ಆಶ್ಚರ್ಯಕರ. ಇಲ್ಲಿ ಕತೆ ಇದೆ. ಹಾಡುಗಳಿವೆ. ಮಿಥ್‌ಗಳಿವೆ. ಹಾಸ್ಯ, ವ್ಯಂಗ್ಯ, ಚಿಂತನೆ, ಹೋರಾಟ, ದೇಶಪ್ರೇಮ, ಪ್ರೀತಿ-ಪ್ರೇಮಗಳೆಲ್ಲಾ ಸಾಕಾರಗೊಂಡು ನಾಟಕದ ಆಶಯಕ್ಕೆ ಚ್ಯುತಿ ಬಾರದ ಅನುವಾದ.

## ಶರಣು ಶರಣಾರ್ಥಿ ಗಝಲ್‌ಗಳು

*ಡಾ|| ಕಾಶೀನಾಥ ಅಂಬಲಗೆ*

**ಪುಟ : xx + ೭೬** ಬೆಲೆ : ರೂ. ೬೫

**ಪ್ರಗತಿ ಪ್ರಕಾಶನ,** ಜಯನಗರ, ವಿಶ್ವವಿದ್ಯಾಲಯ ರಸ್ತೆ,
ಕಲಬುರ್ಗಿ - ೫೮೫ ೧೦೫



ಗಜಲ್‌ಗಳು ಕನ್ನಡಕ್ಕೆ ಸೇರ್ಪಡೆಯಾದ ಒಂದು ವಿಶಿಷ್ಟ ಅನುಭವ. ಕತೆಗಾರ, ಚಿಂತಕ ಕಮಲೇಶ್ವರರು ಹೇಳುವ "ಗಜಲ್ ಎನ್ನುವುದು ಅತ್ಯಂತ ವಿದ್ರೋಹಿ ಸ್ವಭಾವದ ಕಾವ್ಯ ಪ್ರಕಾರ. ಅದು ಧರ್ಮ, ಭಾಷೆ ಹಾಗೂ ವರ್ಗಗಳ ಎಲ್ಲೆ ಮೀರಿ ಸಂವಹನಗೊಳ್ಳುವ ಕೊಳಲಿನ ನಾದ ಹೊಂದಿದೆ" ಎಂಬುದು ಧ್ವನಿಪೂರ್ಣವಾಗಿದ್ದು, ಈ ಸಂಕಲನಕ್ಕೂ ಅನ್ವಯಿಸುವ ಮಾತಾಗಿದೆ. ಡಾ|| ಕಾಶೀನಾಥರ ಈ 'ಗಝಲ್'ಗಳು ಎರಡು ಸಾಲಿನಿಂದ ಕೂಡಿದ್ದು, ಧರ್ಮ, ಆಧ್ಯಾತ್ಮಿಕತೆ ಜತೆಗೆ ಬದುಕಿನ ಸಂಕೀರ್ಣ ಲಯಗಳನ್ನು ಹಿಡಿಯುವ, ವಾಸ್ತವ ಬದುಕಿನ ವಿವರಗಳಿಂದಲೇ, ಸಣ್ಣದರಲ್ಲೆ ಮಹತ್ವವಾದುದನ್ನು ಅರಿಯುವ ಪ್ರಕ್ರಿಯೆಯಾಗಿದೆ.



## ಅಂಬೇಡ್ಕರ್ : ಸಾಂಸ್ಕೃತಿಕ ಸಂಘರ್ಷ

*ಸಂ. : ಡಾ|| ಜಗನ್ನಾಥ ಸಿಂಧೆ*

**ಪುಟ : vi + ೧೪೬** ಬೆಲೆ : ರೂ. ೧೦೦

**ಪಲ್ಲವಿ ಪ್ರಕಾಶನ,** ಸಿ-೩, ಸಿಬ್ಬಂದಿ ವಸತಿ ಗೃಹ,
ವಿಶ್ವವಿದ್ಯಾಲಯ ಆವರಣ, ಗುಲಬರ್ಗಾ

ದಲಿತರ, ಅಸಹಾಯಕರ, ಶೋಷಣೆಗೆ ಒಳಗಾದವರ ಜಾಗೃತಿ ಮತ್ತು ಸ್ವಾಭಿಮಾನದ ಪ್ರತೀಕ ಡಾ|| ಬಿ. ಆರ್. ಅಂಬೇಡ್ಕರ್. ಅಂತಹ ನಾಯಕನ ಕುರಿತ ಬಹುಮುಖೀ ನೆಲೆಯ ಹದಿನಾರು ಲೇಖನಗಳು ಈ ಸಂಗ್ರಹದಲ್ಲಿವೆ. ದಲಿತರನ್ನು ಸರ್ಕಾರಿ ಭಾಷೆಯಲ್ಲಿ ಗ್ರಹಿಸುವುದನ್ನು ಬಿಡಬೇಕು. ಆಳುವ ವರ್ಗದ ಪರಿಭಾಷೆಯಲ್ಲಿ ಅಂಬೇಡ್ಕರ್ ಬಗ್ಗೆ ಮಾತನಾಡುವುದು ಅಪಾಯಕಾರಿ – ಎನ್ನುವ ವಿಚಾರ, ಅಂಬೇಡ್ಕರ್ ಮಾಡಿದ ಬೌದ್ಧ ವ್ಯಾಖ್ಯಾನದ ಬೆಳಕಿನ ಪರಿಚಯದ ಲೇಖನ, ಅಂಬೇಡ್ಕರ್, ಲೋಹಿಯಾ ಕನಸಿನ ಸಾಮ್ಯತೆಯನ್ನು ಅದು ನನಸಾಗಬೇಕಾದ ಬಗೆಯನ್ನು ನಿರೂಪಿಸುವ ಲೇಖನ, ಅಂಬೇಡ್ಕರ್ ಅಂದರೆ ಹೆಮ್ಮೆ ಸ್ವಾಭಿಮಾನ ಸಾಧನೆಯ ಸಂಕೇತ – ಎಂದೆಲ್ಲಾ ಜನತೆಯ ಆಶಯದಂತೆಯೇ ಬಿಂಬಿಸಲಾಗಿದೆ.



## ಗಣಿಗಾರಿಕೆ ಮತ್ತು ಅಭಿವೃದ್ಧಿ

*ಸಂ. : ಡಾ|| ಎಂ. ಭಾಗ್ಯಲಕ್ಷ್ಮಿ*

**ಪುಟ : ೧೭+ ೧೫೩ = ೧೭೦** ಬೆಲೆ : ರೂ. ೧೮೦

**ಸಖಿ ಪ್ರಕಾಶನ,** ಏಕಾಂತ ನಿಲಯ, ಎಂ. ಪಿ. ಪ್ರಕಾಶನಗರ,
ಹೊಸಪೇಟೆ, ಬಳ್ಳಾರಿ - ೫೮೩ ೨೦೧

ಗಣಿಗಾರಿಕೆಗೆ ಸಂಬಂಧಿಸಿದ ಗಂಭೀರ ಕೃತಿ. ಇದರಲ್ಲಿ ಹದಿಮೂರು ಲೇಖನಗಳಿದ್ದು, ಗಣಿಗಾರಿಕೆ - ಪರಿಸರ, ಗಣಿಗಾರಿಕೆ - ಅಭಿವೃದ್ಧಿ, ಗಣಿಗಾರಿಕೆ - ಉದ್ಯೋಗ, ಗಣಿಗಾರಿಕೆ - ಕಾರ್ಮಿಕರು – ಮುಂತಾದ ಸಂಗತಿಗಳನ್ನು ಇಲ್ಲಿನ ಲೇಖನಗಳು ಚರ್ಚಿಸುತ್ತವೆ. ಬಳ್ಳಾರಿ ಜಿಲ್ಲೆಯಲ್ಲಿ ಉಂಟಾಗಿರುವ ಆಸ್ಫೋಟಕಾರಿ, ವಿನಾಶಕಾರಿ ನಾಗರಿಕತೆಯ ಗಣಿ ಉದ್ದಿಮೆಯ ಬೆಳವಣಿಗೆಯ ಹಿನ್ನೆಲೆಯಲ್ಲಿ ಈ ಸಂಕಲನದ ಪ್ರಸ್ತುತತೆಯಿದೆ. ಅಭಿವೃದ್ಧಿ ಹೆಸರಿನಲ್ಲಿ ಸಮಾಜದ ಹಿತವನ್ನು ಬದಿಗಿಟ್ಟು, ಕೆಲವರ ಲಾಭಕ್ಕಾಗಿ ನಡೆಯುತ್ತಿರುವ ಗಣಿಗಾರಿಕೆಯನ್ನು ವಸ್ತುನಿಷ್ಠ ಸಂಗತಿಗಳ ಜತೆಗಿಟ್ಟು ನೋಡುವ ಪ್ರಯತ್ನವನ್ನು ಈ ಲೇಖನಗಳು ಮಾಡಿವೆ. 'ಅಭಿವೃದ್ಧಿ'ಗೆ ಪರ್ಯಾಯ ವ್ಯಾಖ್ಯಾನ ನೀಡುತ್ತಾ, ಅದು ಸಾಮಾಜಿಕ-ಆರ್ಥಿಕ ತತ್ವದಲ್ಲಿ ರೂಪುಗೊಳ್ಳಬೇಕಾದ ಅಗತ್ಯವನ್ನು ಸಾರುವ, ಗಣಿಗಾರಿಕೆಯಲ್ಲಿ ಮಹಿಳೆಯರು, ಬಾಲ ಕಾರ್ಮಿಕರು, ಕೂಲಿಗಳು – ಇವರ ಬರ್ಬರ ಬದುಕಿನ ವಾಸ್ತವ ಚಿತ್ರಣ ನೀಡುವ, ಗಣಿಗಾರಿಕೆ ಮತ್ತು ಅಭಿವೃದ್ಧಿ ಕುರಿತ ಅನುಮಾನ ಮತ್ತು ಆತಂಕಗಳನ್ನು ಎತ್ತುವ ಈ ಲೇಖನಗಳು ಗಣಿಗಾರಿಕೆಯ ಒಳಿತು-ಕೆಡುಕುಗಳನ್ನು ತಿಳಿಸುತ್ತವೆ.

## ಅವಲೋಕನ (ಲೇಖನಗಳ ಸಂಕಲನ)

*ಡಾ|| ಕೆ. ರಘುನಾಥ್*

**ಪುಟ : viii + ೧೦೨** ಬೆಲೆ : ರೂ. ೪೦

**ಕನ್ನಡ ಸಾಹಿತ್ಯ ಪರಿಷತ್ತು,** ಪಂಪಮಹಾಕವಿ ರಸ್ತೆ,
ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮



ವೈವಿಧ್ಯಮಯ ವಿಷಯಗಳನ್ನೊಳಗೊಂಡ ಹದಿನೈದು ಸಾಹಿತ್ಯಕ ಲೇಖನಗಳು ಈ ಸಂಗ್ರಹದಲ್ಲಿವೆ. ಹರಿಹರನ - ಅಕ್ಕಮಹಾದೇವಿಯ ರಗಳೆ, ಮಾಸ್ತಿಯವರ 'ಕಾಕನಕೋಟೆ' – ಒಂದು ವಿಶ್ಲೇಷಣೆ, ಕುವೆಂಪು ಕಥಾ ಸಾಹಿತ್ಯ, ಗೋಕಾಕರ ವಿಮರ್ಶೆ, ಚಿತ್ತಾಲರ 'ಕತೆಯಾದಳು ಹುಡುಗಿ', ಲೇಖನಗಳು ಸ್ಥೂಲವಾಗಿ ವಸ್ತು, ತಂತ್ರ, ಪಾತ್ರಗಳು ಮತ್ತು ಶೈಲಿಯ ಹಿನ್ನೆಲೆಯಲ್ಲಿ ವಿಮರ್ಶೆಗೆ ಒಳಗಾಗಿವೆ. ಕೃತಿಯೊಂದನ್ನು ಆತ್ಮೀಯವಾಗಿ ಮುಖಾಮುಖಿಯಾಗಿ ಅದರ ಆಶಯವನ್ನು ಗುರುತಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ. 'ಕನ್ನಡ ಮತ್ತು ತಮಿಳು ಸಾಹಿತ್ಯಗಳ ತೌಲನಿಕ ಅಧ್ಯಯನ'ದ ಮೂಲಕ ಅವುಗಳಿಗಿರುವ ಪರಸ್ಪರ ಸಾಮ್ಯತೆಯನ್ನು ಲೇಖಕರು ಗುರುತಿಸಿದ್ದಾರೆ. ಗೋಕಾಕರ ವಿಮರ್ಶೆಯ ಐತಿಹಾಸಿಕ ಮಹತ್ವವನ್ನು, ಡಿ.ವಿ.ಜಿ.ಯವರ ಜ್ಞಾಪಕ ಚಿತ್ರಶಾಲೆ – ರಚನೆಯ ಸಂದರ್ಭದ ಔಚಿತ್ಯವನ್ನು, ಮುಂಬಯಿ ಕನ್ನಡ ಕಾವ್ಯದ ಸ್ಥೂಲ ಅವಲೋಕನವನ್ನು ಲೇಖಕರು ಸಮರ್ಥವಾಗಿ ನಿರೂಪಿಸಿದ್ದಾರೆ. ಇವರ ಲೇಖನಗಳು ವಿಮರ್ಶಾತ್ಮಕವಾಗಿದ್ದರೂ ಪರಿಭಾಷೆಗಳಿಂದ ಬಳಲದೆ, ಸರಳವಾಗಿ ಓದಿಸಿಕೊಳ್ಳುತ್ತವೆ.

**– ಡಾ|| ಸುಜಾತ ಲಕ್ಷ್ಮೀಪುರ**
ನಂ. ೩೨೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೧೯

**ಅ**ಮೆರಿಕಾದೊಂದಿಗಿನ ಪರಮಾಣು ಒಪ್ಪಂದಕ್ಕೆ ಪರಮಾಣು ಇಂಧನ ಪೂರೈಕೆ ರಾಷ್ಟ್ರಗಳ ಒಪ್ಪಿಗೆಯನ್ನು ಕಾಂಗ್ರೆಸ್ ನೇತೃತ್ವದಲ್ಲಿರುವ ಯುಪಿಎ ಸರಕಾರ ತನ್ನ ಮಹಾಸಾಧನೆಯೆಂದು ಬೀಗುತ್ತಿದೆ. ಸ್ವಾಮಿಭಕ್ತಿಯಿಂದ ಬುಷ್‌ಗೆ ಕೈಜೋಡಿಸಿರುವ ಮನಮೋಹನ ಸಿಂಗ್‌ಗೆ ಕೃತಾರ್ಥತೆಯ ಭಾವ. ಮಾಧ್ಯಮಗಳಂತೂ ಇದೊಂದು ಮಹಾಪರ್ವ, ಭಾರತದ ಸೂತಕ ಕಳೆಯಿತು ಎಂದು ಎಲ್ಲ ವಿಶೇಷಣಗಳನ್ನೂ ಬಳಸಿ ಕೊಂಡಾಡಿವೆ. ಇನ್ನು ಬಾಕಿ ಇರುವುದು ಅಮೆರಿಕಾದ ಕಾಂಗ್ರೆಸ್ ಸದನದ ಅನುಮೋದನೆ. ಅದಾದರೆ ಸ್ವರ್ಗದ ಬಾಗಿಲು ತೆರೆದಂತೆಯೇ. ಹಾಲುಜೇನು ಹರಿದು ಸದಾ ಬೆಳಕು ಹರಿಯುತ್ತಿರುತ್ತದೆ. ಇದು ಎರಡು ವರ್ಷದ ತಿಣುಕಾಟದ ಫಲ. ಈ ಮಹತ್ಸಾಧನೆಗೆ ಮನಮೋಹನ ಸಿಂಗ್ ಇಲ್ಲಿ ಎಷ್ಟು ಹಸಿಸುಳ್ಳು ಹೇಳಿದ್ದಾರೊ, ಅದಕ್ಕೂ ಹೆಚ್ಚು ಸುಳ್ಳಿನ ಕಂತೆ ಬುಷ್ ಪಾಳೆಯದವರು ಹೇಳುತ್ತಿದ್ದಾರೆ. ಅವರವರಿಗೆ ತೋಚಿದಂತೆ ಒಪ್ಪಂದದ ಷರತ್ತುಗಳನ್ನು ಅರ್ಥೈಸುತ್ತಿರುತ್ತಾರೆ. ಸಿಕ್ಕಿಕೊಂಡಾಯಿತು, ಇನ್ನು ಇದಕ್ಕೆ ಕೊನೆಯೇ ಇಲ್ಲ. ಇಷ್ಟೆಲ್ಲ ಅಬ್ಬರದಿಂದ, ಅಕ್ರಮಗಳಿಂದ ಭಾರತಕ್ಕೆ ಬರುವ ಲಾಭವಾದರೂ ಏನು ? ನಮ್ಮ ವಿದ್ಯುತ್ ಉತ್ಪಾದನೆಯಲ್ಲಿ ಸುಮಾರು ಶೇಕಡ ಮೂರರಷ್ಟು ಪಾಲಿರುವ ಪರಮಾಣು ವಿದ್ಯುದುತ್ಪಾದನೆ ಶೇಕಡ ಏಳರಷ್ಟಕ್ಕೇರುತ್ತದೆ. ಅದು ಈಗಲ್ಲ, ಇನ್ನು ಎರಡು ದಶಕಗಳಲ್ಲಿ. ಇದಕ್ಕೆ ತಗಲುವ ವೆಚ್ಚ ಸಾವಿರಾರು ಕೋಟಿ ರೂಪಾಯಿಗಳು. ಸದ್ಯಕ್ಕೆ ಇರುವ ರಿಯಾಕ್ಟರುಗಳಿಗೆ ಇಂಧನದ ಕೊರತೆ ಇರದು ಅಷ್ಟೆ. ಈ ಒಪ್ಪಂದದಿಂದ ಭಾರತಕ್ಕೆ ಆಗುವ ಪ್ರಯೋಜನಕ್ಕಿಂತ ಹಾನಿಯೇ ಹೆಚ್ಚು.

ಪರಮಾಣು ಒಪ್ಪಂದ ಕುರಿತು ನಡೆದಿರುವ ವಾದವಿವಾದಗಳು ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿ ಹಿಂದೆಂದೂ ಇರಲಿಲ್ಲ. ವಿದೇಶಾಂಗ ವ್ಯವಹಾರಗಳ ವಿಚಾರದಲ್ಲಿ ಇಷ್ಟು ವರ್ಷಗಳ



ವಿಶ್ವವೀಕ್ಷಣ

# ೧೨೩ ಒಪ್ಪಂದ : ಎಂದಿದ್ದರೂ ಭಾರತಕ್ಕೆ ಅಪಾಯ

ಸೀಯಾರ್ಕೆ

ವರೆಗೆ ಹೆಚ್ಚು ಕಡಿಮೆ ಇದ್ದ ಸರ್ವಸಮ್ಮತಿ ಇಲ್ಲವಾಗಿದೆ. ಪರವಿರೋಧ ವಾದಗಳು ಸಂಬಂಧಪಟ್ಟ ಪಕ್ಷಗಳ ನೀತಿಗನುಸಾರವಾಗಿ ವ್ಯಕ್ತಗೊಂಡಿದ್ದರೂ, ಮೂಲ ಪ್ರಶ್ನೆಯಾದ, ಭಾರತದ ಸ್ವತಂತ್ರ ವಿದೇಶಾಂಗ ನೀತಿ ಪರಭಾರೆಯಾಗುವುದನ್ನು ಬಿಟ್ಟು ಪರಮಾಣು ಅಸ್ತ್ರ ಪ್ರಯೋಗದ ಹಕ್ಕಿನ ಪ್ರಶ್ನೆಯನ್ನೇ ದೊಡ್ಡದು ಮಾಡಲಾಗಿದೆ. ಈ ಒಪ್ಪಂದದಿಂದ ಅಣ್ವಸ್ತ್ರ ಪ್ರಯೋಗ ನಡೆಸುವ ಹಕ್ಕಿಗೆ ಯಾವುದೇ ಚ್ಯುತಿ ಇಲ್ಲ ಎಂಬುದು ಮನಮೋಹನ್ ಸಿಂಗ್ ಕಂಪನಿಯ ಅಂಬೋಣ. ಹಾಗಲ್ಲ, ಒಪ್ಪಂದ ಆ ಸ್ವಾತಂತ್ರ್ಯವನ್ನು ಕಸಿದುಕೊಳ್ಳುತ್ತದೆ ಎಂಬುದು ಅಡ್ವಾನಿ-ರಾಜನಾಥ ಸಿಂಗ್ ಕಂಪನಿ ಆಕ್ರೋಶ. ಅತ್ತಲಾಗಿ ಬುಷ್ ಕಂಪನಿಯ ಬೊಬ್ಬೆ ಹುಷಾರ್, ಏನಾದರೂ ಪ್ರಯೋಗ ಪರೀಕ್ಷೆಗಿಳಿದರೆ ಪರಿಣಾಮ ಎದುರಿಸಬೇಕಾಗುವುದು, ನಾವು ಒದಗಿಸಿರುವುದನ್ನೆಲ್ಲ ಕಕ್ಕಬೇಕು ಎನ್ನುವುದು. ಇದು ಪ್ರಶ್ನೆಯೇ ಅಲ್ಲ. ಏಕೆಂದರೆ, ಭಾರತ ಸ್ವಯಮಿಚ್ಛೆಯಿಂದ ಈ ಮೊದಲೇ ಅಣ್ವಸ್ತ್ರ ಪ್ರಯೋಗ ನಡೆಸದಿರಲು ನಿರ್ಬಂಧ ಹಾಕಿಕೊಂಡಿದೆ. ಇದಲ್ಲದೆ ಅಣ್ವಸ್ತ್ರ ಬಳಕೆಯಲ್ಲಿ ತಾನು ಮೊದಲಿಗನಾಗುವುದಿಲ್ಲ ಎಂದೂ ಘೋಷಿಸಿದೆ. ಕಳೆದ ಅರವತ್ತು ವರ್ಷಗಳಿಂದ ಭಾರತ ಅಣ್ವಸ್ತ್ರಗಳ ವಿಚಾರದಲ್ಲಿ ತಾತ್ವಿಕವಾದ ಧೋರಣೆಯನ್ನು ಪ್ರತಿಪಾದಿಸಿ ಅಣ್ವಸ್ತ್ರಗಳ ಸಂಪೂರ್ಣ ನಿಷೇಧಕ್ಕಾಗಿ, ಅವುಗಳ ನಿರ್ನಾಮಕ್ಕಾಗಿ ಶ್ರಮಿಸಿದೆ. ಈ ನಿಲುವಿಗೆ ಬದ್ಧವಾಗಿದ್ದು ಅದು ಅಣ್ವಸ್ತ್ರ ಪ್ರಸರಣ ನಿರೋಧ ಒಪ್ಪಂದಕ್ಕೆ ಸಮ್ಮತಿಸಲಿಲ್ಲ. ಮತ್ತೆ ಈ ೧೨೩ ಒಪ್ಪಂದ ಇರಲಿ ಬಿಡಲಿ ಪ್ರಯೋಗ ನಡೆಸುವ ಹಕ್ಕು ಭಾರತಕ್ಕೆ ಇದ್ದೇ ಇರುತ್ತದೆ. ಅದರ ಪರಿಣಾಮ ಈಗ ಮೂರುದಶಕಗಳಿಂದ ಇರುವುದಕ್ಕಿಂತ ಹೆಚ್ಚೇನೂ ಆಗದು. ಆದರೆ ಒಪ್ಪಂದದಿಂದ ಹಾನಿ ಇರುವುದು ನಮ್ಮ ವ್ಯವಹಾರದಲ್ಲಿ ಅನ್ಯರು, ಅದರಲ್ಲೂ ಅಮೆರಿಕಾ ಮೂಗುತೂರಿಸಲು ಅವಕಾಶವಿರುವುದರಿಂದ.

ಭಾರತ-ಅಮೆರಿಕಾ ಪರಮಾಣು ಒಪ್ಪಂದದ ಪರಿಣಾಮವಾಗಿ ನಮ್ಮ ದೇಶದ ಪರಮಾಣು ಕ್ಷೇತ್ರ ಸಂಪೂರ್ಣವಾಗಿ ಅಂತರರಾಷ್ಟ್ರೀಯ ಪರಮಾಣು ಸಂಸ್ಥೆಯ ಮೇಲ್ವಿಚಾರಣೆಗೆ ಬರುತ್ತದೆ. ಇದರ ಮೇಲೆ ಅಮೆರಿಕಾದ ತೀವ್ರ ನಿಗಾ ಕೂಡ ಇರುತ್ತದೆ. ನಾಗರಿಕ ಮತ್ತು ಮಿಲಿಟರಿ ಎನ್ನುವ ವಿಂಗಡಣೆ ತೋರಿಕೆಗೆ ಮಾತ್ರ. ಅದನ್ನು ವಿಂಗಡಿಸುವುದೂ ಅರ್ಥವಿಲ್ಲದ್ದಾಗುತ್ತದೆ. ನಮ್ಮ ವಿಜ್ಞಾನಿಗಳು ನ್ಯೂಕ್ಲಿಯರ್ ಕ್ಷೇತ್ರದಲ್ಲಿ ನಡೆಸುವ ಎಲ್ಲ ಸಂಶೋಧನೆಗಳು, ಪ್ರಯೋಗಗಳು ನಿರ್ಬಂಧಕ್ಕೊಳಗಾಗುತ್ತವೆ. ಹಾಗಾಗಿ, ನಮ್ಮ ವಿಜ್ಞಾನಿಗಳು ಸ್ವತಂತ್ರವಾಗಿ, ನಿರ್ಭೀತರಾಗಿ ಸಂಶೋಧನೆ ಮುಂದುವರಿಸುವುದು ಕಷ್ಟವಾಗುತ್ತದೆ. ಇನ್ನೊಂದು ಸಂಗತಿ ಎಂದರೆ ನಮ್ಮ ಸ್ವತಂತ್ರ ವಿದೇಶಾಂಗ ನೀತಿಯ ಮೇಲಾಗುವ ಪರಿಣಾಮ. ಎರಡು ವರ್ಷಗಳ ಹಿಂದೆ ಈ ಪ್ರಸ್ತಾಪ ಬಂದಾಗಲೇ ಮನಮೋಹನ್ ಸಿಂಗ್ ಸರಕಾರ ಅಮೆರಿಕಾದ ಒತ್ತಡಕ್ಕೆ ಮಣಿದು ಅಂತಾರಾಷ್ಟ್ರೀಯ ಪರಮಾಣು ಸಂಸ್ಥೆಯ ಸಭೆಯಲ್ಲಿ ಇರಾನಿನ ವಿರುದ್ಧ ಮತ ಚಲಾಯಿಸಿತ್ತು. ಈ ವಿಚಾರವನ್ನು ಕೃತಜ್ಞತೆಯಿಂದ ಈಚೆಗೆ ಪ್ರಸ್ತಾಪಿಸಿರುವ ಅಧ್ಯಕ್ಷ ಜಾರ್ಜ್ ಬುಷ್ ಭಾರತವು ಇನ್ನು ಮುಂದೆ ಅಮೆರಿಕಾಗೆ ಅನುಕೂಲಕರವಾಗಿರುವುದೆಂಬ ಆಶ್ವಾಸನೆಯನ್ನು ತಮ್ಮ ಕಾಂಗ್ರೆಸ್‌ಗೆ ಸದ್ಯಕ್ಕೆ ನೀಡಿದ್ದಾರೆ. ಇದರ ಅರ್ಥ ಸ್ಪಷ್ಟ. ವಿದೇಶಾಂಗ ವ್ಯವಹಾರದಲ್ಲಿ ಭಾರತ, ಅಮೆರಿಕಾ ಪರ ನಿಲುವನ್ನು ತೆಗೆದುಕೊಳ್ಳುತ್ತದೆ ಎನ್ನುವುದು. ಅಂದರೆ ಅಮೆರಿಕಾದ ವ್ಯೂಹ ರಚನೆಯಲ್ಲಿ, ದುಷ್ಕೃತ್ಯಗಳಲ್ಲಿ ಭಾರತ ಭಾಗಿಯಾಗುತ್ತದೆ. ಇದರಲ್ಲಿ ಸ್ವಲ್ಪ ವ್ಯತ್ಯಾಸವಾದರೂ ೧೨೩ ಒಪ್ಪಂದದ ತೂಗುಕತ್ತಿ ಭಾರತದ ಮೇಲಿರುತ್ತದೆ. ಯಾವ ಸಂದರ್ಭದಲ್ಲೇ ಆದರೂ ಕುಂಟುನೆಪ ಒಡ್ಡಿ ಅಮೆರಿಕಾ ಇಂಧನ ಪೂರೈಕೆ ಸ್ಥಗಿತಗೊಳಿಸಬಹುದು, ಮತ್ತೆ ಉಳಿದೆಲ್ಲ ರೀತಿಯಲ್ಲಿ ಒತ್ತಡಗಳನ್ನು ತರಬಹುದು. ಇರಾಕಿನ ಮೇಲೆ ಅಮೆರಿಕಾ ನಡೆಸಿದ ದುರಾಕ್ರಮಣ ನೀತಿಯಿಂದ ನಾವು ಪಾಠ ಕಲಿಯಬೇಕಾಗಿದೆ. ಎಡಪಕ್ಷಗಳು ಒಪ್ಪಂದವನ್ನು ವಿರೋಧಿಸುವಾಗ ತಳೆದ ನಿಲುವಿನ ಸಾರಾಂಶ ಇದು. ಅಮೆರಿಕಾದ ಬಾಲಂಗೋಚಿಯನ್ನಾಗಿಸುವ ಈ ೧೨೩ ಒಪ್ಪಂದ ಯಾವತ್ತಿದ್ದರೂ ಭಾರತಕ್ಕೆ ಅಪಾಯವೇ.

## ಆಫ್ಘಾನಿಸ್ತಾನ : ಮುಗಿಯದ ಬವಣೆ

**ಮೂ**ರೂವರೆ ದಶಕಗಳಿಗೂ ಹೆಚ್ಚು ಕಾಲದಿಂದ ಅಂತರ್ಯುದ್ಧ, ದುರಾಕ್ರಮಣಗಳಿಗೀಡಾಗಿರುವ ಆಫ್ಘಾನಿಸ್ತಾನದ ಜನರ ಬವಣೆ ಮುಗಿಯದ

ಕತೆಯಾಗಿದೆ. ಪ್ರಪಂಚದ ಬೇರಾವುದೇ ದೇಶ ಇಂಥ ದುಃಸ್ಥಿತಿಯನ್ನು ಅನುಭವಿಸಲಿಲ್ಲ. ಮೊದಲು ಅಂತರ್ಯುದ್ಧ, ಅದರ ಹಿಂದೆಯೇ ಅಂದಿನ ಸೋವಿಯತ್ ಒಕ್ಕೂಟದ ಸೇನೆಯ ಪ್ರವೇಶ. ಒಂದಲ್ಲ ಎರಡಲ್ಲ ಹದಿನೆಂಟು ವರ್ಷಗಳ ಸಮರ. ಆನಂತರ ಇಸ್ಲಾಮೀ ಉಗ್ರ ತಾಲಿಬಾನ್ ಆಡಳಿತ. ಈಗೇಳು ವರ್ಷದಿಂದ ಅಮೆರಿಕಾದ ದುರಾಕ್ರಮಣ. ವಿದೇಶಿ ಆಕ್ರಮಣಕಾರರ ವಿರುದ್ಧ ಸಮರ. ತಾಲಿಬಾನ್ ಉಗ್ರಗಾಮಿಗಳ ಉಪಟಳ. ಶಿಥಿಲವಾದ ಕೈಗೊಂಬೆ ಸರಕಾರ. ಇದು ಪರಿಸ್ಥಿತಿ. ಅಫ್ಘಾನಿಸ್ತಾನದ ಇತಿಹಾಸವನ್ನು ಅವಲೋಕಿಸಿದಾಗ ಕಂಡುಬರುವ ಒಂದು ಸಂಗತಿ ಎಂದರೆ, ಈ ಭೂಭಾಗವನ್ನು ಎಂದೂ ಯಾವ ದೇಶವೂ ಆಕ್ರಮಿಸಿಕೊಳ್ಳಲಾಗಿಲ್ಲ ಎನ್ನುವುದು. ಬ್ರಿಟಿಷರು ಪ್ರಯತ್ನಪಟ್ಟು ಆಗದೆ ಕೈಬಿಟ್ಟು ಅಫ್ಘಾನಿಸ್ತಾನವನ್ನು ತಡೆಗೋಡೆ ಯಾಗಿರಿಸಿಕೊಂಡಿದ್ದರು. ಅಮೆರಿಕಾ ಈಗ ಸುಮಾರು ೩೩,೦೦೦ ಸೇನೆಯನ್ನಿರಿಸಿಕೊಂಡಿದ್ದು, ಜೊತೆಗೆ 'ನ್ಯಾಟೋ' ಸೇನೆಯ ನೆರವು ಹೊಂದಿದ್ದರೂ ದೇಶದ ಮೇಲೆ ಸಂಪೂರ್ಣ ನಿಯಂತ್ರಣ ಸ್ಥಾಪಿಸಲಾಗಿಲ್ಲ. ದೇಶದ ಬಹುಭಾಗ ಈಗ ತಾಲಿಬಾನ್‌ಗಳ ವಶದಲ್ಲಿದೆ. ಕರ್ಜಾಯ್ಯೆ ನೇತೃತ್ವದಲ್ಲಿರುವ ಆಫ್ಘಾನ್ ಸರಕಾರದ ಫರ್ಮಾನು ಕಾಬೂಲ್ ದಾಟಿ ಹೋಗುತ್ತಿಲ್ಲ.

ಇಪ್ಪತ್ತೊಂದನೇ ಶತಮಾನದ ಪ್ರಾರಂಭದಲ್ಲಿ ಅಮೆರಿಕಾದ ವಿಶ್ವ ವಾಣಿಜ್ಯ ಕೇಂದ್ರದ ಮೇಲೆ ಭಯೋತ್ಪಾದಕರ ದಾಳಿಯ ನಂತರ, ಅಮೆರಿಕಾ ಸಾರಿದ ಭಯೋತ್ಪಾದನೆ ವಿರುದ್ಧ ಸಮರಕ್ಕೆ ಮೊದಲು ಬಲಿಯಾದ್ದು ಆಫ್ಘಾನಿಸ್ತಾನ. ಭಯೋತ್ಪಾದನೆಯನ್ನು ಅಡಗಿಸಲಾಗ ದಿದ್ದರೂ, ಅಲ್ ಖೈದಾ ಉಗ್ರಗಾಮಿಗಳನ್ನು ಸದೆಬಡಿಯಲಾಗದಿದ್ದರೂ ಆಫ್ಘಾನಿಸ್ತಾನ ಮಾತ್ರ ಅಮೆರಿಕಾದ ದುರಾಕ್ರಮಣದಲ್ಲಿದೆ. ೨೦೦೧ರಿಂದ ಇದುವರೆಗೆ ಅಮೆರಿಕಾ ತಾಲಿಬಾನ್ ಅಡಗುದಾಣಗಳ ಮೇಲೆ ನಡೆಸಿರುವ ದಾಳಿಗಳಲ್ಲಿ ೧೦೦೦ಕ್ಕೂ ಹೆಚ್ಚು ಮಂದಿ ಆಫ್ಘನ್ ನಾಗರಿಕರು ಅಸು ನೀಗಿದ್ದಾರೆ. ಇವರ ಪೈಕಿ ಹೆಂಗಸರು ಮತ್ತು ಮಕ್ಕಳೇ ಹೆಚ್ಚು. ಅಮೆರಿಕಾ ತಾಲಿಬಾನ್‌ಗಳ ಮೇಲೆ ಬಾಂಬು ಸುರಿಯುವ ಅವಾಂತರದಲ್ಲಿ ಶಾಲೆಗಳು, ಮನೆಗಳು, ಆಸ್ಪತ್ರೆಗಳ ಮೇಲೆ ದಾಳಿ ನಡೆಸಿದೆ. ಮಾನವ ಹಕ್ಕುಗಳ ಆಯೋಗ ನಾಗರಿಕರ ಮೇಲೆ ದಾಳಿಯನ್ನು ತೀವ್ರವಾಗಿ ಖಂಡಿಸಿದೆ. ತಾಲಿಬಾನ್‌ಗಳ ಬೆನ್ನಟ್ಟುವ ಅಮೆರಿಕಾ ಪಾಕಿಸ್ತಾನದ ಗಡಿಪ್ರದೇಶದ ಮೇಲೂ ಕ್ಷಿಪಣಿದಾಳಿ ನಡೆಸಿದೆ. ಇತ್ತೀಚೆಗೆ ಅಮೆರಿಕಾ ನಡೆಸಿದ ಬಾಂಬುದಾಳಿಯಲ್ಲಿ ೯೦ಕ್ಕೂ ಹೆಚ್ಚು ಆಫ್ಘನ್ ನಾಗರಿಕರು ಹತರಾದರು. ಅಮೆರಿಕಾ ಅದನ್ನು ಅಲ್ಲಗಳೆದಿದ್ದರೂ ಅಮಾಯಕ ನಾಗರಿಕರ ಹತ್ಯೆ ಮುಂದುವರಿಯುತ್ತಲೇ ಇದೆ.

ತಾಲಿಬಾನ್‌ಗಳಿಗೆ ಪಾಕಿಸ್ತಾನದ ಸೇನೆ ನೆರವು ನೀಡುತ್ತಿದೆ ಎನ್ನುವುದು ಆಫ್ಘಾನಿಸ್ತಾನದ ಆರೋಪ. ಪಾಕಿಸ್ತಾನವು ಆಫ್ಘನ್ ಗಡಿಪ್ರದೇಶದಲ್ಲಿ ಭಯೋತ್ಪಾದಕರ ವಿರುದ್ಧವಾಗಿ ಸೂಕ್ತವಾದ ಕ್ರಮ ಕೈಗೊಳ್ಳುತ್ತಿಲ್ಲ ಎನ್ನುವುದು ಅಮೆರಿಕಾದ ಆರೋಪ. ಅದಕ್ಕಾಗಿಯೇ ಅಮೆರಿಕಾ ಮುಷರಫ್ ಮೇಲೆ ಒತ್ತಡ ತರುತ್ತಿತ್ತು. ಮತ್ತೆ ಆಫ್ಘನ್ ಅಧ್ಯಕ್ಷ ಕರ್ಜಾಯ್ಯೆ ಮತ್ತು ಮುಷರಫ್ ನಡುವೆ ಸಂಬಂಧ ಸಾಕಷ್ಟು ಹಳಸಿತ್ತು ಇದೇ ವಿಷಯದ ಮೇಲೆ. ಪ್ರಾಯಶಃ ಪಾಕಿಸ್ತಾನದಲ್ಲಿ ಮುಷರಫ್ ಪತನಕ್ಕೆ ಅಮೆರಿಕಾದ ಮುನಿಸೇ ಕಾರಣ ಎಂದೇ ತೋರುತ್ತದೆ. ನೂತನ ಪಾಕಿಸ್ತಾನದ ಅಧ್ಯಕ್ಷ ಅಸಿಫ್ ಆಲಿ ಜರ್ದಾರಿ ಮತ್ತು ಆಫ್ಘನ್ ಅಧ್ಯಕ್ಷ ಹಮೀದ್ ಕರ್ಜಾಯ್ಯೆ ಈಚೆಗೆ ಭೇಟಿಯಾಗಿದ್ದು, ಒಟ್ಟಾಗಿ ಪತ್ರಿಕಾಗೋಷ್ಠಿಯಲ್ಲಿ ಭಾಗವಹಿಸಿದ್ದುದು ಒಂದು ಹೊಸ ಬೆಳವಣಿಗೆ. ಇದಕ್ಕೆ ಅಮೆರಿಕಾದ ಸಮ್ಮತಿ ಇರಲು ಸಾಕು. ಈ ಬೆಳವಣಿಗೆ ಪಾಕಿಸ್ತಾನದ ಉತ್ತರ ಗಡಿ ಪ್ರದೇಶಕ್ಕೆ ಎಷ್ಟು ಪ್ರಯೋಜನವಾದೀತು ಎಂದು ಹೇಳುವುದು ಕಷ್ಟ. ಏಕೆಂದರೆ, ತಾಲಿಬಾನ್ ಜೊತೆಗೆ ಶಾಮೀಲಾಗಿರುವ ಪಾಕಿಸ್ತಾನ ಗೂಢಚರ್ಯೆ ಸಂಸ್ಥೆಯ ನಿರ್ಧಾರದ ಮೇಲೆ ಅದು ಅವಲಂಬಿತ. ಹೊಸ ಸರಕಾರಕ್ಕೆ ಪಾಕಿಸ್ತಾನದ ಸೇನೆಯ ಮೇಲೆ, ಅದರಲ್ಲೂ ಅದರ ಗೂಢಚರ್ಯೆ ವಿಭಾಗದ ಮೇಲೆ ನಿಯಂತ್ರಣ ಸಾಧಿಸುವುದು ಸುಲಭವಲ್ಲ. ಒಟ್ಟಿನಲ್ಲಿ ಆಫ್ಘಾನಿಸ್ತಾನದ ಮಟ್ಟಿಗೆ ಅಸ್ಥಿರತೆ, ಆತಂಕ ತಪ್ಪಿದ್ದಲ್ಲ. ಭಾರತ ಈ ಬೆಳವಣಿಗೆಗಳನ್ನು ಎಚ್ಚರಿಕೆಯಿಂದ ಗಮನಿಸಬೇಕಾಗಿದೆ. ಉಗ್ರಗಾಮಿಗಳಿಂದ ಭಾರತಕ್ಕೆ ಆತಂಕ ಇದ್ದೇ ಇದೆ. ಆಫ್ಘಾನಿಸ್ತಾನ ದಲ್ಲಿರುವ ಭಾರತ ರಾಯಭಾರಿ ಕಚೇರಿಯ ಮೇಲೆ ನಡೆದ ದಾಳಿಯನ್ನು ಹಗುರವಾಗಿ ಪರಿಗಣಿಸುವಂತಿಲ್ಲ.

ಶಿಲಯಾರ್ಕೆ
'ಚೌಬೀನ', ೮೮೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

## ಧಾರ್ಮಿಕ ಸಂಘರ್ಷ ನಿಲ್ಲಲಿ !

**ಕ**ಳೆದ ಭಾನುವಾರ (೧೪-೦೯-೨೦೦೮) ಬೆಳಗ್ಗಿನಿಂದ ದಕ್ಷಿಣ ಕನ್ನಡ, ಉಡುಪಿ ಕರಾವಳಿ ಜಿಲ್ಲೆಗಳಲ್ಲಿ ಹಾಗೂ ಚಿಕ್ಕಮಗಳೂರು ಮತ್ತಿತರ ಮಲೆನಾಡು ಜಿಲ್ಲೆಗಳಲ್ಲಿ ಹಿಂದೂ ಧರ್ಮದ ಸಂರಕ್ಷಕರೆಂದು ಹೇಳಿಕೊಳ್ಳುವ ಕೆಲವರು ಕ್ರೈಸ್ತ ಧಾರ್ಮಿಕ ಸ್ಥಳಗಳ ಮೇಲೆ ಮತಾಂತರ ಪ್ರಶ್ನೆಯನ್ನು ಎತ್ತಿ ಹಠಾತ್ತನೆ ದಾಳಿ ನಡೆಸಿರುವುದು ತೀರಾ ಖಂಡನೀಯ.

ಐದು ಶತಮಾನಗಳಿಗಿಂತಲೂ ದೀರ್ಘಕಾಲ ಈ ಪ್ರದೇಶದಲ್ಲಿ ಕ್ರೈಸ್ತ ಸಮುದಾಯದವರು ವಿದ್ಯಾಲಯಗಳನ್ನು, ಚಿಕಿತ್ಸಾಲಯ ಗಳನ್ನು, ಅಂಗವಿಕಲ ಮತ್ತು ವೃದ್ಧಾಪ್ಯದಲ್ಲಿರುವ ಜನರ ಶುಶ್ರೂಷೆಯನ್ನು ನಡೆಸುತ್ತ ಈ ದೇಶದ ಜನರ ಕ್ಷೇಮಕೋಸ್ಕರ ದುಡಿಯುತ್ತ ಬಂದಿರುವುದು ಎಲ್ಲರಿಗೂ ಗೊತ್ತಿರುವ ವಿಚಾರವಾಗಿದೆ. ವಿದ್ಯಾಭ್ಯಾಸ, ಆರೋಗ್ಯ ರಕ್ಷಣೆ ಇತ್ಯಾದಿಗಳ ವ್ಯಾಪಾರೀಕರಣ ಆರಂಭ ಆದುದಕ್ಕಿಂತ ಎಷ್ಟೋ ಹಿಂದಿನಿಂದಲೇ ಆ ಕ್ಷೇತ್ರಗಳಲ್ಲಿ ಕ್ರೈಸ್ತರು ಜನರಿಗೆ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ಇದೀಗ ರಾಜಕೀಯ ಉದ್ದೇಶಗಳಿಗೆ ಸೇವಾ ಕಾರ್ಯಗಳಿಗೆ ಧರ್ಮದ ಲೇಪ ಬಳಿಯುವ ಪಿಡುಗು ಈ ದೇಶದಲ್ಲಿ ಕೆಲವರನ್ನು ಕಾಡುತ್ತಿದೆ. ಇದು ಅಪಾಯಕಾರಿ ಯಾಗಿದೆ. ನಮ್ಮ ದೇಶವು ವಾಯವ್ಯ, ಈಶಾನ್ಯ ದಿಕ್ಕುಗಳಲ್ಲಿಯೂ, ಪೂರ್ವ ಮತ್ತು ಪಶ್ಚಿಮ ಕಡಲ ತೀರಗಳಲ್ಲಿಯೂ ಅಹರ್ನಿಶಿ ಅಪಾಯಯಗಳನ್ನು ಎದುರಿಸುತ್ತಿರುವ ಈ ಸಂದರ್ಭದಲ್ಲಿ ದೇಶದ ಒಳಗಡೆ ಒಡಕಿಗೆ ಕಾರಣವಾಗುವಂತಹ ಯಾವುದೇ ಕೃತ್ಯ ಹಿತಕಾರಿಯಲ್ಲ. ಎಲ್ಲದಕ್ಕಿಂತ ಮುಖ್ಯವಾಗಿ ಜಾತಿ, ಧರ್ಮ, ಪಂಗಡ ಒಳ ಪಂಗಡಗಳ ಭೇದ ಭಾವಗಳಿಂದ ವಿರಹಿತವಾದ ಸಮನ್ವಯತೆ ಯನ್ನು ಬಲಪಡಿಸುವ ದಿಶೆಯಲ್ಲಿ ಎಲ್ಲ ಸದ್ಭಾವನೆಯುಳ್ಳವರು ಚಿಂತಿಸಬೇಕಾದ ಮತ್ತು ನಡೆದುಕೊಳ್ಳಬೇಕಾದ ಕರ್ತವ್ಯ ಎಲ್ಲ ರಾಜಕಾರಣಿಗಳದ್ದಾಗಿದೆ.

ಇಂದು ನಡೆಯುತ್ತಿರುವ ಸಂಘರ್ಷವನ್ನು ಶಮನಗೊಳಿಸುವ ದೃಷ್ಟಿಯಿಂದ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಮತ್ತು ಆರಕ್ಷಕ ಪಡೆಗಳು ನಿಷ್ಪಕ್ಷಪಾತವಾಗಿ ಕ್ಷೋಭೆಕಾರರನ್ನು ಹದ್ದುಬಸ್ತಿಗೆ ತರಬೇಕೆಂದು ಅಪೇಕ್ಷಿಸುತ್ತೇನೆ. ಅಲ್ಲದೆ, ಈಗ ಆಳುತ್ತಿರುವ ಮುಖ್ಯಮಂತ್ರಿಗಳು ಪ್ರಕ್ಷುಬ್ಧ ಜಿಲ್ಲೆಗಳಿಗೆ ಕೂಡಲೆ ಭೇಟಿ ನೀಡಿ ಆಳುವ ಮತ್ತು ವಿರೋಧ ಪಕ್ಷಗಳ ಮತ್ತು ಆಸಕ್ತ ಎಲ್ಲ ಸಾರ್ವಜನಿಕ ಸಂಘ ಸಂಸ್ಥೆಗಳ ಪ್ರತಿನಿಧಿಗಳನ್ನು ಆಹ್ವಾನಿಸಿ ಗಲಭೆಗ್ರಸ್ತ ಪ್ರದೇಶದಲ್ಲಿ ಶಾಂತಿ ಕೂಡಲೆ ಸುಭದ್ರವಾಗಿ ನೆಲೆಗೊಳ್ಳುವಂತೆಯೂ, ಧಾರ್ಮಿಕ ಸಂಘರ್ಷಗಳು ಮರುಕಳಿಸದಂತೆಯೂ ಸೂಕ್ತ ಕ್ರಮಗಳನ್ನು ಸಾರ್ವಜನಿಕ ಅಹವಾಲು ಆಲಿಸಿ ರೂಪಿಸಬೇಕೆಂದು ಈ ಮೂಲಕ ಸಾಮಾಜಿಕ ಸ್ವಾಸ್ಥ್ಯದ ದೃಷ್ಟಿಯಿಂದ ಕಳಕಳಿಯ ಮನವಿ ಮಾಡುತ್ತೇನೆ. ಧರ್ಮ ಮತ್ತು ರಾಜಕಾರಣದ ದುರಾಕ್ರಮಣ ಸಲ್ಲದೆಂದು ಸಂಬಂಧಪಟ್ಟವರಲ್ಲಿ ವಿನಂತಿಸುತ್ತೇನೆ.

**ಬಿ. ವಿ. ಕಕ್ಕಿಲ್ಲಾಯ**
ಕಂಕನಾಡಿ, ಮಂಗಳೂರು

# ಬಾಬಾಬುಡನ್‌ಗಿರಿ – ಸವಾಲೆಸೆದಿರುವ ಕೋರ್ಟ್ ಆದೇಶ

**೧೯೮೯ರ ಆದೇಶವನ್ನು ನೀಡುವ ಮುಂಚೆಯೂ ದತ್ತಿ ಆಯುಕ್ತರು ಸಹ ಉಚ್ಚ ನ್ಯಾಯಾಲಯದ ಆದೇಶದ ಮೇರೆಗೆ ಬಹಿರಂಗ ವಿಚಾರಣೆ ನಡೆಸಿ ತಮ್ಮ ತೀರ್ಮಾನ ನೀಡಿದ್ದರು. ಹಾಗಿದ್ದ ಮೇಲೆ ಹೊಸ ವಿಚಾರಣೆಗೆ ಪ್ರೇರಣೆಯೇನು? ಹಿಂದಿನ ನಿರ್ಣಯ ಹಿಂದುತ್ವವಾದಿ ಸಂಘಟನೆಗಳ ಪರವಾಗಿರಲಿಲ್ಲ ಎಂಬುದನ್ನು ಬಿಟ್ಟರೆ ಮತ್ತೇನೂ ಅಲ್ಲ. ಆದರೆ ನ್ಯಾಯಾಲಯ ಗಮನಿಸಬೇಕಿದ್ದುದು ಆ ವಿಚಾರಣೆ ನ್ಯಾಯ ಮತ್ತು ಕಾನೂನು ಸಮ್ಮತವಾಗಿ ನಡೆದಿದೆಯೋ ಇಲ್ಲವೋ ಎಂಬುದನ್ನೇ ಹೊರತು ಅದು ಹಿಂದುತ್ವವಾದಿ ಸಂಘಟನೆಗಳ ಅಹವಾಲನ್ನು ಪರಿಗಣಿಸಿದೆಯೋ ಇಲ್ಲವೋ ಎಂಬುದನ್ನಲ್ಲ. ಮೇಲಾಗಿ ಒಮ್ಮೆ ಇದೇ ನ್ಯಾಯಾಲಯದ ಆದೇಶದ ಮೇರೆಗೆ ನಡೆದ ವಿಚಾರಣೆಯನ್ನ ಇದೇ ನ್ಯಾಯಾಲಯ ರದ್ದುಗೊಳಿಸುವುದು ಸಹ ಕಾನೂನು ಸಮ್ಮತವಲ್ಲ.**

**ಶಿವಸುಂದರ್**

ಬಾಬಾಬುಡನ್ ಗಿರಿ ವಿಷಯದಲ್ಲಿ ಕರ್ನಾಟಕದ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠ ತನ್ನ ಅಂತಿಮ ತೀರ್ಮಾನವನ್ನು ಇದೇ ಆಗಸ್ಟ್ ೪ರಂದು ನೀಡಿದೆ. ಈ ತೀರ್ಮಾನವು ಗಿರಿಯಲ್ಲಿ ಹಿಂದೂ ಮತ್ತು ಮುಸ್ಲಿಮರಿಬ್ಬರು ಆಚರಿಸಿಕೊಂಡು ಬಂದ ಸೌಹಾರ್ದ ಶ್ರದ್ಧೆಯನ್ನು ಉಳಿಸಿಕೊಂಡು ಬರಲು ವೇದಿಕೆಯು ಇದುವರೆಗೆ ನಡೆಸಿಕೊಂಡು ಬರುತ್ತಿದ್ದ ಹೋರಾಟಕ್ಕೆ ತಾತ್ಕಾಲಿಕ ಹಿನ್ನೆಡೆಯನ್ನು ಉಂಟು ಮಾಡಿರುವುದಂತೂ ನಿಜ. ಹೀಗಾಗಿಯೇ ಇಂದಿನ ಸಂದರ್ಭ ಎಲ್ಲಾ ನಾಡಿನ ಎಲ್ಲಾ ಜಾತ್ಯತೀತವಾದಿಗಳ ಬಂಡೆಗಲ್ಲಿನಂತಹ ಐಕ್ಯತೆಯನ್ನೂ ಕೇಳುತ್ತಿದೆ.

ಆದರೆ ಅದೇ ಸಮಯದಲ್ಲಿ ಈ ಆದೇಶವು ಸಂಘಪರಿವಾರವು ಪ್ರಚಾರ ಮಾಡುತ್ತಿರುವಂತೆ ಹಿಂದೂ ಅರ್ಚಕರ ನೇಮಕಾತಿಗಾಗಲೀ, ಹಿಂದುತ್ವವಾದಿ ಸಂಘಟನೆಗಳು ಬಯಸುವ ಶೈವಾಗಮ ಪದ್ಧತಿಯ ಪೂಜೆ ಪುನಸ್ಕಾರಗಳಿಗಾಗಲೀ, ಹೋಮ ಹವನಗಳಿಗಾಗಲೀ, ದತ್ತ ಜಯಂತಿ ಇನ್ನಿತ್ಯಾದಿ ಆಚರಣೆಗಳಿಗಾಗಲೀ ಸಹ ಅವಕಾಶ ನೀಡಿಲ್ಲ. ವಿಭಾಗೀಯ ಪೀಠವು ತನ್ನ ಆದೇಶದಲ್ಲಿ ಮೇಲಿನ ಅಂಶವನ್ನು ಈ ರೀತಿ ಸ್ಪಷ್ಟಪಡಿಸಿದೆ:

''ಏಕ ನ್ಯಾಯಮೂರ್ತಿ ಪೀಠವು ವಿಷಯವನ್ನು ಪರಾಮರ್ಶಿಸಿ ಏನನ್ನೂ ತೀರ್ಮಾನಿಸಿಲ್ಲ. ಎರಡೂ ಪಕ್ಷಗಳಿಗೆ ಅವಕಾಶ ಕಲ್ಪಿಸಿಕೊಟ್ಟು ಈ ವಿವಾದಾತ್ಮಕ ಸಂಗತಿಯನ್ನು ಬಗೆಹರಿಸಬೇಕೆಂದು ಹೇಳಿ ಮೊಕದ್ದಮೆಯನ್ನು ಹಿಂದಿನ ನ್ಯಾಯಾಲಯಕ್ಕೆ ಹಿಂದಿರುಗಿಸಲಾಗಿದೆ, ಅಷ್ಟೆ. ವಿವಾದದ ಬಗೆಗಿನ ಎಲ್ಲ ಸಂಗತಿಗಳನ್ನೂ ದಾಖಲಿಸುವ ಮತ್ತು ಎಲ್ಲ ಪ್ರಶ್ನೆಗಳನ್ನೂ ತೀರ್ಮಾನಿಸುವ ವಿಷಯವನ್ನು ನ್ಯಾಯಾಲಯಕ್ಕೆ ಬಿಡಲಾಗಿದೆ.'' (ವಿಭಾಗೀಯ ಪೀಠದ ನ್ಯಾಯಾದೇಶ, ಪು.೮, ೩ನೇ ಪ್ಯಾರಾ)

ಅಂದರೆ **''ಹಾಗೆ ನೋಡಿದಲ್ಲಿ, ವಿವಾದಾತ್ಮಕ ವಿಷಯವನ್ನು ಬಗೆಹರಿಸುವ ನಿಟ್ಟಿನಲ್ಲಿ ಎರಡೂ ಕಡೆಯವರಿಗೆ ಅವಕಾಶವನ್ನು ನೀಡಿ ಒಂದು ಸತ್ಯವನ್ನು ದಾಖಲಿಸಲು ಏಕ ಸದಸ್ಯ ಪೀಠವು ಆದೇಶ ನೀಡಿದೆಯೇ ವಿನಾ ವಿಷಯದ ಸತ್ಯಾಸತ್ಯತೆಯನ್ನು ಆಧರಿಸಿ ಯಾವುದೇ ತೀರ್ಮಾನ ಕೈಗೊಂಡಿಲ್ಲ ಮತ್ತು ಎಲ್ಲಾ ಪ್ರಶ್ನೆಗಳು ಇನ್ನೂ ತೀರ್ಮಾನವಾಗಬೇಕಿದೆ.''**

ಈ ಆದೇಶ ಇಷ್ಟು ಸ್ಪಷ್ಟವಾಗಿದ್ದರೂ ಭಜರಂಗ ದಳ, ಬಿಜೆಪಿ ಯುವ ಮೋರ್ಚಾ, ಶ್ರೀರಾಮ ಸೇನಾದಂತಹ ಸಂಘಟನೆಗಳು ನ್ಯಾಯಾದೇಶವು ತಮ್ಮ ಪರವಾಗಿ ಬಂದಿದೆಯೆಂದೂ ಪಾದುಕೆ ಪೂಜೆ ಮತ್ತು ಇನ್ನಿತರ ತಮ್ಮ ಬ್ರಾಹ್ಮಣೀಯ ಪೂಜಾ ವಿಧಾನಗಳಿಗೆ ಅವಕಾಶ ಕೊಡಬೇಕೆಂದೂ ಜಿಲ್ಲಾಧಿಕಾರಿಗಳ ಮೇಲೆ ಒತ್ತಡ ತರುತ್ತಿರುವುದು ಕಾನೂನಿಗೆ ವಿರುದ್ಧ ಮಾತ್ರವಲ್ಲ ನ್ಯಾಯಾಂಗ ನಿಂದನೆಯೂ ಆಗುತ್ತದೆ.

ಅದೇನೇ ಇದ್ದರೂ ವಿಭಾಗೀಯ ಪೀಠದ ಆದೇಶವು ನ್ಯಾಯದ ಮತ್ತು ಈ ನಾಡಿನ ಸೌಹಾರ್ದ ಇತಿಹಾಸದ ಪರವಾಗಿಯೂ ಇಲ್ಲವಾಗಿರುವುದು ದುರದೃಷ್ಟಕರ. ೨೦೦೭ರ ಫೆಬ್ರವರಿ ೧೪ರಂದು ಗುರು ದತ್ತಾತ್ರೇಯ ಪೀಠ ಸಂರಕ್ಷಣಾ ಸಮಿತಿಯ ಅಹವಾಲಿನ ವಿಚಾರಣೆ ನಡೆಸುತ್ತಿದ್ದ ಉಚ್ಚ ನ್ಯಾಯಾಲಯದ ಏಕಸದಸ್ಯ ಪೀಠ ಸಮಿತಿಯ ಅಹವಾಲನ್ನು ಎತ್ತಿಹಿಡಿದುಬಿಟ್ಟಿತು. ದತ್ತಿ ಆಯುಕ್ತರ ೧೯೮೯ರ ಆದೇಶವನ್ನು ರದ್ದುಗೊಳಿಸಿದ್ದು ಮಾತ್ರವಲ್ಲದೆ ಮರು ವಿಚಾರಣೆ ನಡೆಸಿ ೧೯೭೫ಕ್ಕೆ



ಹಿಂದೆ ಮಾತ್ರವಲ್ಲದೆ ಒಂದು ವೇಳೆ ಹೈದರಾಲಿಯ ಕಾಲಕ್ಕೂ ಹಿಂದೆ ಹಿಂದೂ ಅರ್ಚನಾ ಪದ್ಧತಿ ಇದ್ದರೆ ಅದನ್ನು ಪರಿಗಣಿಸಿ ಹಿಂದೂ ಪೂಜಾ ಪದ್ಧತಿಗೆ ಅವಕಾಶ ಕೊಡಬೇಕೆಂದು ಆದೇಶಿಸಿತು. ಆದರೆ ವೇದಿಕೆಯ ಒತ್ತಡ ಇನ್ನಿತ್ಯಾದಿ ಕಾರಣಗಳಿಂದ ಆಗಿನ ಸಮ್ಮಿಶ್ರ ಸರ್ಕಾರ ಕೂಡಲೆ ಏಕ ಸದಸ್ಯ ಪೀಠದ ಆದೇಶದ ವಿರುದ್ಧ ದ್ವಿಸದಸ್ಯ ಪೀಠಕ್ಕೆ ಅಹವಾಲು ಸಲ್ಲಿಸಿದರು. ಮೇಲ್ನೋಟಕ್ಕೆ ಏಕ ಸದಸ್ಯ ಪೀಠದ ಆದೇಶದಲ್ಲಿರುವ ತಪ್ಪು ತಿಳುವಳಿಕೆಯನ್ನು ಮನವರಿಕೆ ಮಾಡಿಕೊಂಡ ವಿಭಾಗೀಯ ಪೀಠ ಏಕ ಸದಸ್ಯ ಪೀಠದ ಆದೇಶಕ್ಕೆ ತಡೆಯಾಜ್ಞೆ ನೀಡಿತಲ್ಲದೆ ಅಂತಿಮ ನಿರ್ಣಯ ಹೊರಬೀಳುವವರೆಗೆ ೧೯೭೫ರ ಪೂರ್ವದ ಯಥಾಸ್ಥಿತಿಯನ್ನೇ ಉಳಿಸಿಕೊಂಡು ಬರಬೇಕೆಂದು ಆದೇಶ ನೀಡಿತು. ಹೀಗಾಗಿ ಬಿಜೆಪಿ ಸರ್ಕಾರದ ಪಾಲುದಾರಿಕೆಯಿದ್ದ ಸಮ್ಮಿಶ್ರ ಸರ್ಕಾರವೇ ಅಸ್ತಿತ್ವದಲ್ಲಿದ್ದರೂ ೨೦೦೭ರಲ್ಲಿ ಸಂಘಪರಿವಾರದ ಹುನ್ನಾರಗಳು ನಡೆಯಲಿಲ್ಲ.

ಆದರೆ ಇದೀಗ ದ್ವಿಸದಸ್ಯ ಪೀಠ ಅತ್ಯಂತ ಆಶ್ಚರ್ಯಕರವಾಗಿ ಯಾವ ಕಾರಣಗಳನ್ನು ಗುರುತಿಸಿ ೨೦೦೭ರಲ್ಲಿ ತಡೆಯಾಜ್ಞೆ ನೀಡಿತ್ತೋ ಅದನ್ನು ಪರಿಗಣನೆಗೇ ತೆಗೆದುಕೊಳ್ಳದೆ ಏಕ ಸದಸ್ಯ ಪೀಠದ ಆದೇಶವನ್ನು ಎತ್ತಿ ಹಿಡಿದಿದೆ. ಅಂದರೆ –

೧. ಗಿರಿಯಲ್ಲಿರುವುದು ಸೂಫಿ ರೀತಿ ರಿವಾಜು ಎಂದು ಸ್ಪಷ್ಟಗೊಳಿಸಿದ್ದ ೧೯೮೯ರ ದತ್ತಿ ಆಯುಕ್ತರ ಆದೇಶವನ್ನು ರದ್ದುಗೊಳಿಸಿದೆ.

೨. ಅಲ್ಲದೆ ೧೯೭೫ರ ಹಿಂದೆ ಮಾತ್ರವಲ್ಲದೆ ಹೈದರಾಲಿಯ ಹಿಂದಿನ ಕಾಲದಲ್ಲಿ ಸಹ ಗಿರಿಯಲ್ಲಿ ಹಿಂದೂ ರೀತಿ ರಿವಾಜು ಇದ್ದಲ್ಲಿ ಅದಕ್ಕೆ ಅವಕಾಶ ಮಾಡಿಕೊಡಬೇಕೆಂದು ಆದೇಶಿಸಿದೆ.

೩. ಈ ನಿಟ್ಟಿನಲ್ಲಿ ಕಾನೂನಿನ ಪ್ರಕಾರದ ಎಲ್ಲ ಸಂಬಂಧಿತರಿಗೂ ತಮ್ಮ ಅಹವಾಲು ಸಲ್ಲಿಸಲು ಅವಕಾಶ ಮಾಡಿಕೊಟ್ಟು ಆದಷ್ಟು ಸನಿಹದಲ್ಲಿ ದತ್ತಿ ಆಯುಕ್ತರು ಒಂದು ಬಹಿರಂಗ ವಿಚಾರಣೆ ನಡೆಸಬೇಕೆಂದೂ ಸಹ ಆದೇಶಿಸಲಾಗಿದೆ.

ನ್ಯಾಯಾಲಯವು ಮೇಲಿನ ಆದೇಶ ನೀಡಲು ಕೆಲವು ನಿರ್ದಿಷ್ಟ ಕಾರಣಗಳು ಇರಬಹುದು. ಅದರಲ್ಲಿ ಗಿರಿಯ ಸೌಹಾರ್ದ ಸಂಸ್ಕೃತಿಯ ಬಗ್ಗೆ ವಾದ ಮಾಡಬೇಕಿದ್ದ

ಸರ್ಕಾರವನ್ನು ನಡೆಸುತ್ತಿರುವ ಪಕ್ಷವೇ ಅದನ್ನು ದತ್ತ ಪೀಠ ಮಾಡುವ ಹುನ್ನಾರಗಳ ಮುಂಚೂಣಿಯಲ್ಲಿರುವುದು, ಅದರ ಸೈದ್ಧಾಂತಿಕ ಹಂಗು ವಾದ ಮಾಡಬೇಕಾದ ಸರ್ಕಾರಿ ವಕೀಲರ ಮೇಲಿರುವುದು ಸಹ ಮುಖ್ಯ ಪಾತ್ರವಹಿಸಿರುವುದರಲ್ಲಿ ಸಂಶಯವಿಲ್ಲ. ಅದಲ್ಲದೆ ಇಡೀ ಪ್ರಕರಣದಲ್ಲಿ ನ್ಯಾಯಾಲಯಗಳೇ ಇತ್ಯರ್ಥಗೊಳಿಸಿದ್ದ ಹಲವಾರು ಅಂಶಗಳನ್ನು ಭಾಗೀಯ ಪೀಠದ ಗಮನಕ್ಕೆ ತರದೆ ಸತ್ಯಾಂಶಗಳನ್ನು ಹೂತುಹಾಕಿ ನ್ಯಾಯಾಲಯದ ದುರ್ಬಳಕೆ ಮಾಡಿಕೊಳ್ಳಲಾಗಿದೆ. ಹೀಗಾಗಿ ಸಾರಾಂಶದಲ್ಲಿ ಮೇಲಿನ ಆದೇಶವು ಪರೋಕ್ಷವಾಗಿ ಸಂಘಪರಿವಾರದ ಕೋಮುವಾದಿ ವಾದ ವನ್ನು ಪುರಸ್ಕರಿಸಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿದೆ.

ಅಲ್ಲದೆ ೧೯೮೯ರ ಆದೇಶವನ್ನು ನೀಡುವ ಮುಂಚೆಯೂ ದತ್ತಿ ಆಯುಕ್ತರು ಸಹ ಉಚ್ಚ ನ್ಯಾಯಾಲಯದ ಆದೇಶದ ಮೇರೆಗೆ ಬಹಿರಂಗ ವಿಚಾರಣೆ ನಡೆಸಿ ತಮ್ಮ ತೀರ್ಮಾನ ನೀಡಿದ್ದರು. ಹಾಗಿದ್ದ ಮೇಲೆ ಹೊಸ ವಿಚಾರಣೆಗೆ ಪ್ರೇರಣೆಯೇನು ? ಹಿಂದಿನ ನಿರ್ಣಯ ಹಿಂದುತ್ವವಾದಿ ಸಂಘಟನೆಗಳ ಪರವಾಗಿರಲಿಲ್ಲ ಎಂಬುದನ್ನು ಬಿಟ್ಟರೆ ಮತ್ತೇನೂ ಅಲ್ಲ. ಆದರೆ ನ್ಯಾಯಾಲಯ ಗಮನಿಸಬೇಕಿದ್ದುದು ಆ ವಿಚಾರಣೆ ನ್ಯಾಯ ಮತ್ತು ಕಾನೂನು ಸಮ್ಮತವಾಗಿ ನಡೆದಿದೆಯೋ ಇಲ್ಲವೋ ಎಂಬುದನ್ನೇ ಹೊರತು ಅದು ಹಿಂದುತ್ವವಾದಿ ಸಂಘಟನೆಗಳ ಅಹವಾಲನ್ನು ಪರಿಗಣಿಸಿದೆಯೋ ಇಲ್ಲವೋ ಎಂಬುದನ್ನಲ್ಲ. ಮೇಲಾಗಿ ಒಮ್ಮೆ ಇದೇ ನ್ಯಾಯಾಲಯದ ಆದೇಶದ ಮೇರೆಗೆ ನಡೆದ ವಿಚಾರಣೆಯನ್ನು ಇದೇ ನ್ಯಾಯಾಲಯ ರದ್ದುಗೊಳಿಸು ವುದು ಸಹ ಕಾನೂನು ಸಮ್ಮತವಲ್ಲ.

ಎಲ್ಲಕ್ಕಿಂತ ಅತ್ಯಂತ ಅಪಾಯಕಾರಿಯಾದದ್ದೆಂದರೆ ಗಿರಿಯಲ್ಲಿ ೧೯೭೫ರ ಹಿಂದೆ ಮಾತ್ರವಲ್ಲ ಹೈದರಾಲಿಯ ಕಾಲದ ತನಕವೂ ಇತಿಹಾಸದ ಗತವನ್ನು ತೋಡಿ ಹಿಂದೂ ರೀತಿ ರಿವಾಜುಗಳಿತ್ತೆ, ಎಂದು ಪರಿಶೀಲಿಸಲು ಆದೇಶಿಸಿರುವುದು. ಈ ಆದೇಶ ಕೇವಲ ಗಿರಿಯ ಮೇಲೆ ಅಥವಾ ಕರ್ನಾಟಕದಲ್ಲಿ ಮಾತ್ರವಲ್ಲ ಇಡೀ ದೇಶದಲ್ಲೇ ಅತ್ಯಂತ ಅಪಾಯಕಾರಿ ಪರಿಣಾಮವನ್ನು ಉಂಟುಮಾಡುತ್ತಿದೆ.

ಏಕೆಂದರೆ ೧೯೪೭ರ ಹಿಂದೆ ಈ ದೇಶದ ಇತಿಹಾಸದಲ್ಲಿ ಸಾಕಷ್ಟು ಸಂಗತಿಗಳು ಆಗಿಹೋಗಿವೆ. ಹಿಂದೂ ದೇವಾಲಯಗಳ ಮೇಲೆ ಮುಸಲ್ಮಾನ ದೊರೆಗಳು ದಾಳಿ ಮಾಡಿದ್ದು ಒಂದು ಕಾಲಘಟ್ಟದ ಇತಿಹಾಸವಾದರೆ, ಅದಕ್ಕೂ ಹಿಂದೆ ಜೈನ ಬಸದಿ ಮತ್ತು ಬೌದ್ಧ ವಿಹಾರಗಳ ಮೇಲೆ ಬ್ರಾಹ್ಮಣಶಾಹಿಗಳು ದಾಳಿ ಮಾಡಿ ನಾಶಮಾಡಿದ್ದಾರೆ ಅಥವಾ ಬ್ರಾಹ್ಮಣೀಕರಿಸಿ ಬಿಟ್ಟಿದ್ದಾರೆ. ಹೀಗಾಗಿ ಇತಿಹಾಸದ ಗೋರಿಯನ್ನು ಎಷ್ಟು ಆಳಕ್ಕೆ ತೋಡುತ್ತೇವೆಯೋ ಅಷ್ಟು ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. (ಅದೇನೇ ಇದ್ದರೂ ಬಾಬಾಬುಡನ್ ಗಿರಿಯು ಇತಿಹಾಸದ ಉದ್ದಕ್ಕೂ ಅದು ಸೂಫಿ ಶ್ರದ್ಧಾ ಕೇಂದ್ರವಾಗಿತ್ತೇ ವಿನಾ ಯಾವುದೇ ಮುಸಲ್ಮಾನ ದೊರೆಯ ದಾಳಿಗೆ ಒಳಗಾಗಿ ಇಸ್ಲಾಮೀಕರಣವಾಗಿಲ್ಲ. ಹಾಗೆಂದು ವಾದಿಸುವ ಸಂಘ ಪರಿವಾರವೂ ಸಹ ಪುರಾಣ ಪುಣ್ಯ ಕಥೆಗಳನ್ನು ಉದಾಹರಿಸುತ್ತಿದೆಯೇ ಅಥವಾ




ಸೃಷ್ಟಿಸುತ್ತಿದೆಯೇ ವಿನಾ ಈವರೆಗೆ ನ್ಯಾಯಾಲಯದಲ್ಲಾಗಲೀ ಅಥವಾ ಜನರೆದುರಾಗಲೀ ಐತಿಹಾಸಿಕ ಪುರಾವೆಗಳನ್ನು ಮುಂದಿಟ್ಟಿಲ್ಲ.)

ಆದ್ದರಿಂದಲೇ ದೇಶದಲ್ಲಿ ಬಾಬ್ರಿ ಮಸೀದಿಯು ರಾಮ ಮಂದಿರವಾಗಿತ್ತೆನ್ನುವ ಉನ್ಮತ್ತ ಕೋಮುವಾದಿ ರಾಜಕೀಯವನ್ನು ಸಂಘಪರಿವಾರ ಬಿತ್ತುತ್ತಿರುವ ಸಂದರ್ಭದಲ್ಲಿ ಪಾರ್ಲಿಮೆಂಟಿನಲ್ಲಿ ಎಲ್ಲಾ ಪಕ್ಷಗಳ ಸಮ್ಮತಿ ಯೊಂದಿಗೆ ೧೯೯೧ರಲ್ಲಿ ಒಂದು ಕಾಯಿದೆಯನ್ನು ಜಾರಿ ಮಾಡಲಾಯಿತು. ಅದರ ಪ್ರಕಾರ ಬಾಬ್ರಿ ಮಸೀದಿ ಯೊಂದನ್ನು ಹೊರತುಪಡಿಸಿ ಮಿಕ್ಕೆಲ್ಲಾ ಧರ್ಮಶ್ರದ್ಧಾ ಕೇಂದ್ರಗಳ ಧಾರ್ಮಿಕ ಶ್ರದ್ಧಾ ಸ್ವರೂಪವನ್ನು ೧೯೪೭ರಲ್ಲಿ ಹೇಗಿತ್ತೋ ಹಾಗೆಯೇ ಉಳಿಸಿಕೊಳ್ಳಬೇಕು. ಇದು ಅತ್ಯಂತ ವಿವೇಕಯುತ ಕಾಯಿದೆಯಾಗಿದ್ದು ಗತದ ಹೊರೆಯನ್ನು ಕಳಚಿಟ್ಟು ಜಾತ್ಯತೀತತೆಯ ಮತ್ತು ಭವಿಷ್ಯಮುಖಿ ನೆಲೆಯಲ್ಲಿ ಈ ದೇಶದ ಭವಿಷ್ಯವನ್ನು ಕಟ್ಟುವ ಮಾರ್ಗದರ್ಶನವನ್ನು ನೀಡುತ್ತಿದೆ. ಆದರೆ ಗಿರಿಯಲ್ಲಿ ಹೈದರಾಲಿಯ ಕಾಲವಾದ ೧೭೫೨ಕ್ಕೂ ಹಿಂದಿನ ಇತಿಹಾಸವನ್ನು ತಡಕಿ ಗಿರಿಯಲ್ಲಿ ಹಿಂದೂಗಳಿಗೆ ಅನ್ಯಾಯವಾಗಿದೆಯೇ ಎಂಬುದನ್ನು ಹುಡುಕಲು ಆದೇಶಿಸುವ ಮೂಲಕ ಕರ್ನಾಟಕದ ಉಚ್ಚ ನ್ಯಾಯಾಲಯ ಜನರನ್ನು ಒಡೆದಾಳುವ ಕೋಮುವಾದಿಗಳಿಗೆ ವಿವಾದಗಳ ಹೊಸ ಹುಲ್ಲುಗಾವಲನ್ನೇ ಹುಡುಕಿಕೊಟ್ಟಂತಾಗಿದೆ. ಇದರ ಪರಿಣಾಮದಿಂದಾಗಿ ಈ ನಾಡಿನ ಸೌಹಾರ್ದ ಸಂಸ್ಕೃತಿ ಮತ್ತು ಜಾತ್ಯತೀತ ಆಶಯಗಳಿಗೆ ಮಾತ್ರವಲ್ಲ, ಇಡೀ ಭಾರತವೆಂಬ ರಾಷ್ಟ್ರ ನಿರ್ಮಾಣದ ಅಡಿಪಾಯಕ್ಕೇ ದೊಡ್ಡ ಭಂಗ ಉಂಟಾಗುವುದರಲ್ಲಿ ಆಶ್ಚರ್ಯವಿಲ್ಲ.

ಇಂದು ಬಿಜೆಪಿ ಸರ್ಕಾರ ಅಧಿಕಾರಕ್ಕೆ ಬಂದು ಬಲಪಂಥೀಯ ಶಕ್ತಿಗಳದ್ದು ಮೇಲುಗೈಯಾಗಿ ಜಾತ್ಯತೀತ ಶಕ್ತಿಗಳು ಸಾಪೇಕ್ಷವಾಗಿ ಬಲಹೀನವಾಗಿರುವ ಸಂದರ್ಭ. ಇಂಥ ಸಂದರ್ಭದಲ್ಲಿ ಬಾಬಾಬುಡನ್‌ಗಿರಿಯ ಬಗ್ಗೆ ಮೇಲಿನ ಆದೇಶ ಹೊರಬಿದ್ದಿದೆ. ಇದು ನಾಡಿನ ಎಲ್ಲಾ ಪ್ರಗತಿಪರ ಶಕ್ತಿಗಳು ತಮ್ಮ ಮಿತಿಗಳನ್ನು ಮತ್ತು ಭಿನ್ನಾಭಿಪ್ರಾಯಗಳನ್ನು ಮೀರಿ ಮತ್ತಷ್ಟು ಜವಾಬ್ದಾರಿಯಿಂದ ಸಂಘಟಿತ ಪ್ರತಿರೋಧ ತೀವ್ರವಾಗಿ ತೋರಲೇಬೇಕಾದ ಅನಿವಾರ್ಯತೆಯನ್ನು ಹುಟ್ಟಿಹಾಕಿರುವುದಂತೂ ಸತ್ಯ. ೨೦೦೨ರಲ್ಲಿ ನಾಡಿನ ಜನತೆ ತೋರಿದ ಐಕ್ಯತೆಯನ್ನು ಇಂದೂ ತೋರಿದ ಹೊರತು ಕರ್ನಾಟಕದಲ್ಲಿ ಮಾತ್ರ ಜಾತ್ಯತೀತ ಶಕ್ತಿಗಳು ಪಡೆದುಕೊಂಡ ಯಶಸ್ಸನ್ನು ಉಳಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.

ಇದು ಸಾಧ್ಯ. ಏಕೆಂದರೆ ವಿಭಾಗೀಯ ಪೀಠದ ಆದೇಶ ನಮ್ಮ ಸೌಹಾರ್ದ ಚಳವಳಿಗೆ ಒಂದು ಹಿನ್ನಡೆಯೇ ವಿನಾ ಸೋಲೇನಲ್ಲ. ಏಕೆಂದರೆ ೧೯೯೧ರ ಪಾರ್ಲಿಮೆಂಟ್ ಕಾಯಿದೆಯ ಹಿನ್ನೆಲೆಯಲ್ಲಿ ಈ ಆದೇಶ ದೇಶಾದ್ಯಂತ ಉಂಟುಮಾಡಬಹುದಾದ ಪರಿಣಾಮವನ್ನು ಗಮನದಲ್ಲಿಟ್ಟುಕೊಂಡು ದೇಶದ ಇತರ ಭಾಗದಲ್ಲಿರುವ ಜಾತ್ಯತೀತ ಶಕ್ತಿಗಳು ಈ ಆದೇಶವನ್ನು ಸುಪ್ರೀಂ ಕೋರ್ಟಿನಲ್ಲಿ ಪ್ರಶ್ನಿಸಲು ನಮಗೆ ಸಹಾಯ ಮಾಡಲು ಮುಂದೆ ಬಂದಿವೆ. ಅದೇ ಸಮಯದಲ್ಲಿ ಜಿಲ್ಲಾಧಿಕಾರಿಗಳು ಈ ಬಗ್ಗೆ ನ್ಯಾಯಸಮ್ಮತ ವಿಚಾರಣೆ ನಡೆಸಲು ಒತ್ತಡವನ್ನು ಹೇರುತ್ತಲೇ ಆ ವಿಚಾರಣೆಯನ್ನು ಸತ್ಯದ ಪ್ರತಿಪಾದನೆಯ ದೊಡ್ಡ ಆಂದೋಲನವನ್ನಾಗಿ ಪರಿವರ್ತಿಸಬಹುದಾದ ಸಂದರ್ಭವೂ ಇದಾಗಿದೆ. ನ್ಯಾಯಾದೇಶದಲ್ಲಿ ಧಾರ್ಮಿಕ ರೀತಿ ರಿವಾಜುಗಳ ಬಗ್ಗೆ ಬಹಿರಂಗ ವಿಚಾರಣೆ ನಡೆಸಿ ನಂತರ ಅಂತಿಮ ಆದೇಶ ಕೊಡಬೇಕೆಂದು ಸ್ಪಷ್ಟವಾಗಿ ಹೇಳಿದ್ದರೂ ಸಂಘಪರಿವಾರ ಈಗಾಗಲೇ ನ್ಯಾಯಾದೇಶ ಹಿಂದೂ ಪದ್ಧತಿಗೆ ಆದೇಶ ನೀಡಿದೆ ಎಂದು ಆದೇಶದ ತಪ್ಪು ವ್ಯಾಖ್ಯಾನ ಮಾಡುತ್ತಾ ನ್ಯಾಯಾಲಯ ನಿಂದನೆಯನ್ನೇ ಮಾಡುತ್ತಿದೆ. ಹೀಗಿರುವಾಗ ಸುಪ್ರೀಂ ಕೋರ್ಟಿನಲ್ಲಿ ವಿಭಾಗೀಯ ಪೀಠ ನೀಡಿರುವ ಆದೇಶದ ಸಿಂಧುತ್ವವನ್ನು ಪ್ರಶ್ನಿಸುತ್ತಲೇ ಆ ಆದೇಶಕ್ಕೆ ಬದ್ಧವಾಗಿ ನಡೆಯುವ ವಿಚಾರಣೆಯನ್ನು ಸತ್ಯಪ್ರತಿಪಾದನೆಯ ಆಂದೋಲನ ವನ್ನಾಗಿ ಪರಿವರ್ತಿಸುವುದು ನ್ಯಾಯಾದೇಶದ ಪರಿಣಾಮಕಾರಿ ಪಾಲನೆಯಾಗುತ್ತಿದೆಯೇ ವಿನಾ ಸದರಿ ನ್ಯಾಯಾದೇಶದ ಉಲ್ಲಂಘನೆಯೇನೂ ಆಗುವುದಿಲ್ಲ.

ಒಟ್ಟಿನಲ್ಲಿ ಈ ಆದೇಶ ಒಂದು ಅಪಾಯಕಾರಿಯಾದ ಬೆಳವಣಿಗೆಯೇ ಆಗಿದ್ದರೂ ನಾವೆಲ್ಲರೂ ಒಗ್ಗಟ್ಟನ್ನು ಮೆರೆದು ಸಂಘಟಿತ ಪ್ರತಿರೋಧವನ್ನು ತೋರಿದ್ದೇ ಆದಲ್ಲಿ ಒಂದು ಅಪೂರ್ವ ಅವಕಾಶವೂ ಆಗಲಿದೆ. ನಾಡಿನ ಜಾತ್ಯತೀತ ಶಕ್ತಿಗಳು ಮಾಡಬಹುದಾದದ್ದು:

೧. ಬಾಬಾಬುಡನ್‌ಗಿರಿಯ ಸತ್ಯಾಂಶದ ಬಗ್ಗೆ ನಮ್ಮ ಸ್ಥಳಗಳಲ್ಲಿ ಮತ್ತು ಕ್ಷೇತ್ರಗಳಲ್ಲಿ ಪ್ರಚಾರಾಂದೋಲನವನ್ನು ಏರ್ಪಡಿಸುವುದು.

೨.ಮಾಧ್ಯಮಗಳನ್ನು ಬಳಸಿಕೊಂಡು ಹೆಚ್ಚಿನ ಪ್ರಚಾರ ಮಾಡುವುದು.

೩.ಸುಪ್ರೀಂ ಕೋರ್ಟಿನಲ್ಲಿ ಹಾಕುವ ದಾವೆಯನ್ನು ಸಕಲ ಕರ್ನಾಟಕ ಜನತೆಯ ಪ್ರಾತಿನಿಧಿಕ ದಾವೆಯನ್ನಾಗಿ ಮಾಡಬೇಕೆನ್ನುವುದು ಒಂದು ಸಲಹೆ. ಅದರಲ್ಲಿ ತಾವೂ ಅಹವಾಲುದಾರರಾಗುವುದು.

೪.ಚಿಕ್ಕಮಗಳೂರಿನಲ್ಲಿ ವಿಚಾರಣೆ ನಡೆದಲ್ಲಿ ಅದರಲ್ಲಿ ತಾವೂ ಮುಂದೆ ಬಂದು ಸಾಕ್ಷ್ಯ ನುಡಿಯುವುದು, ಲಿಖಿತ ಮನವಿ ಸಲ್ಲಿಸುವುದು, ಇತ್ಯಾದಿ. ❐

# ಸಮೂಹ ಮಾಧ್ಯಮಗಳು ಮತ್ತು ಯುವಜನತೆ

ಡಾ|| ಸತೀಶ್ ಕುಮಾರ್ ಅಂಡಿಂಜೆ

ಆಧುನಿಕ ಶಿಕ್ಷಣದಲ್ಲಿ ಅನೇಕ ಒಳ್ಳೆಯ ಸಂಗತಿಗಳಿವೆ. ಆದರೆ ಈ ಒಳ್ಳೆಯ ಸಂಗತಿಗಳನ್ನೆಲ್ಲ ಅದುಮಿಡುವ ಒಂದು ಭಯಂಕರ ದೋಷ ಈ ಶಿಕ್ಷಣದಲ್ಲಿದೆ ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದರು. ಉತ್ತಮ ಮನುಷ್ಯ ನಿರ್ಮಾಣದ ಶಕ್ತಿ ಈ ಶಿಕ್ಷಣದಲ್ಲಿ ಇಲ್ಲದಿರುವುದೇ ಈ ಭಯಂಕರ ದೋಷ. ಭಾವಹೀನವಾಗಿರುವ ಈ ಶಿಕ್ಷಣ ಸಾವಿಗಿಂತಲೂ ಕೆಟ್ಟದ್ದು ಎಂದು ಅವರು ಹೇಳಿದ್ದರು. ಇಂದಿನ ಮಾಧ್ಯಮಗಳ ಬಗ್ಗೆಯೂ ಅದನ್ನೇ ಹೇಳಬಹುದು. ಶಿಕ್ಷಣದ ಕೆಲಸವಾದ ವ್ಯಕ್ತಿತ್ವ ನಿರ್ಮಾಣ ಮಾಧ್ಯಮದ ಕೆಲಸ ಅಲ್ಲದಿರಬಹುದು. ಆದರೆ ಮಾನವತೆಯ ರಕ್ಷಣೆ ಹಾಗೂ ಬಲವರ್ಧನೆ ಖಂಡಿತವಾಗಿಯೂ ಮಾಧ್ಯಮದ ಅವಶ್ಯಕ ಕಾರ್ಯ. ಸಮಾಜದಲ್ಲಿ, ಜನರಲ್ಲಿ ಜಾಗೃತ ಗೊಳಿಸುವ ಕಾರ್ಯವನ್ನಾದರೂ ಮಾಧ್ಯಮ ಮಾಡಬೇಕು ಎಂದು ಗಾಂಧೀಜಿ ಹೇಳಿದ್ದರು. ಭಾವನೆ ಹಾಗೂ ಸಂವೇದನಾಶೀಲತೆ ಇಲ್ಲದಿದ್ದರೆ ಈ ಕನಿಷ್ಠ ಕೆಲಸವೂ ಸಾಧ್ಯವಾಗದು. ಇವುಗಳಿಲ್ಲದಿದ್ದರೆ ಯೋಗ್ಯ ಹೊಣೆಯರಿತ ಸಮಾಜ ರಚನೆ ಆಗಲಾರದು. ಯೋಗ್ಯ ಮಾರ್ಗದರ್ಶನವೂ ಆಗಲಾರದು. ಪತ್ರಿಕೋದ್ಯಮದ ಆದರ್ಶ ಭಾವನೆಗಳೇ ಮಾಧ್ಯಮಕ್ಕೆ ಸರಿಯಾದ ದಿಕ್ಕಿನಲ್ಲಿ ಸಾಗಲು ಪ್ರೇರಣೆ ನೀಡಬಲ್ಲವು. ಮಾಧ್ಯಮವು ಅತ್ಯಂತ ಶಕ್ತಿ ಮತ್ತು ವ್ಯಾಪಕತೆ ಹೊಂದಿರುವ ಕಾರಣ ಅದು ವಿಧಾಯಕ ಹಾಗೂ ವಿಧ್ವಂಸಕ – ಇವುಗಳಲ್ಲಿ ಯಾವ ಮಾರ್ಗ ಅನುಸರಿಸುತ್ತದೊ ಅದೇ ಪರಿಣಾಮ ಸಮಾಜದ ಮೇಲೆ ಆಗುತ್ತದೆ.

ಅತ್ಯಂತ ದುರಂತದ ಬೆಳವಣಿಗೆ ಎಂದರೆ ನಮ್ಮ ಕೆಲವು ಮಾಧ್ಯಮ ಮಿತ್ರರು ಭಾರತದ ಪರಂಪರಾಗತ ಸಂಸ್ಕೃತಿಯ ವಿರುದ್ಧ ಸೇಡು ತೀರಿಸುವ ರೀತಿಯ ಪ್ರಚಾರದಲ್ಲಿ ತೊಡಗಿದ್ದಾರೆ. ಬ್ರಿಟಿಷ್ ಆಡಳಿತದ ವೇಳೆ ಶಿಕ್ಷಣ ತಜ್ಞ ಮೆಕಾಲೆ ಇದನ್ನೇ ಬಯಸಿದ್ದ. ಭಾರತೀಯರು ಶಿಕ್ಷಿತರಾಗಿ ತಮ್ಮದೇ ಸಂಸ್ಕೃತಿಯನ್ನು ವಿರೋಧಿಸುವಂತೆ, ದ್ವೇಷಿಸುವಂತೆ ಮಾಡಬೇಕೆನ್ನುವ ದೃಷ್ಟಿಯಲ್ಲೇ ಆತ ಭಾರತದ ಶಿಕ್ಷಣ ನೀತಿ ರೂಪಿಸಿದ್ದ. ಇಂದು ನಮ್ಮ ಮಾಧ್ಯಮಗಳಲ್ಲಿ ಹಲವಾರು ಮೆಕಾಲೆಗಳು ತುಂಬಿದ್ದಾರೆ ಎಂದರೆ ತಪ್ಪಾಗಲಾರದು. ವೀಕ್ಷಕರನ್ನು / ಓದುಗರನ್ನು ತಮ್ಮ ಕಡೆಗೆ ಸೆಳೆಯಲು ಭ್ರಷ್ಟರು, ವಂಚಕರು, ಕೊಲೆಗಾರರು ಮತ್ತು ದುಷ್ಟರನ್ನು ಮತ್ತೆ ಮತ್ತೆ ತೋರಿಸುವುದು, ಕುಸ್ತಿಯ ಹೆಸರಿನಲ್ಲಿ ದಿನ ಉದ್ದಕ್ಕೂ ಹಿಂಸೆಗೆ ಪ್ರಚೋದನೆ ನೀಡುವ, ಫ್ಯಾಷನ್ ನೆಪದಲ್ಲಿ ಲೈಂಗಿಕತೆ ನಗ್ನತೆಗಳಿಗೆ ಪ್ರೇರೇಪಣೆ ನೀಡುವ ಮತ್ತು ಸಂಗೀತದ ಮುಖವಾಡ ಧರಿಸಿ ಹಸಿ ಬಿಸಿ ಕಾಮನೆಗಳನ್ನು ಉತ್ತೇಜಿಸುವ ಚಾನೆಲ್‌ಗಳು ಪ್ರೇಕ್ಷಕರನ್ನು ಕೆರಳಿಸುವುದು ಆಶ್ಚರ್ಯವೇನಲ್ಲ. ವಿದ್ಯಾರ್ಥಿಗಳ ದಾರಿತಪ್ಪಿಸುವ ಇನ್ನೊಂದು ಕ್ಷೇತ್ರವೆಂದರೆ ಮಾಧ್ಯಮಗಳು ಬಿತ್ತರಿಸುವ ಜಾಹೀರಾತು. ಸುಳ್ಳನ್ನೇ ನೂರು ಸಲ, ಸಾವಿರ ಸಲ ಹೇಳಿದಾಗ ಸತ್ಯವೆನಿಸುವಂತೆ, ವಿಷವನ್ನೇ ಅಮೃತವೆಂದು ನಂಬಿಸಿ ಕುಡಿಸುವ ಜಾಹೀರಾತುಗಳನ್ನು ಯಾವುದೇ ಮಾಧ್ಯಮ ವಿರೋಧಿಸುವ ಧೈರ್ಯ ಮಾಡುವುದಿಲ್ಲ.

ಯುವಜನಾಂಗ ಹಾಗೂ ಮಕ್ಕಳನ್ನು ನೈತಿಕ ಹಾಗೂ ಭೌತಿಕ ಅಧಃಪತನದ ವಿರುದ್ಧ ರಕ್ಷಿಸುವ ಹೊಣೆಗಾರಿಕೆ ಮಾಧ್ಯಮದ್ದು. ಹಾಗಾಗಿ ಯುವಜನರಲ್ಲಿ ಚಾರಿತ್ರ್ಯ ನಿರ್ಮಾಣ ಮತ್ತು ದುಶ್ಚಟಗಳು ಅಂಟದಂತೆ ನೋಡುವುದು ಮಾಧ್ಯಮದ ಪ್ರಮುಖ ಕರ್ತವ್ಯಗಳಲ್ಲಿ ಒಂದು. ಯುವ ಜನಾಂಗವು ಈ ದೇಶಕ್ಕೆ ಹೊರೆಯಾಗದ ದೇಶದ ಆಸ್ತಿಯಾಗುವಂತೆ ನೋಡಿಕೊಳ್ಳುವುದೇ ಮಾಧ್ಯಮದ ಕರ್ತವ್ಯ. ಪತ್ರಿಕೆಗಳು, ನಿಯತಕಾಲಿಕೆಗಳು, ಪ್ರಚಾರ ಮಾಧ್ಯಮ ಹಾಗೂ ಚಿತ್ರ ಮಾಧ್ಯಮಗಳಲ್ಲಿ ಅಸಹ್ಯ ಹಾಗೂ ಅಪರಾಧೀ ಪ್ರವೃತ್ತಿ ಬೆಳೆಸುವ ರೀತಿಯ ಸುದ್ದಿಗಳು, ಚಿತ್ರಗಳ ಪ್ರದರ್ಶನದ ಅನಾರೋಗ್ಯಕರ ವಾತಾವರಣದ ಹಿನ್ನೆಲೆಯಲ್ಲಿ ಲೈಂಗಿಕತೆ ಮತ್ತು ಹಿಂಸೆಗಳಿಗೆ ಸಂಬಂಧಿಸಿದ ಅಪರಾಧಗಳು ಹೆಚ್ಚುತ್ತಿರುವುದು ಎಲ್ಲರಿಗೂ ತಿಳಿದ ವಿಚಾರ. ಇಂತಹ ಪ್ರವೃತ್ತಿಯಿಂದ ಯುವ ಜನಾಂಗ ಅಭ್ಯಾಸದಲ್ಲಿ ಹರಿಸಬೇಕಾದ ಲಕ್ಷ್ಯವನ್ನು ಮೋಜಿನ ಜೀವನದತ್ತ ನೀಡುತ್ತಿದೆ. ಇದರಿಂದ ಅವರ ನೈತಿಕ ಹಾಗೂ ದೈಹಿಕ ಬಲಗಳೆರಡೂ ಕುಸಿಯುತ್ತಿವೆ. ಹಾಗಾಗಿ ಯುವ ಜನತೆ ಇಂದು ಕೌಟುಂಬಿಕ ಯಾ ಸಾಮಾಜಿಕ ಹೊಣೆಗಾರಿಕೆ ಹೊರಲು ಅಸಮರ್ಥರಾಗುತ್ತಿದ್ದಾರೆ.

ಪತ್ರಿಕೆಗಳು ಪ್ರಕಟಿಸುವ ಹಿಂಸೆಯ ಭಾಗವನ್ನು ಅನೇಕ ಯುವಕರು ಅನುಸರಿಸಿ ಹಿಂಸಾ ಮನೋಭಾವವನ್ನು ಬೆಳೆಸಿಕೊಳ್ಳುತ್ತಿದ್ದಾರೆ; ಸಮಾಜ ವಿರೋಧಿ ಚಟುವಟಿಕೆಗಳಲ್ಲಿ ತೊಡಗುತ್ತಿದ್ದಾರೆ. ಹಿಂಸೆ ಅಪರಾಧಗಳಿರುವ ಸಿನಿಮಾಗಳನ್ನು ನೋಡುವುದರಿಂದ ಅವರ ಆ ಭಾವನೆಗಳು ಪರಿಮಾರ್ಜನೆ ಆಗುವ ಬದಲು ಆ ಭಾವನೆಗಳು ಪ್ರಚೋದನೆಗೆ ಒಳಗಾಗಿ ಅವರನ್ನು ಅಪಾಯದ ಕಾರ್ಯಗಳಿಗೆ ಮುನ್ನಡೆಸುತ್ತಿವೆ. ಸಾಮಾಜಿಕ ಪಿಡುಗುಗಳಾದ ಡ್ರಗ್ಸ್ ಹಾಗೂ ವರದಕ್ಷಿಣೆಗಳ ಬಗೆಗೆ ಸಮೂಹ ಮಾಧ್ಯಮಗಳು ತಿಳುವಳಿಕೆ ನೀಡುತ್ತಿವೆ. ಡ್ರಗ್ಸ್ ಬಗೆಗೆ ಅರಿವು ಇರದೇ ಇರುವ ಅನೇಕ ಯುವಕರು ಅದರ ಅನುಭವ ಪಡೆಯಲು ಹೋಗಿ ಅದರ ಪ್ರಭಾವಕ್ಕೆ ಒಳಗಾಗಿ ತಮ್ಮ ಬದುಕನ್ನೇ ನಾಶಪಡಿಸಿಕೊಳ್ಳುತ್ತಿದ್ದಾರೆ.

ನಾಲ್ಕೈದು ವರ್ಷಗಳ ಹಿಂದೆ ಐಷಾರಾಮದ ಸಂಕೇತಗಳಾಗಿದ್ದ ಕಂಪ್ಯೂಟರ್, ಮೊಬೈಲ್, ಲ್ಯಾಪ್‌ಟಾಪ್, ಕಾರು ಇತ್ಯಾದಿ ಸೌಕರ್ಯಗಳು ಈಗ ಜೀವನಾವಶ್ಯಕ ಸರಕುಗಳಾಗಿವೆ. ಜಾಹಿರಾತಿನ ಬಣ್ಣದ ಲೋಕ ಕನಸಿನ ಕಣ್ಣುಗಳಲ್ಲಿ ಬೆರಗು ಹುಟ್ಟಿಸುತ್ತದೆ. ಆ ವಸ್ತುವಿನ ಅಗತ್ಯ ಇದೆಯೋ ಇಲ್ಲವೋ ಅದನ್ನು ಕೊಳ್ಳುವ, ಸಂಗ್ರಹಿಸುವ ಪ್ರವೃತ್ತಿ ಬೆಳೆದಿದೆ. ಇಂಟರ್‌ನೆಟ್ ಮತ್ತು ಮೊಬೈಲ್‌ಗಳಿಂದ ನಮ್ಮ ಭಾಷೆ, ಸಂಸ್ಕಾರ, ಮಾತು, ವೇಷ-ಭೂಷಣ ಎಲ್ಲವೂ ಬದಲಾಗಿದೆ. ಟಿವಿ ಚಾನೆಲ್‌ಗಳನ್ನು ಹೇಗೂ ನಿಯಂತ್ರಿಸಬಹುದು. ಆದರೆ ತಂತ್ರಜ್ಞಾನದ ಬೆಳವಣಿಗೆಯ ಪರಿಣಾಮವಾಗಿ ಹುಟ್ಟಿಕೊಂಡ ಮೊಬೈಲ್, ಅಂತರ್ಜಾಲ, ವೀಡಿಯೋ, ಡಿವಿಡಿಗಳನ್ನು ನಿಯಂತ್ರಿಸುವುದು ಕಷ್ಟಸಾಧ್ಯ.

ಇಂದು ವಿಶೇಷವಾಗಿ ವಿದ್ಯುನ್ಮಾನ ಮಾಧ್ಯಮ ನಕಾರಾತ್ಮಕ ಭಾವನೆಗಳಿಗೆ ಹೆಚ್ಚು ಒತ್ತು ನೀಡುತ್ತಿದೆ ಎಂಬ ಆರೋಪವಿದೆ. ಈಗ ಬರುವ ಧಾರಾವಾಹಿಗಳಲ್ಲಿ ಮುಕ್ತ ಲೈಂಗಿಕತೆ, ಹಿಂಸೆಯ ವೈಭವೀಕರಣ ಅತಿಯಾಗಿ ನಡೆಯುತ್ತಿದೆ. ವೀರಪ್ಪನ್, ನಕ್ಸಲೈಟ್ಸ್, ಒಸಾಮಾ ಬಿನ್ ಲಾಡನ್ ಮುಂತಾದ ಭಯೋತ್ಪಾದಕರ ಬಗ್ಗೆ ಹೆಚ್ಚು ಹೆಚ್ಚು ವರದಿಗಳು ಪ್ರಕಟಗೊಂಡು ಅವರು ಹೀರೋಗಳಾಗುತ್ತಿದ್ದಾರೆ. ಕುಟುಂಬಗಳನ್ನು ಒಡೆಯುವ, ವಿವಾಹ ವಿಚ್ಛೇದನೆಗೆ ಪ್ರೇರಣೆ ನೀಡುವ, ವಿವಾಹೇತರ ಲೈಂಗಿಕ ಸಂಬಂಧಗಳನ್ನು ವೈಭವೀಕರಿಸುವ ಧಾರಾವಾಹಿಗಳೇ ತುಂಬಿವೆ. ಕುಟುಂಬದ ಮುದುಕರು

ಯುವಜನಾಂಗ ಹಾಗೂ ಮಕ್ಕಳನ್ನು ನೈತಿಕ ಹಾಗೂ ಭೌತಿಕ ಅಧಃಪತನದ ವಿರುದ್ಧ ರಕ್ಷಿಸುವ ಹೊಣೆಗಾರಿಕೆ ಮಾಧ್ಯಮದ್ದು. ಹಾಗಾಗಿ ಯುವಜನರಲ್ಲಿ ಚಾರಿತ್ರ್ಯ ನಿರ್ಮಾಣ ಮತ್ತು ದುಶ್ಚಟಗಳು ಅಂಟದಂತೆ ನೋಡುವುದು ಮಾಧ್ಯಮದ ಪ್ರಮುಖ ಕರ್ತವ್ಯಗಳಲ್ಲಿ ಒಂದು. ಯುವ ಜನಾಂಗವು ಈ ದೇಶಕ್ಕೆ ಹೊರೆಯಾಗದ ದೇಶದ ಆಸ್ತಿಯಾಗುವಂತೆ ನೋಡಿಕೊಳ್ಳುವುದೇ ಮಾಧ್ಯಮದ ಕರ್ತವ್ಯ. ಪತ್ರಿಕೆಗಳು, ನಿಯತಕಾಲಿಕೆಗಳು, ಪ್ರಚಾರ ಮಾಧ್ಯಮ ಹಾಗೂ ಚಿತ್ರ ಮಾಧ್ಯಮಗಳಲ್ಲಿ ಅಸಹ್ಯ ಹಾಗೂ ಅಪರಾಧೀ ಪ್ರವೃತ್ತಿ ಬೆಳೆಸುವ ರೀತಿಯ ಸುದ್ದಿಗಳು, ಚಿತ್ರಗಳ ಪ್ರದರ್ಶನದ ಅನಾರೋಗ್ಯಕರ ವಾತಾವರಣದ ಹಿನ್ನೆಲೆಯಲ್ಲಿ ಲೈಂಗಿಕತೆ ಮತ್ತು ಹಿಂಸೆಗಳಿಗೆ ಸಂಬಂಧಿಸಿದ ಅಪರಾಧಗಳು ಹೆಚ್ಚುತ್ತಿರುವುದು ಎಲ್ಲರಿಗೂ ತಿಳಿದ ವಿಚಾರ. ಇಂತಹ ಪ್ರವೃತ್ತಿಯಿಂದ ಯುವ ಜನಾಂಗ ಅಭ್ಯಾಸದಲ್ಲಿ ಹರಿಸಬೇಕಾದ ಲಕ್ಷ್ಯವನ್ನು ಮೋಜಿನ ಜೀವನದತ್ತ ನೀಡುತ್ತಿದೆ. ಇದರಿಂದ ಅವರ ನೈತಿಕ ಹಾಗೂ ದೈಹಿಕ ಬಲಗಳೆರಡೂ ಕುಸಿಯುತ್ತಿವೆ. ಹಾಗಾಗಿ ಯುವ ಜನತೆ ಇಂದು ಕೌಟುಂಬಿಕ ಯಾ ಸಾಮಾಜಿಕ ಹೊಣೆಗಾರಿಕೆ ಹೊರಲು ಅಸಮರ್ಥರಾಗುತ್ತಿದ್ದಾರೆ.

ಶಿಶುಗಳಾದಿಯಾಗಿ ಎಲ್ಲರೂ ಒಟ್ಟಿಗೆ ಕುಳಿತು ನೋಡಬಹುದಾದ ಧಾರಾವಾಹಿಗಳೇ ಅಪರೂಪ ಎನ್ನಬಹುದು. ಇದೆಲ್ಲವೂ ಮಾಧ್ಯಮ ಸ್ವಾತಂತ್ರ್ಯ, ಮಹಿಳಾ ಸ್ವಾತಂತ್ರ್ಯ, ಸಾಮಾಜಿಕ ನ್ಯಾಯಗಳ ಹೆಸರಿನಲ್ಲಿ ನಡೆಯುತ್ತಿದೆ.

ಮಕ್ಕಳಿಗಾಗಿಯೇ ತಯಾರಿಸುವ ಕಾರ್ಯಕ್ರಮದಲ್ಲಿ ಒಂದು ಗಂಟೆಯಲ್ಲಿ ೩೨ ಹಿಂಸೆಯ ದೃಶ್ಯಗಳನ್ನು ತೋರಿಸಲಾಗುತ್ತಿದೆ ಎಂದು ಸ್ಯಾಟಲೈಟ್ ಟಿವಿಯಲ್ಲಿ ಹಿಂಸೆಯ ಬಗ್ಗೆ ಅಧ್ಯಯನ ನಡೆಸಿರುವ ಆ್ಯನ್‌ಬರ್ಗ್ ಸಂವಹನ ಸಂಸ್ಥೆ ತಿಳಿಸಿದೆ. ಹತ್ತು ಸ್ಯಾಟಲೈಟ್ ಚಾನಲ್‌ಗಳನ್ನು ಅಧ್ಯಯನ ಮಾಡಿದ ಮಾಧ್ಯಮ ಮತ್ತು ಸಾರ್ವಜನಿಕ ವ್ಯವಹಾರ ಕೇಂದ್ರ ೧೮ ಗಂಟೆಯಲ್ಲಿ ೧೮೦೦ ಹಿಂಸೆಯ ದೃಶ್ಯಗಳನ್ನು ತೋರಿಸಲಾಗುತ್ತಿದೆ ಎಂದಿದೆ. ಅಮೆರಿಕಾದ ಮಕ್ಕಳು ೧೬ನೇ ವಯಸ್ಸಿಗೆ ಬರುವ ವೇಳೆಗೆ ೧೮ ಸಾವಿರ ಗಂಟೆಗಳನ್ನು ಟಿವಿ ಮುಂದೆ ಕಳೆಯುತ್ತಾರೆ. ಈ ೧೮ ಸಾವಿರ ಗಂಟೆಗಳಲ್ಲಿ ೩೩ ಸಾವಿರ ಕೊಲೆಗಳನ್ನು, ೨ ಲಕ್ಷ ಹಿಂಸಾತ್ಮಕ ದೃಶ್ಯಗಳನ್ನು ನೋಡುತ್ತಾರೆ. ಅಮೆರಿಕಾದಲ್ಲಿ ಮಕ್ಕಳು ಈಗ ಗನ್‌ಗಳನ್ನು ಕೈಗೆತ್ತಿಕೊಳ್ಳುತ್ತಾರೆ. ಶಾಲೆಯಲ್ಲಿ ಮಕ್ಕಳ ನಡುವೆ ನಡೆಯುವ ಪುಟ್ಟ ಕಿತ್ತಾಟವೂ ಕೊಲೆಯಲ್ಲಿ ಪರ್ಯವಸಾನಗೊಳ್ಳುತ್ತಿದೆ. ಈ ಹಿಂಸೆ ಸ್ಯಾಟಲೈಟ್ ಚಾನಲ್‌ಗಳ ಮೂಲಕ ಭಾರತವನ್ನೂ ಪ್ರವೇಶಿಸಿದೆ. ರೆಸಲಿಂಗ್ ಪಂದ್ಯಗಳ ಹೆಸರಿನಲ್ಲಿ ವರ್ಲ್ಡ್ ರೆಸಲಿಂಗ್ ಫೆಡರೇಷನ್ ಹಿಂಸೆಗೆ ಪ್ರಚೋದನೆ ನೀಡುತ್ತದೆ. ಕಾಮಿಕ್ಸ್ ಚಾನಲ್‌ಗಳಲ್ಲೂ ಇದೇ ಪುನರಾವರ್ತನೆ. ಸ್ಯಾಟಲೈಟ್ ಚಾನಲ್‌ಗಳು ಹಿಂಸೆಗೆ ನೀಡುವ ಆದ್ಯತೆಯನ್ನು ಗಮನಿಸಿಯೇ ಮಕ್ಕಳ ಪುಸ್ತಕ ಅಂಗಡಿಗೆ ಮಕ್ಕಳನ್ನು ಆಕರ್ಷಿಸಲು ಬಾಗಿಲಲ್ಲಿ ರೆಸಲಿಂಗ್ ವ್ಯಕ್ತಿಗಳನ್ನು ನಿಲ್ಲಿಸುವ ಪರಿಪಾಠವಿದೆ. ಸುದ್ದಿಯಾಗಲಿ ಮನರಂಜನೆಯಾಗಲಿ ಅದರ ಹಿಂದೆ ಒಂದು ಅಡಗಿಸಿಟ್ಟ ಬೇರೆಯದೇ ಆದ ಉದ್ದೇಶವಿರುತ್ತದೆ. ನೋಡುಗರಿಗೆ ಗೊತ್ತಾಗದಂತೆ ಈ ಅಜೆಂಡಾವನ್ನು ಸೀರಿಯಲ್‌ಗಳ ಮೂಲಕ ಜಾಹೀರಾತಿನ ಮೂಲಕ ತುರುಕುತ್ತಾ ಹೋಗಲಾಗುತ್ತದೆ. ಈ ಅಜೆಂಡಾದ ಭಾಗವಾಗಿಯೇ ರ್‍ಯಾಂಬೋ, ಜೇಮ್ಸ್ ಬಾಂಡ್‌ಗಳು ಕೆಲಸ ಮಾಡುತ್ತವೆ. ಇದರಿಂದಾಗಿ ಭಾರತದಲ್ಲಿ ಈಗ ವಿದ್ಯಾರ್ಥಿ ಗನ್ ಹಿಡಿದು ಸಹಪಾಠಿಗಳನ್ನು ಕೊಲ್ಲುವ ದೃಶ್ಯಗಳು ಕಂಡುಬರುತ್ತಿವೆ.

ಯುವಜನಾಂಗವನ್ನು ಕೈಬೆರಳ ತುದಿಯಲ್ಲಿ ಕುಣಿಸುವ ಸ್ಯಾಟಲೈಟ್ ಸಂಗೀತದ ಚಾನಲ್‌ಗಳು ಇಡೀ ಭಾರತದ ಯುವಕರ ಕನಸುಗಳನ್ನು ಬದಲಿಸಿವೆ. ರಂಗುರಂಗಿನ ವೈಭವದ ಹಸಿವುಗಳನ್ನು ಸೃಷ್ಟಿಸುತ್ತಿವೆ. ಈ ಎಲ್ಲಕ್ಕಿಂತಲೂ ಹೆಚ್ಚಾಗಿ ಇಷ್ಟು ದಿನ ಕೇವಲ ಕೊಳ್ಳುವ ವಸ್ತುಗಳ ಮೇಲೆ ಮಾತ್ರವಿದ್ದ ಮೇಡ್ ಇನ್ ಫಾರಿನ್ ಮೋಹ ಈಗ ಸಾಂಸ್ಕೃತಿಕ ಕ್ಷೇತ್ರಕ್ಕೂ ಕಾಲಿಟ್ಟಿದೆ. ದೇಸಿ ಕಾರ್ಯಕ್ರಮಗಳೆಂದರೆ ತುಚ್ಛವಾಗಿರುವ ಈ ದಿನಗಳಲ್ಲಿ ಬಟನ್ ಒತ್ತಿದೊಡನೆ ಮೇಡ್ ಇನ್ ಫಾರಿನ್ ಕಾರ್ಯಕ್ರಮಗಳನ್ನು ಯುವ ಜನಾಂಗ ತಮ್ಮ ಅಂಗಳಕ್ಕಿಳಿಸಿಕೊಳ್ಳುತ್ತಿದೆ. ಇದರಿಂದಾಗಿ ಯುವಜನಾಂಗ ಮುಕ್ತ ಸೆಕ್ಸ್‌ಗೆ ತೆರೆದುಕೊಂಡಿದೆ. ಕೋಣೆಯೊಳಗೆ ಕೂತು ತಮ್ಮ ಸಂಸ್ಕೃತಿಗೆ ಪರಕೀಯವಾದ ಸಂಸ್ಕೃತಿಯನ್ನು ಅಪ್ಪಿಕೊಳ್ಳುತ್ತಿವೆ. ಹೀಗಾಗಿಯೇ ಅಮೆರಿಕಾದಲ್ಲಿರುವ ಸಲಿಂಗರತಿ ಸಮಸ್ಯೆಗಳು ಭಾರತದ ಸಮಸ್ಯೆಗಳಾಗಿ ಬಿಂಬಿತಗೊಳ್ಳುತ್ತಿವೆ. ಅಮೆರಿಕಾದ ಸಮಸ್ಯೆ ಎಲ್ಲೆಡೆ ಇರುವ ಸಮಸ್ಯೆ ಎನ್ನುವ ಭಾವನೆ ಯುವ ಜನಾಂಗದಲ್ಲಿ ಬೆಳೆಯುತ್ತಿದೆ.

ಸಂಗೀತದ ಚಾನಲ್‌ಗಳ ಯಶಸ್ಸಿನಿಂದಾಗಿ ಸಂಸ್ಕೃತಿ ಎಂಬುದೂ ಸಹ ಒಂದು ಬಂಡವಾಳವಾಗಿ ಬದಲಾಗಿದೆ. ಬಂಡವಾಳ ಹೂಡಿದರೆ ಅದಕ್ಕೆ ಸರಿಯಾದ ಲಾಭ ತರಬಲ್ಲ ಸಂಸ್ಕೃತಿಗಳು ಮಾತ್ರ ಚಲಾವಣೆಯಲ್ಲಿರುತ್ತವೆ. ಹೀಗಾಗಿಯೇ ಭರತನಾಟ್ಯದ ಬದಲು ಡಿಸ್ಕೋಗಳು, ನಾಟಕದ ಬದಲು ಚಲನಚಿತ್ರಗಳು, ಅರ್ಥಪೂರ್ಣ ಚಲನಚಿತ್ರಗಳ ಬದಲು ಮಸಾಲಗಳು, ನಿನಾದದ ಸಂಗೀತದ ಬದಲು ಬೀಟ್‌ಗಳೂ ತಲೆಯೆತ್ತುತ್ತಿವೆ. ಇಡೀ ಸಂಗೀತದ ಕ್ಷೇತ್ರವೇ ಮಾರ್ದವತೆಯಿಂದ ಬೀಟ್‌ನೆಡೆಗೆ ಧಾವಿಸುತ್ತಿದೆ. ಪ್ರತೀ ದಿನ ಐಸ್‌ಕ್ರೀಂ ಮೆಲ್ಲುವ, ಜೀನ್ಸ್ ಟೀ ಶರ್ಟ್ ತೊಡುವ, ಫಾಸ್ಟ್‌ಫುಡ್ ಕೇಂದ್ರಗಳಲ್ಲಿ ಕಾಣಿಸಿಕೊಳ್ಳುವ, ಜಾಹೀರಾತುಗಳಿಗೆ ಮಾರುಹೋಗುವ ವಿದ್ಯಾರ್ಥಿ ವೃಂದ ಸಂಗೀತ ಚಾನಲ್‌ಗಳಿಂದಾಗಿ ಆರಂಭವಾಗಿದೆ. ಶಿಕ್ಷಣ ಮತ್ತು ಡಿಗ್ರಿಗಳಷ್ಟೇ, ನೋಡಲು ಸುಂದರವಾಗಿ ಕಾಣಿಸಿಕೊಳ್ಳುವುದೂ ಮುಖ್ಯ ಎಂದು ಈ ಯುವ ಜನಾಂಗ ಸಂದೇಶ ನೀಡಿದೆ.

ಸಮೂಹ ಮಾಧ್ಯಮಗಳ ಪ್ರಭಾವದಿಂದ ವಿದ್ಯಾರ್ಥಿಗಳ ಓದು ಕಡಿಮೆಯಾಗುತ್ತಿದೆ. ಪುಸ್ತಕ ಸಂಸ್ಕೃತಿ ಕುಸಿಯುತ್ತಿದೆ. ಜಡತ್ವ, ಸಿಡುಕುತನ ಜಾಸ್ತಿಯಾಗುತ್ತಿದೆ. ಸೃಜನಶೀಲತೆ ಕಡಿಮೆಯಾಗುತ್ತಿದೆ. ವಿದ್ಯಾರ್ಥಿಗಳು ಛಾಯಾಪ್ರತಿಗಳಾಗುತ್ತಿದ್ದಾರೆ. ಸ್ವಂತ ಓದಿ ನೋಟ್ಸ್ ಮಾಡಿಕೊಂಡು ಅಧ್ಯಯನ ಮಾಡುವ ವಿದ್ಯಾರ್ಥಿಗಳ ಸಂಖ್ಯೆ ವಿರಳವಾಗುತ್ತಿದೆ. ತರಗತಿಯಲ್ಲಿ ಪಾಠ ಕೇಳುವ ತಾಳ್ಮೆ ಇಲ್ಲ, ಏಕಾಗ್ರತೆ ಕಡಿಮೆಯಾಗುತ್ತಿದೆ, ಮಾಧ್ಯಮಗಳಲ್ಲಿ ಶಿಕ್ಷಕರನ್ನು ಬಿಂಬಿಸುವ ರೀತಿಯನ್ನು ಅನುಸರಿಸುವ ವಿದ್ಯಾರ್ಥಿಗಳು ಶಿಕ್ಷಕರನ್ನು ಗೌರವಿಸದೆ ಕೀಳಾಗಿ ಕಾಣುತ್ತಿದ್ದಾರೆ. ವಿದ್ಯಾರ್ಥಿಗಳಲ್ಲಿ ಅಪರಾಧ ಮನೋಭಾವ ಜಾಸ್ತಿಯಾಗುತ್ತಿದೆ. ಕ್ರೈಂ ಡೈರಿ, ಕ್ರೈಂ ಸ್ಟೋರಿಗಳಲ್ಲಿ ಕಾಣಿಸಿಕೊಳ್ಳಬೇಕೆಂದು ಅಪರಾಧವೆಸಗುವ ವಿದ್ಯಾರ್ಥಿಗಳೂ ಇದ್ದಾರೆ. ಇದರಿಂದ ಬಾಲಾಪರಾಧ ಹೆಚ್ಚಾಗುತ್ತಿದೆ. ಮಾಧ್ಯಮಕ್ಕೆ ತಕ್ಕಂತೆ ವಿದ್ಯಾರ್ಥಿಗಳ ಭಾಷೆ ಕೂಡ ಬದಲಾಗುತ್ತಿದೆ. ಸಿನಿಮಾ, ಎಫ್.ಎಮ್. ರೇಡಿಯೋ, ಟಿವಿ ಚಾನಲ್‌ಗಳ ಮಿಶ್ರ ಭಾಷೆ ವಿದ್ಯಾರ್ಥಿಗಳಿಗೆ ಇಷ್ಟವಾಗುತ್ತಿದೆ. ಮೊಬೈಲ್ ಎಸ್‌ಎಂಎಸ್‌ನಿಂದಾಗಿ ಹೊಸ ಸಾಹಿತ್ಯ ಹುಟ್ಟಿಕೊಂಡಿದೆ. ಈಗಿನ ವಿದ್ಯಾರ್ಥಿಗಳ ಉತ್ತರಗಳು ಎಸ್‌ಎಂಎಸ್‌ನಂತೆ ಚುಟುಕಾಗುತ್ತಿವೆ. ಪರೀಕ್ಷೆಯಲ್ಲಿ ಕಾಪಿ ಮಾಡಲು ಮೊಬೈಲ್ ಬಳಸಿ ಸಿಕ್ಕಿಹಾಕಿಕೊಂಡ ವಿದ್ಯಾರ್ಥಿಗಳೂ ಇದ್ದಾರೆ.

ಸಮೂಹ ಮಾಧ್ಯಮಗಳಿಂದ ವಿದ್ಯಾರ್ಥಿಗಳಿಗೆ ಅನೇಕ ಅನುಕೂಲಗಳೂ ಆಗಿವೆ. ಈಗ ವಿದ್ಯಾರ್ಥಿಗಳಿಗೆ ಅಗತ್ಯವಾದ ಮಾಹಿತಿಯನ್ನು ತುಂಬಾ ಸುಲಭವಾಗಿ ಪಡೆಯಬಹುದು. ಗ್ರಂಥಾಲಯದಲ್ಲಿ ಧೂಳು ಹಿಡಿದ ಪುಸ್ತಕವನ್ನು ಹುಡುಕುವ ಪ್ರಮೇಯವೇ ಇಲ್ಲ, ಈಗ ಡಿಜಿಟಲ್ ಗ್ರಂಥಾಲಯ ಬಂದಿದೆ. ಮನೆಯಲ್ಲೇ ಕೂತು ಬೇಕಾದ ಪುಸ್ತಕ ಓದಬಹುದು. ಅಂತರ್ಜಾಲವನ್ನು ಜಾಲಾಡಿದರೆ ನಮಗೆ ಬೇಕಾದ ಮಾಹಿತಿ ಸಿಗುತ್ತದೆ. ಈಗ ತರಗತಿಗೆ ಹೋಗಿ ಪಾಠ ಕೇಳಬೇಕಾದ ಅಗತ್ಯವೂ ಇಲ್ಲ, ಇ-ಕ್ಯಾಂಪಸ್‌ನಲ್ಲಿ ಆನ್‌ಲೈನ್ ಕೋರ್ಸ್ ಮಾಡಬಹುದು. ಕಂಪ್ಯೂಟರ್‌ನಲ್ಲೇ ಪರೀಕ್ಷೆ ಬರೆಯಬಹುದು. ಈಗ ಕೆಲವು ಪ್ರವೇಶ ಪರೀಕ್ಷೆಗಳನ್ನು ಆನ್‌ಲೈನ್ ಮೂಲಕ ನಡೆಸುತ್ತಾರೆ. ಭಾರತದಲ್ಲಿ ದೂರದರ್ಶನ ಆರಂಭಿಸುವ ಮೂಲ ಉದ್ದೇಶ, ಶಿಕ್ಷಣ ನೀಡುವುದಾಗಿತ್ತು. ಅದು ದೇಶದಾದ್ಯಂತ ತರಗತಿ ಕೊಠಡಿ ಕಾರ್ಯಕ್ರಮದಡಿ ಯುಜಿಸಿ ಪ್ರಾಯೋಜಕತ್ವದಲ್ಲಿ ಪಠ್ಯಪೂರಕ ಕಾರ್ಯಕ್ರಮಗಳನ್ನು ನೀಡುತ್ತಿದೆ. ಈಗ ಅದೇ ಉದ್ದೇಶಕ್ಕಾಗಿ ಜ್ಞಾನದರ್ಶನ ಎಂಬ ಪ್ರತ್ಯೇಕ ವಾಹಿನಿಯನ್ನು ಆರಂಭಿಸಲಾಗಿದೆ. ವಿವಿಧ ಸಮೂಹ ಮಾಧ್ಯಮಗಳಲ್ಲಿ ವಿದ್ಯಾರ್ಥಿಗಳೂ ತಮ್ಮ ಪ್ರತಿಭೆಯನ್ನು ವ್ಯಕ್ತಪಡಿಸಲು ಅವಕಾಶವನ್ನು ಕಲ್ಪಿಸಲಾಗಿದೆ. ಪತ್ರಿಕೆ ಮ್ಯಾಗಜಿನ್‌ಗಳಲ್ಲಿ ವಿದ್ಯಾರ್ಥಿಗಳಿಗಾಗಿ ಹಾಗೂ ಯುವಜನರಿಗಾಗಿ ಪ್ರತ್ಯೇಕ ಪುರವಣಿ ಮತ್ತು ಅಂಕಣಗಳಿವೆ. ರೇಡಿಯೋ ಮತ್ತು ಟೆಲಿವಿಷನ್ ವಾಹಿನಿಗಳಲ್ಲಿ ಮಕ್ಕಳು ಮತ್ತು ಯುವಜನರಿಗಾಗಿ ಪ್ರತ್ಯೇಕ ಕಾರ್ಯಕ್ರಮಗಳಿರುತ್ತವೆ. ಅಂತರ್ಜಾಲದಲ್ಲೂ ಬ್ಲಾಗಿಂಗ್ ಮೂಲಕ ತಮ್ಮ ಪ್ರತಿಭೆ ವ್ಯಕ್ತಪಡಿಸಬಹುದು.

ಮೇಲಿನ ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಸಮೂಹ ಮಾಧ್ಯಮಗಳ ಕುರಿತು ನಮ್ಮ ಮನಸ್ಸು ಗೊಂದಲಕ್ಕೆ ಸಿಲುಕಿಕೊಳ್ಳುತ್ತದೆ. ಆದರೆ ಒಂದು ನಾಣ್ಯಕ್ಕೆ ಎರಡು ಮುಖಗಳಿರುವಂತೆಯೇ ಸಮೂಹ ಮಾಧ್ಯಮಗಳಿಗೂ ಲಾಭ ಹಾನಿಗಳನ್ನುಂಟು ಮಾಡುವ ಎರಡು ಮುಖಗಳಿರುವುದು ಸ್ಪಷ್ಟವಾಗಿದೆ. ಆದರೆ ಯಾವುದೇ ಒಂದು ವಸ್ತು ತನಷ್ಟಕ್ಕೆ ತಾನೇ ಸಂಪೂರ್ಣ ಒಳ್ಳೆಯದೂ ಅಲ್ಲ; ಕೆಟ್ಟದ್ದೂ ಅಲ್ಲ. ಅದನ್ನು ಉಪಯೋಗಿಸಿಕೊಳ್ಳುವ ನಮ್ಮ ಬೌದ್ಧಿಕತೆಯ ಮಟ್ಟಕ್ಕನುಗುಣವಾಗಿ ಅದರಿಂದ ಲಾಭ ಹಾಗೂ ಹಾನಿಗಳುಂಟಾಗುತ್ತವೆ. ಹಾಗೆಯೇ ಸಮೂಹ ಮಾಧ್ಯಮಗಳೂ ಕೂಡ.

**ಡಾ|| ಸತೀಶ್ ಕುಮಾರ್ ಅಂಡಿಂಜೆ**
ಉಪನ್ಯಾಸಕರು, ಪತ್ರಿಕೋದ್ಯಮ ಮತ್ತು ಸಮೂಹ ಸಂವಹನ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ,
ಶಂಕರಘಟ್ಟ - ೫೭೭೪೫೧, ಶಿವಮೊಗ್ಗ

# ಹಕ್ಕು

ಮರದ ಮೇಲೆ ಕುಂತು
ಹಿಕ್ಕೆ ಹಾಕುವ ಮುನ್ನ
ಆ ಹಕ್ಕಿ ಹೇಳಿತು:
'ಮರವೇ,
ಮರೆಯದಿರು ನನ ಹಕ್ಕು
ಹಣ್ಣಾದ ಹೊತ್ತು!'

ವಿಜಯಕಾಂತ ಪಾಟೀಲ
ಚಿಕ್ಕಾಂಶಿ – ಹೊಸೂರು - ೫೮೧೧೦೪
ಹಾನಗಲ್ಲ/ ಹಾವೇರಿ

# ಮರೆಯಲಾರದ ಕಾರ್ಮಿಕ ಮುಷ್ಕರದ ನೆನಪಿನಲ್ಲಿ

ಸಿ. ಯತಿರಾಜು

**ಸು**ಮಾರು ಒಂದು ಲಕ್ಷಕ್ಕೂ ಅಧಿಕ ಕಾರ್ಮಿಕರು ಮುಂಬೈ ನಗರದಲ್ಲಿ ಮೊಟ್ಟಮೊದಲ ರಾಜಕೀಯ ಮುಷ್ಕರವನ್ನು ೨೩ ಜುಲೈ ೧೯೦೮ರಲ್ಲಿ ಆರಂಭಿಸುವ ಮೂಲಕ ದೇಶದ ಕಾರ್ಮಿಕ ವರ್ಗದ ಚಳುವಳಿಯ ಇತಿಹಾಸದಲ್ಲಿ ಒಂದು ಹೊಸ ಯುಗವನ್ನಾರಂಭಿಸಿದರು. ನಾವು ಈ ವರ್ಷ ಅದರ ಶತಮಾನೋತ್ಸವವನ್ನಾಚರಿಸುತ್ತಿದ್ದೇವೆ. ಮುಂಬೈನ ಈ ಕಾರ್ಮಿಕರು ವೇತನ ಹೆಚ್ಚಳಕ್ಕಾಗಲಿ, ಸೇವಾ ಭದ್ರತೆಗಾಗಲಿ, ಕೆಲಸದ ಅವಧಿಯನ್ನು ಕಡಿತಗೊಳಿಸಲಿಕ್ಕಾಗಲಿ ಅಥವಾ ಇನ್ನಾವುದೇ ಕಾರ್ಮಿಕರಿಗೆ ಲಾಭದಾಯಕವಾದ ಬೇಡಿಕೆಗಳಿಗಾಗಲಿ ಈ ಮುಷ್ಕರಕ್ಕಿಳಿಯಲಿಲ್ಲ. ಕಾಂಗ್ರೆಸ್‌ನ ಉಗ್ರಗಾಮಿ ನಾಯಕತ್ರಯರಲ್ಲಿ ಅತ್ಯಂತ ಪ್ರಖ್ಯಾತರಾಗಿದ್ದ ಬಾಲ ಗಂಗಾಧರ ತಿಲಕ್ ಅವರಿಗೆ ಮುಂಬೈ ನ್ಯಾಯಾಲಯ ೬ ವರ್ಷ ಸೆರೆಮನೆವಾಸದ ಶಿಕ್ಷೆಯನ್ನು ವಿಧಿಸಿತ್ತು. ತಮ್ಮ ನೆಚ್ಚಿನ ನಾಯಕನಿಗೆ ನೀಡಲಾದ ಈ ಅನ್ಯಾಯಕರ ಶಿಕ್ಷೆಯನ್ನು ಪ್ರತಿಭಟಿಸಿ ಮುಂಬೈ ನಗರದ ಕಾರ್ಮಿಕ ಸಮೂಹ ಈ ಮುಷ್ಕರವನ್ನಾರಂಭಿಸಿತು. ಜನಸಾಮಾನ್ಯರು ಈ ಕಾರ್ಮಿಕ ಮುಷ್ಕರವನ್ನು ಬೆಂಬಲಿಸಿ ಪೂರ್ಣ ಹರತಾಳವನ್ನಾಚರಿಸುವ ಮೂಲಕ ಈ ರಾಜಕೀಯ ಮುಷ್ಕರಕ್ಕೆ ಒಂದು ಕ್ರಾಂತಿಕಾರಿ ಆಯಾಮವನ್ನು ತಂದಿತ್ತರು. ಆ ದಿನ ಇಡೀ ಮುಂಬೈ ನಗರ ಮುಷ್ಕರದಲ್ಲಿ ಮುಳುಗುವಂತಾಯಿತು. ಕೊರೆಯುವ ಚಳಿ, ಧಾರಾಕಾರವಾಗಿ ಸುರಿಯುತ್ತಿದ್ದ ಮಳೆಯನ್ನು ಧಿಕ್ಕರಿಸಿ ಕಾರ್ಮಿಕರು ಸಾಮ್ರಾಜ್ಯಶಾಹಿ ಆಳ್ವಿಕೆಯ ದಬ್ಬಾಳಿಕೆಯನ್ನು ವಿರೋಧಿಸಲು ಅತ್ಯಂತ ಉಗ್ರ ಹೋರಾಟವನ್ನಾರಂಭಿಸಿದ ದಿನ ಇದಾಗಿತ್ತು. ಅಪಾರ ಪ್ರಮಾಣದ ಶಸ್ತ್ರಾಸ್ತ್ರಗಳಿಂದ ಸಜ್ಜಿತರಾಗಿದ್ದ ಬ್ರಿಟಿಷ್ ಪಡೆಗಳ ವಿರುದ್ಧ ನಿರಾಯುಧರಾಗಿದ್ದ ಕಾರ್ಮಿಕರು ಕಲ್ಲು, ಇಟ್ಟಿಗೆಗಳನ್ನು ಹಿಡಿದು ಮುಂಬೈನ ಬೀದಿ ಬೀದಿಗಳಲ್ಲಿ ಕಾಳಗಕ್ಕಿಳಿದರು. ಯಾವುದೇ ಕಾರ್ಮಿಕ ಸಂಘಟನೆಯ ನಾಯಕತ್ವ ಇಲ್ಲದೆ, ರಾಜಕೀಯ ಪಕ್ಷದ ಮಾರ್ಗದರ್ಶನವಿಲ್ಲದೆ ಸ್ವಯಂಸ್ಫೂರ್ತಿಯಿಂದ ತಮ್ಮ ನೆಚ್ಚಿನ ರಾಷ್ಟ್ರ ನಾಯಕನ ಧೀರೋದಾತ್ತ ಹೋರಾಟಕ್ಕೆ ತಮ್ಮ ಬೆಂಬಲವನ್ನು ಸೂಚಿಸುವ ರಾಷ್ಟ್ರೀಯ ಭಾವನೆಯಿಂದ ಈ ಐತಿಹಾಸಿಕ ಮುಷ್ಕರವನ್ನಾರಂಭಿಸಿದರು. ನಗರದ ಲಕ್ಷ್ಮೀದಾಸ್, ಗ್ಲೋಬ್, ಕ್ರೆಸೆಂಟ್, ಕರೀಂಭಾಯ್, ಮೊಹಮ್ಮದ್‌ಭಾಯ್, ಬ್ರಿಟಾನಿಯಾ, ಫೀನಿಕ್ಸ್, ಗ್ರೀವ್ ಮುಂತಾದ ಸ್ವದೇಶಿ, ವಿದೇಶಿ ಮಿಲ್ಲುಗಳ ಕಾರ್ಮಿಕರು ಜಾತಿ, ಭಾಷೆ, ಪ್ರದೇಶಗಳ ತಾರತಮ್ಯಗಳನ್ನು ಮರೆತು ಈ ಹೋರಾಟಕ್ಕೆ ಮುಂದಾದರು. ಹೀಗೆ ಮಾಹಿಂ ಮತ್ತು ಪರೇಲ್ ಭಾಗದ ೬೦ಕ್ಕೂ ಹೆಚ್ಚು ಕೈಗಾರಿಕೆಗಳ ಕಾರ್ಮಿಕರೆಲ್ಲರೂ ಈ ಮುಷ್ಕರದಲ್ಲಿ ಪಾಲ್ಗೊಂಡರು. ಬರೀ ಕೈಗಾರಿಕೆಗಳ ಕಾರ್ಮಿಕರು ಮಾತ್ರವಲ್ಲದೆ ಸಾವಿರಾರು ಜನ ಬಂದರು ಕಾರ್ಮಿಕರು ಇದರಲ್ಲಿ ಪಾಲ್ಗೊಂಡರು. ವ್ಯಾಪಾರಗಾರರು ಕೂಡ ಈ ಮುಷ್ಕರಕ್ಕೆ ತಮ್ಮ ಬೆಂಬಲ ಸೂಚಿಸಿದ್ದಲ್ಲದೆ ಅವರು ಕಾರ್ಮಿಕರಿಗೆ ರಿಯಾಯಿತಿ ದರದಲ್ಲಿ ಅಕ್ಕಿ ಮಾರಾಟ ಮಾಡುವುದರ ಮೂಲಕ ಈ ಮುಷ್ಕರಕ್ಕೆ ತಮ್ಮ ಬೆಂಬಲ, ಸಹಾನುಭೂತಿಗಳನ್ನು ವ್ಯಕ್ತಪಡಿಸಿದರು. ಈ ಮುಷ್ಕರ ಕೇವಲ ಒಂದು ದಿನದ ಸಾಂಕೇತಿಕ ಮುಷ್ಕರವಾಗಿರಲಿಲ್ಲ. ಸಾಮ್ರಾಜ್ಯಶಾಹಿಗಳ ನ್ಯಾಯಾಲಯ ನೀಡಿದ ೬ ವರ್ಷಗಳ ಕಾರಾಗೃಹ ಶಿಕ್ಷೆಗೆ ಪ್ರತಿಭಟನಾರ್ಥವಾಗಿ ಸತತವಾಗಿ ೬ ದಿನಗಳ ಕಾಲ ಈ ಮುಷ್ಕರ ಜುಲೈ ೨೩ರಿಂದ ೨೮ರವರೆಗೆ ಮುಂದುವರಿಯಿತು. ಮುಷ್ಕರದ ಕೊನೆ ದಿನ ರತ್ನಗಿರಿಯ ರೈತ ಕುಟುಂಬಗಳಿಂದ ಬಂದ ಮನೆ ಕೆಲಸಗಾರರು ಈ ಮುಷ್ಕರದಲ್ಲಿ ಪಾಲ್ಗೊಂಡರು. ಈ ಕೆಲಸಗಾರರು ಮನೆಗಳ ಮಹಡಿಗಳ ಮೇಲೆ ನಿಂತು ಗಲ್ಲಿಯಲ್ಲಿ ಗಸ್ತು ತಿರುಗುತ್ತಾ ಮುಷ್ಕರನಿರತ ಕಾರ್ಮಿಕರ ಮೇಲೆ ದಾಳಿ ಮಾಡುತ್ತಿದ್ದ ಸೈನಿಕರ ಮೇಲೆ ಕಲ್ಲು ಇಟ್ಟಿಗೆಗಳ ಸುರಿಮಳೆಗರೆದು ಬ್ರಿಟಿಷ್ ಪಡೆಗಳನ್ನು ಅಪಾರವಾಗಿ ಹಿಂಸಿಸಿದರು. ತಿಲಕರ ಭಾವಚಿತ್ರಗಳುಳ್ಳ ಕರಪತ್ರಗಳನ್ನು ಹಂಚಿ ಹೋರಾಟಕ್ಕೆ ವ್ಯಾಪಾರಿ ವರ್ಗ ತನ್ನ ಬೆಂಬಲ ಸೂಚಿಸಿತು. ಕೇಶವಲಾಲ್ ಕಂಜಿ, ಗಣಪತ್ ಗೋಪಿಂದ ಮುಂತಾದವರು ತಮ್ಮ ಕೊನೆಯುಸಿರಿನವರೆಗೂ ಹೋರಾಟಗಾರರನ್ನು ಹುರಿದುಂಬಿಸುತ್ತಾ ಕಾರ್ಮಿಕ ಪಡೆಗಳನ್ನು ಬ್ರಿಟಿಷ್ ಪಡೆಗಳ ಮೇಲೆರಗುವಂತೆ ಪ್ರೇರೇಪಿಸುತ್ತ ಹುತಾತ್ಮರಾದರು. ಬ್ರಿಟಿಷ್ ಸೈನಿಕರೊಂದಿಗೆ ೬ ದಿನಗಳ ಕಾಲ ನಡೆದ ಬೀದಿ ಕಾಳಗದಲ್ಲಿ ಸರ್ಕಾರಿ ಲೆಕ್ಕಗಳ ಪ್ರಕಾರವೇ ಸುಮಾರು ೧೬ ಜನ ಕಾರ್ಮಿಕರು ವೀರಮರಣವನ್ನಪ್ಪಿದರು. ೫೦ಕ್ಕೂ ಹೆಚ್ಚು ಜನ ಗಾಯಾಳುಗಳಾದರು. ಆದರೆ ಅನಧಿಕೃತವಾಗಿ ೨೦೦ಕ್ಕೂ ಹೆಚ್ಚು ಜನ ಈ ಹೋರಾಟಗಳಲ್ಲಿ ಮರಣ ಹೊಂದಿದರು, ನೂರಾರು ಮಂದಿ ಗಾಯಾಳುಗಳಾದರು ಮತ್ತು ಸಾವಿರಾರು ಜನರನ್ನು ಬಂಧಿಸಿ ಅತ್ಯಂತ ಕ್ರೂರವಾಗಿ ಹಿಂಸಿಸಲಾಯಿತೆಂದು ಕೆಲವು ಐತಿಹಾಸಿಕ ದಾಖಲೆಗಳಿಂದ ತಿಳಿದುಬರುತ್ತದೆ.

ಈ ಐತಿಹಾಸಿಕ ಸಾಮೂಹಿಕ ಮುಷ್ಕರ ಆ ಕಾಲದ ಕ್ರಾಂತಿಕಾರಿ ಪರಿಸ್ಥಿತಿಯಿಂದ ಹೊರಹೊಮ್ಮಿದ ಹೋರಾಟವಾಗಿತ್ತು. ೧೯೦೫ರಲ್ಲಿ ಲಾರ್ಡ್ ಕರ್ಜನ್ ಬಂಗಾಳವನ್ನು

ಸುಮಾರು ಒಂದು ಲಕ್ಷಕ್ಕೂ ಅಧಿಕ ಕಾರ್ಮಿಕರು ಮುಂಬೈ ನಗರದಲ್ಲಿ ಮೊಟ್ಟಮೊದಲ ರಾಜಕೀಯ ಮುಷ್ಕರವನ್ನು 23 ಜುಲೈ 1908ರಲ್ಲಿ ಆರಂಭಿಸುವ ಮೂಲಕ ದೇಶದ ಕಾರ್ಮಿಕ ವರ್ಗದ ಚಳುವಳಿಯ ಇತಿಹಾಸದಲ್ಲಿ ಒಂದು ಹೊಸ ಯುಗವನ್ನಾರಂಭಿಸಿದರು. ನಾವು ಈ ವರ್ಷ ಅದರ ಶತಮಾನೋತ್ಸವವನ್ನಾಚರಿಸುತ್ತಿದ್ದೇವೆ. ಮುಂಬೈನ ಈ ಕಾರ್ಮಿಕರು ವೇತನ ಹೆಚ್ಚಳಕ್ಕಾಗಲಿ, ಸೇವಾ ಭದ್ರತೆಗಾಗಲಿ, ಕೆಲಸದ ಅವಧಿಯನ್ನು ಕಡಿತಗೊಳಿಸಲಿಕ್ಕಾಗಲಿ ಅಥವಾ ಇನ್ನಾವುದೇ ಕಾರ್ಮಿಕರಿಗೆ ಲಾಭದಾಯಕವಾದ ಬೇಡಿಕೆಗಳಿಗಾಗಲಿ ಈ ಮುಷ್ಕರಕ್ಕಿಳಿಯಲಿಲ್ಲ. ಕಾಂಗ್ರೆಸ್‌ನ ಉಗ್ರಗಾಮಿ ನಾಯಕತ್ರಯರಲ್ಲಿ ಅತ್ಯಂತ ಪ್ರಖ್ಯಾತರಾಗಿದ್ದ ಬಾಲ ಗಂಗಾಧರ ತಿಲಕ್ ಅವರಿಗೆ ಮುಂಬೈ ನ್ಯಾಯಾಲಯ 6 ವರ್ಷ ಸೆರೆಮನೆವಾಸದ ಶಿಕ್ಷೆಯನ್ನು ವಿಧಿಸಿತ್ತು. ತಮ್ಮ ನೆಚ್ಚಿನ ನಾಯಕನಿಗೆ ನೀಡಲಾದ ಈ ಅನ್ಯಾಯಕರ ಶಿಕ್ಷೆಯನ್ನು ಪ್ರತಿಭಟಿಸಿ ಮುಂಬೈ ನಗರದ ಕಾರ್ಮಿಕ ಸಮೂಹ ಈ ಮುಷ್ಕರವನ್ನಾರಂಭಿಸಿತು. ಜನಸಾಮಾನ್ಯರು ಈ ಕಾರ್ಮಿಕ ಮುಷ್ಕರವನ್ನು ಬೆಂಬಲಿಸಿ ಪೂರ್ಣ ಹರತಾಳವನ್ನಾಚರಿಸುವ ಮೂಲಕ ಈ ರಾಜಕೀಯ ಮುಷ್ಕರಕ್ಕೆ ಒಂದು ಕ್ರಾಂತಿಕಾರಿ ಆಯಾಮವನ್ನು ತಂದಿತ್ತರು.

ವಿಭಜನೆ ಮಾಡಿದ ನಂತರ ದೇಶಾದ್ಯಂತ ವಂಗಭಂಗ ಚಳುವಳಿ ಅನೇಕ ಕ್ರಾಂತಿಕಾರಿ ಹೋರಾಟಗಳನ್ನು ಹುಟ್ಟುಹಾಕಿತ್ತು. ರಾಷ್ಟ್ರೀಯ ಹೋರಾಟ, ಸ್ವದೇಶಿ ಚಳುವಳಿ ಹಾಗೂ ವಿದೇಶಿ ವಸ್ತುಗಳ ಬಹಿಷ್ಕಾರದಂತಹ ಹೋರಾಟಗಳ ಮೂಲಕ ತೀವ್ರ ಸ್ವರೂಪವನ್ನು ಪಡೆದುಕೊಂಡಿತ್ತು. ಕಾಂಗ್ರೆಸ್‌ನ ಮಂದಗಾಮಿ ನಾಯಕರು ತೀವ್ರಗೊಳ್ಳುತ್ತಿದ್ದ ರಾಷ್ಟ್ರೀಯ ಚಳುವಳಿಯ ಅಂಚಿಗೆ ತಳ್ಳಲ್ಪಟ್ಟಿದ್ದರು. ೧೯೦೭ರಲ್ಲಿ ಸೂರತ್‌ನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಮಂದಗಾಮಿಗಳು ಮತ್ತು ತೀವ್ರಗಾಮಿಗಳಲ್ಲಿ ಪೂರ್ಣ ಒಡಕುಂಟಾಯಿತು. ಇಂತಹ ಗೊಂದಲಕಾರಿ ಸನ್ನಿವೇಶದಲ್ಲಿ ಬಂಗಾಳದ ಯುವಕರು, ಐರಿಷ್ ರಾಷ್ಟ್ರೀಯವಾದಿಗಳು ಹಾಗೂ ರಷ್ಯಾದ ಅತ್ಯುಗ್ರ ಕ್ರಾಂತಿಕಾರಿಗಳ (ನಿಹಿಲಿಸ್ಟ್) ಮಾರ್ಗವನ್ನನುಸರಿಸಿ ಕುಖ್ಯಾತ ಬ್ರಿಟಿಷ್ ಅಧಿಕಾರಿಗಳನ್ನು ಹತ್ಯೆ ಮಾಡುವ ಮೂಲಕ ಜನರಲ್ಲಿ ದೇಶಾಭಿಮಾನವನ್ನು ಉದ್ದೀಪನಗೊಳಿಸುವ ಕಾರ್ಯಕ್ಕೆ ಮುಂದಾದರು. ೧೯೦೪ರಲ್ಲೇ ವಿ.ಡಿ. ಸಾವರ್ಕರ್ 'ಅಭಿನವ ಭಾರತ' ಎಂಬ ಗುಪ್ತ ಕ್ರಾಂತಿಕಾರಿ ಸಂಘಟನೆಯನ್ನಾರಂಭಿಸಿದ್ದರು. ೧೯೦೮ ಏಪ್ರಿಲ್‌ನಲ್ಲಿ ಮುಜಾಫರ್‌ಪುರದ ಕುಖ್ಯಾತ ನ್ಯಾಯಾಧೀಶ ಕಿಂಗ್ಸ್ ಫರ್ಡ್‌ನನ್ನು ಕೊಲ್ಲಲು ಪ್ರಫುಲ್ಲ ಚೌಕಿ ಮತ್ತು ಖುದಿರಾಮ್ ಬೋಸ್ ಇಬ್ಬರೂ ಪ್ರಯತ್ನಿಸಿ ವಿಫಲರಾದರು. ಆಗ ಇಬ್ಬರು ಬ್ರಿಟಿಷ್ ಮಹಿಳೆಯರು ಕೊಲ್ಲಲ್ಪಟ್ಟರು. ಚೌಕಿ ಗುಂಡು ಹಾರಿಸಿಕೊಂಡು ಆತ್ಮಾಹುತಿಯ ಹಾದಿ ಹಿಡಿದರೆ, ಖುದಿರಾಮ್‌ಬೋಸ್‌ನನ್ನು ವಿಚಾರಣೆಗೆ ಗುರಿಪಡಿಸಿ ಗಲ್ಲಿಗೇರಿಸಲಾಯಿತು. ಆಗ ದೇಶದ ಬೇರೆ ಬೇರೆ ಭಾಗಗಳಲ್ಲಿ ಅನುಶೀಲನ್ ಸಮಿತಿ, ಯುಗಾಂತರ್ ಮುಂತಾದ ಹೆಸರುಗಳಿಂದ ಅನೇಕ ಕ್ರಾಂತಿಕಾರಿ ಸಂಘಟನೆಗಳು ಜನ್ಮತಾಳಿದವು. ಈ ಕ್ರಾಂತಿಕಾರಿ ಸಂಘಟನೆಗಳು ದೌರ್ಜನ್ಯ ನಡೆಸುವ ಅಧಿಕಾರಿಗಳು, ಹೋರಾಟಕ್ಕೆ ದ್ರೋಹ ಬಗೆದವರು, ಸರ್ಕಾರಿ ಮಾಹಿತಿದಾರರನ್ನು ಆಯ್ಕೆಮಾಡಿಕೊಂಡು ಹತ್ಯೆ ಮಾಡುವ ಕಾರ್ಯಾಚರಣೆಗಿಳಿದವು. ಕ್ರಾಂತಿಕಾರಿಗಳು ಶಸ್ತ್ರಾಸ್ತ್ರಗಳಿಗೆ ಮತ್ತು ಹೋರಾಟಕ್ಕೆ ಹಣ ಹೊಂದಿಸಲು ಸ್ವದೇಶಿ ಡಕಾಯಿತಿಗೆ ಇಳಿದರು. ರಾಶ್ ಬಿಹಾರಿ ಬೋಸ್, ಸಚಿನ್ ಸನ್ಯಾಲ್, ಮದನ್‌ಲಾಲ್ ಧಿಂಗ್ರಾ, ಶ್ಯಾಮ್‌ಜಿ ಕೃಷ್ಣವರ್ಮ, ಹರ್‌ದಯಾಳ್ ಮುಂತಾದವರು ಈ ಕ್ರಾಂತಿಕಾರಿ ಹೋರಾಟಗಳ ನೇತೃತ್ವ ವಹಿಸಿ ಹುತಾತ್ಮರಾದರು ಇಲ್ಲವೆ ಸೆರೆಮನೆ ವಾಸಿಗಳಾದರು. ೧೯೦೮ ರಿಂದ ೧೯೧೮ರ ಅವಧಿಯಲ್ಲಿ ೧೮೬ಕ್ಕೂ ಅಧಿಕ ಕ್ರಾಂತಿಕಾರಿಗಳು ಕೊಲ್ಲಲ್ಪಟ್ಟರು ಇಲ್ಲವೆ ಶಿಕ್ಷೆಗೆ ಗುರಿಯಾದರು.

ಹೊಸ ಹುರುಪಿನಿಂದ ಸತತವಾಗಿ ಬೆಳೆದುಬರುತ್ತಿದ್ದ ತೀವ್ರಗಾಮಿ ರಾಷ್ಟ್ರೀಯ ಹೋರಾಟಗಳನ್ನು ಬ್ರಿಟಿಷ್ ಸರ್ಕಾರ ಅತ್ಯಂತ ತೀವ್ರವಾಗಿ ಹತ್ತಿಕ್ಕುವ ಕಾರ್ಯಾಚರಣೆಗಿಳಿಯಿತು. ಇಂಡಿಯನ್ ಪೀನಲ್ ಕೋಡ್, ರಾಷ್ಟ್ರದ್ರೋಹ ಕಾಯಿದೆ, ಕ್ರಿಮಿನಲ್ ಪ್ರೊಸೀಜರ್ ಕೋಡ್ ಮುಂತಾದ ಕಾಯಿದೆಗಳನ್ನು ಬಳಕೆ ಮಾಡಿಕೊಂಡು ಪತ್ರಿಕಾ ಸ್ವಾತಂತ್ರ್ಯವನ್ನು ಹತ್ತಿಕ್ಕಲು ಮುಂದಾಯಿತು. ತೀವ್ರಗಾಮಿ ರಾಜಕೀಯ ನಾಯಕರಾಗಿದ್ದ ತಿಲಕರು ತಮ್ಮ 'ಕೇಸರಿ' ಎಂಬ ಮರಾಠಿ ಸಾಪ್ತಾಹಿಕದಲ್ಲಿ ಅನೇಕ ವಿಶ್ಲೇಷಣಾತ್ಮಕ ಲೇಖನಗಳನ್ನು ಈ ರಾಜಕೀಯ ಬೆಳವಣಿಗೆಗಳ ಬಗ್ಗೆ ಬರೆಯುವ ಮೂಲಕ ಸಾರ್ವಜನಿಕ ಅಭಿಪ್ರಾಯ ರೂಪಿಸಲು ಹಾಗೂ ಜನಜಾಗೃತಿ ಮೂಡಿಸಲು ಪ್ರಯತ್ನಿಸಿದರು. 'ದೇಶದ ದುರದೃಷ್ಟ', 'ಇವು ಶಾಶ್ವತ ಪರಿಹಾರಗಳಲ್ಲ' ಎಂಬ ಎರಡು ಲೇಖನಗಳನ್ನು ೧೨-೫-೧೯೦೮ ಮತ್ತು ೯-೬-೧೯೦೮ರಲ್ಲಿ ತಮ್ಮ 'ಕೇಸರಿ' ಪತ್ರಿಕೆಯಲ್ಲಿ ಬರೆದರು. ಉಗ್ರಗಾಮಿಗಳ ಬಾಂಬ್ ಪಕ್ಷಕ್ಕೆ ಹಾಗೂ ಅವರು ನಡೆಸುತ್ತಿದ್ದ ಭಯೋತ್ಪಾದನಾ ಚಟುವಟಿಕೆಗಳಿಗೆ ತಿಲಕರು ವಿರೋಧ ವ್ಯಕ್ತಪಡಿಸಿದರೂ ಅಂತಹ ಭಯೋತ್ಪಾದಕ ವಾತಾವರಣ ನಿರ್ಮಾಣಕ್ಕೆ ಸರ್ಕಾರವನ್ನು ಹೊಣೆಮಾಡಿದರು. ಅಧಿಕಾರಿ ವರ್ಗದ ದೌರ್ಜನ್ಯವೇ ಬಾಂಬ್ ಪಕ್ಷದ ಹುಟ್ಟಿಗೆ ಕಾರಣ, ಸಾರ್ವಜನಿಕ ಅಭಿಪ್ರಾಯಕ್ಕೆ ಯಾವುದೇ ಗೌರವ ತೋರದೆ ಬಂಗಾಳಿ ಯುವಕರ ತಾಳ್ಮೆಯನ್ನು ಪರೀಕ್ಷಿಸಲು ಪ್ರಯತ್ನಿಸುತ್ತಿರುವುದರಿಂದ ಇಂತಹ ವಾತಾವರಣವನ್ನು ಸರ್ಕಾರವೇ ನಿರ್ಮಿಸಿದೆ ಎಂಬ ಆರೋಪವನ್ನು ತಿಲಕರು ಸರ್ಕಾರದ ಮೇಲೆ ಹೊರಿಸಿದರು. ತಿಲಕರ ಈ ಲೇಖನಗಳಿಂದ ಕೆರಳಿದ ಸರ್ಕಾರ ತಿಲಕರು ಭಯೋತ್ಪಾದಕ ಕ್ರಾಂತಿಕಾರಿಗಳನ್ನು ಬೆಂಬಲಿಸುತ್ತಿದ್ದಾರೆಂದು ಆರೋಪಿಸಿ ಅವರನ್ನು ೨೪-೬-೧೯೦೮ರಂದು ಬಾಂಬೆಯಲ್ಲಿ ಬಂಧಿಸಿ ಇಂಡಿಯನ್ ಪೀನಲ್ ಕೋಡ್ ೧೨೪ ಎ ಮತ್ತು ೧೫೩ಎ ವಿಧಿಗಳನ್ವಯ ಆರೋಪಿಯನ್ನಾಗಿಸಿ ಜೆ. ದಾವರ್ ನೇತೃತ್ವದ ನ್ಯಾಯಪೀಠದಿಂದ ವಿಚಾರಣೆಯ ನಾಟಕವನ್ನಾರಂಭಿಸಿತು. ಮೊಹಮ್ಮದ್ ಆಲಿ ಜಿನ್ನಾ ತಿಲಕರಿಗೆ ಜಾಮೀನು ಕೊಡಿಸಲು ಪ್ರಯತ್ನಿಸಿ ವಿಫಲರಾದರು.

ಸರ್ಕಾರದ ಈ ದೌರ್ಜನ್ಯಪೂರಿತ ದಬ್ಬಾಳಿಕೆಯ ಕ್ರಮದ ವಿರುದ್ಧ ದೇಶಾದ್ಯಂತ ಜನಸಮೂಹಗಳು ಹರತಾಳ ಪ್ರತಿಭಟನೆ ಪ್ರದರ್ಶನಗಳನ್ನು ನಡೆಸಿ ಪತ್ರಿಕಾ ಸ್ವಾತಂತ್ರ್ಯದ ಮೇಲಿನ ಈ ಹಲ್ಲೆಯನ್ನು ಅತ್ಯುಗ್ರವಾಗಿ ಖಂಡಿಸಿದವು. ದಿನಾಂಕ ೨೯-೬-೧೯೦೮ರಂದು ನ್ಯಾಯಾಲಯದ ಹೊರ ಭಾಗದಲ್ಲಿ ನೆರೆದಿದ್ದ ತಿಲಕರ ಜನಸಾಮಾನ್ಯ ಅಭಿಮಾನಿಗಳು ಹಾಗೂ ಸಶಸ್ತ್ರ ಪೊಲೀಸರ ನಡುವೆ ತೀವ್ರಗೊಂಡ ಕಾದಾಟದ ಮೂಲಕ ಈ ಮುಷ್ಕರ ಆರಂಭಗೊಂಡಿತು. ವಿಚಾರಣೆ ಆರಂಭಗೊಂಡ ಜುಲೈ ೧೩ರಂದು ಮುಂಬೈನಲ್ಲಿ ಯುದ್ಧೋಪಾದಿಯ ಪರಿಸ್ಥಿತಿ ನಿರ್ಮಾಣಗೊಂಡಿತು. ನ್ಯಾಯಾಲಯದ ರಸ್ತೆಗಳನ್ನೆಲ್ಲಾ ಪೊಲೀಸ್ ಪಡೆಗಳು ಮುಚ್ಚಿ ಕಾರ್ಮಿಕರು ನ್ಯಾಯಾಲಯದ ಆವರಣಕ್ಕೆ ಬರುವುದನ್ನು ತಡೆಯಲು ಹರಸಾಹಸಪಟ್ಟರು. ಕಾರ್ಮಿಕರು ಈ ಅಡ್ಡಗಟ್ಟೆಗಳನ್ನೆಲ್ಲಾ ಮುರಿದು ತಮ್ಮ ಪರವಾಗಿ ಬರೆಯುತ್ತಿದ್ದ ರಾಷ್ಟ್ರೀಯ ನಾಯಕನ ಬೆಂಬಲಾರ್ಥವಾಗಿ ನಿರ್ಣಾಯಕ ಹೋರಾಟಕ್ಕಿಳಿದರು. ಈ ಮುಷ್ಕರ ವಿಚಾರಣೆಯ ಅವಧಿ ಯುದ್ದಕ್ಕೂ ನಿರಂತರವಾಗಿ ಮುಂದುವರಿಯಿತು. ತಿಲಕರ ಬಂಧನದ ದಿನದಿಂದ ಹಿಡಿದು ತೀರ್ಪಿನ ನಂತರವೂ ಸುಮಾರು ಒಂದು ತಿಂಗಳ ಕಾಲ ನಡೆದ ಧೀರೋದಾತ್ತ ಹೋರಾಟ ಇದಾಗಿತ್ತು. ''ಪತ್ರಕರ್ತನಾಗಿ ಮತ್ತು ಸಾಮಾಜಿಕ ಕಾರ್ಯಕರ್ತನಾಗಿ ಆಡಳಿತದ ಆರೋಗ್ಯಪೂರ್ಣ ಟೀಕೆ ನನ್ನ ಹಕ್ಕು ಮತ್ತು ಕರ್ತವ್ಯ. ಇದು ಪ್ರತಿಯೊಬ್ಬ ಭಾರತೀಯನ ಕರ್ತವ್ಯವೂ ಹೌದು. ಸರ್ಕಾರದ ದಬ್ಬಾಳಿಕೆಯ ನೀತಿ ಸರಿಯಲ್ಲವೆಂಬುದನ್ನು ಎಚ್ಚರಿಸಲು ನಾನು ಈ ಲೇಖನಗಳನ್ನು ಬರೆದಿದ್ದೇನೆ. ಹೆಚ್ಚುತ್ತಿರುವ ಜನತೆಯ ಆಶೋತ್ತರಗಳನ್ನು ಅಭಿವ್ಯಕ್ತಪಡಿಸಲು ಮತ್ತು ತಮ್ಮ ದುಃಖ ದುಮ್ಮಾನಗಳನ್ನು ಹೊರಹಾಕಲು ಈ ರಾಜಕೀಯ ಸ್ವಾತಂತ್ರ್ಯ ಅತ್ಯಗತ್ಯ. ಇದರ ರಕ್ಷಣೆಗಾಗಿ ನಾನು ಯಾವ ಶಿಕ್ಷೆಯನ್ನಾದರೂ ಅನುಭವಿಸಲು ಸಿದ್ಧನೆಂದು'' ಘೋಷಿಸಿಕೊಂಡು ತಮ್ಮ ಕೇಸನ್ನು ತಾವೇ ನಡೆಸಿ ಬ್ರಿಟಿಷ್ ಕಾನೂನು ಪಂಡಿತರ ವಾದಗಳನ್ನು ಅತ್ಯಂತ ಸಮರ್ಥವಾಗಿ ತಿರಸ್ಕರಿಸಿ ಅವರ ದೌರ್ಜನ್ಯಪೂರಿತ ದುರಾಡಳಿತದ ಕರಾಳ ಮುಖವನ್ನು ವಿಚಾರಣೆಯ ಸಂದರ್ಭದಲ್ಲಿ ಬಹಿರಂಗಗೊಳಿಸಿದರು. ತೀರ್ಪಿನ ನಂತರವೂ ಸ್ವಲ್ಪವೂ ಎದೆಗುಂದದೆ ತಮ್ಮನ್ನು ತಾವು ಈ ರೀತಿ ಸಮರ್ಥಿಸಿಕೊಂಡರು:

''ಈ ನ್ಯಾಯಪೀಠದ ತೀರ್ಪಿನ ಹೊರತಾಗಿಯೂ ನಾನು ನಿರಪರಾಧಿ ಎಂದೇ ಹೇಳಲು ಇಚ್ಛಿಸುತ್ತೇನೆ. ಎಲ್ಲದರ ಭವಿಷ್ಯವನ್ನಾಳುವ ಉನ್ನತ ಶಕ್ತಿಗಳಿವೆ. ನಾನು ಸ್ವತಂತ್ರನಾಗಿರುವುದಕ್ಕಿಂತ, ಶಿಕ್ಷೆ ಅನುಭವಿಸುವುದರಿಂದ ನಾನು ಪ್ರತಿನಿಧಿಸುತ್ತಿರುವ ಉದ್ದೇಶ ಹೆಚ್ಚು ಅಭಿವೃದ್ಧಿ ಹೊಂದುವುದೆಂಬುದು ಜಗದ್ರಕ್ಷಕನ ಉದ್ದೇಶವಾಗಿರಬಹುದು'' ಅಪ್ರತಿಮ ಜನನಾಯಕ ತಿಲಕರ ಈ ಹೇಳಿಕೆ ಮುಂಬೈ ಶ್ರೇಷ್ಠ ನ್ಯಾಯಾಲಯದ ಆವರಣದಲ್ಲಿ ಕೆತ್ತಲ್ಪಟ್ಟಿದೆ. ಇಂತಹ ಅತ್ಯುಗ್ರ ರಾಷ್ಟ್ರಾಭಿಮಾನಿ ಪತ್ರಕರ್ತನ ಬೆಂಬಲಾರ್ಥವಾಗಿ ಕಾರ್ಮಿಕರು ನಡೆಸಿದ ಐತಿಹಾಸಿಕ ಹೋರಾಟ ನಮ್ಮ ದೇಶೀಯ ಹಾಗೂ ಪರಕೀಯ ಇತಿಹಾಸಕಾರರ ಸಮಾನ ಅವಗಣನೆಗೆ ಗುರಿಯಾಗಿದೆ. ಆ ಅವಿಸ್ಮರಣೀಯ ಹೋರಾಟದ ಶತಮಾನೋತ್ಸವದ ಸಂದರ್ಭದಲ್ಲಾದರೂ ಅದಕ್ಕೆ ನ್ಯಾಯಯುತವಾಗಿ ಸಿಗಬೇಕಾದ ಪ್ರಾಮುಖ್ಯತೆ ಪ್ರಾಪ್ತವಾಗುವುದೇ ?

ಈ ಮುಷ್ಕರ ಕ್ರಾಂತಿಕಾರಿ ಲೆನಿನ್‌ರ ಗಮನವನ್ನು ಸೆಳೆದಿತ್ತು. ಅವರು ಈ ಮುಷ್ಕರವನ್ನು ಕುರಿತು ಬರೆಯುತ್ತಾ ''ಭಾರತದಲ್ಲಿಯೂ ಶ್ರಮಿಕ ವರ್ಗ ಪ್ರಜ್ಞಾಪೂರ್ವಕವಾಗಿ ಸಾಮೂಹಿಕ ರಾಜಕೀಯ ಕಾರ್ಯಾಚರಣೆಯನ್ನು ಮೈಗೂಡಿಸಿಕೊಂಡಿದೆ. ಪರಿಸ್ಥಿತಿ ಹೀಗಿರುವುದರಿಂದ ಝರ್ ರಷ್ಯಾ ಮಾದರಿಯ ಬ್ರಿಟಿಷ್ ಆಳ್ವಿಕೆ ಮುಳುಗಲಿದೆ.

(೫೮ನೇ ಪುಟಕ್ಕೆ)

## ಉಳಿವು

ಭೂಕಂಪವಾದರೆ
ಕುಸಿಯುತ್ತವೆ
ಕಟ್ಟಡಗಳು ;
ಉಳಿಯುತ್ತವೆ
ಗುಡಿಸಲು !

ಸಿ.ಪಿ.ಕೆ.
ಮೈಸೂರು





# ಸಮೃದ್ಧವಾದ ಫಸಲನ್ನು ಹೊತ್ತ ಗಟ್ಟಿ ಪಿಂಗಾರ 'ತುಳು ಸಾಹಿತ್ಯ ಚರಿತ್ರೆ'

**'ತುಳು ಸಾಹಿತ್ಯ ಚರಿತ್ರೆ'ಯು ತುಳುವಿನಲ್ಲಿ ಲಭ್ಯವಾಗಿರುವ ಎಲ್ಲ ಭಾಷಿಕ ಸಾಂಸ್ಕೃತಿಕ ಸಾಧನೆಗಳನ್ನು ಅಧಿಕೃತವಾಗಿ ದಾಖಲುಗೊಳಿಸಿದೆ. ಈ ಕೃತಿಯಲ್ಲಿ ತುಳುನಾಡಿನ ಇತಿಹಾಸ, ಭಾಷೆ, ಜಾನಪದ, ಸಾಹಿತ್ಯ, ಯಕ್ಷಗಾನ, ಮಾಧ್ಯಮ ಹೀಗೆ ಮುಖ್ಯವಾದ ಆರು ಒಳ ವಿಭಾಗಗಳಿದ್ದು, ಸಮಗ್ರವಾದ ದಾಖಲೆ, ವಿವರ, ವಿಶ್ಲೇಷಣೆಗಳನ್ನು ಒಳಗೊಂಡು 'ತುಳುವಿನ ವಿಶ್ವಕೋಶ'ವೆನ್ನುವಷ್ಟರಮಟ್ಟಿಗೆ ಪರಿಪೂರ್ಣವಾಗಿದೆ.**

**ಡಾ|| ಕವಿತಾ ರೈ**

**ತು**ಳು ಭಾಷೆಯಲ್ಲಿ ತೆರೆದ ಹೊಸ ಅಕ್ಷರ ಶಕೆ 'ತುಳು ಸಾಹಿತ್ಯ ಚರಿತ್ರೆ' ಎನ್ನುವ ೧೧೨೦ ಪುಟಗಳನ್ನು ಒಳಗೊಂಡ ಬೃಹತ್ ಗ್ರಂಥ. ಕರ್ನಾಟಕದ ಪಶ್ಚಿಮ ಕರಾವಳಿಯ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕಾಸರಗೋಡು ಜಿಲ್ಲೆಯ ಭೂ ಪ್ರದೇಶದಲ್ಲಿ ಪ್ರಧಾನವಾದ ಆಡುಭಾಷೆಯಾದ ತುಳು, ದ್ರಾವಿಡ ಭಾಷಾ ಕುಟುಂಬದ ಪರಂಪರೆಯಲ್ಲಿ ಅದರದ್ದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಸುಮಾರು ೨೦೦೦ ವರ್ಷಗಳ ಪ್ರಾಚೀನತೆಯನ್ನು ಹೊಂದಿರುವ ತುಳುವಿನಲ್ಲಿ ಅಗಾಧವಾದ ಜನಪದ ಸಾಹಿತ್ಯವಿದೆ. ೧೯ನೆಯ ಶತಮಾನದಲ್ಲಿ ಜರ್ಮನ್ ಮಿಶನರಿಗಳು ಆರಂಭಿಸಿದ ಮುದ್ರಣ ಮತ್ತು ಪ್ರಕಾಶನದ ಕೆಲಸ, ೨೦ನೇ ಶತಮಾನದ ಆರಂಭದಿಂದ ಕಾಣಿಸಿಕೊಂಡ ತುಳು ಭಾಷೆ - ಸಾಹಿತ್ಯದ ಕುರಿತ ಎಚ್ಚರದ ಆಸಕ್ತಿ, ಬರವಣಿಗೆಗಳ ವಿಶಿಷ್ಟತೆ, ಇದು ತುಳುವಿಗೆ ಅದರದ್ದೇ ಆದ ಸ್ವಾಯತ್ತ ಶಕ್ತಿ ಮತ್ತು ಅನನ್ಯತೆಯನ್ನು ರೂಪಿಸಿಕೊಳ್ಳಲು ಕಾರಣಗಳಾಗಿವೆ. ಮಂಗಳೂರು ವಿಶ್ವವಿದ್ಯಾನಿಲಯ, ತುಳು ಅಕಾಡೆಮಿ, ತುಳು ಕೂಟದಂತಹ ಅನೇಕ ಸಂಘ ಸಂಸ್ಥೆಗಳು, ತುಳು ಪತ್ರಿಕೆಗಳು,ತುಳು ನಾಟಕಗಳು, ತುಳು ಸಿನಿಮಾಗಳು, ತುಳು ಭಾಷೆ ಸಾಹಿತ್ಯ ಪ್ರಸರಣಕ್ಕೆ ಮಾಧ್ಯಮಗಳ ಮೂಲಕ ಹೆಚ್ಚಿನ ಸಂವಹನಶೀಲತೆಯನ್ನು ಒದಗಿಸಿಕೊಟ್ಟಿವೆ.

'ತುಳು ಸಾಹಿತ್ಯ ಚರಿತ್ರೆ'ಯು ತುಳುವಿನಲ್ಲಿ ಲಭ್ಯವಾಗಿರುವ ಎಲ್ಲ ಭಾಷಿಕ ಸಾಂಸ್ಕೃತಿಕ ಸಾಧನೆಗಳನ್ನು ಅಧಿಕೃತವಾಗಿ ದಾಖಲುಗೊಳಿಸಿದೆ. ಈ ಕೃತಿಯಲ್ಲಿ ತುಳುನಾಡಿನ ಇತಿಹಾಸ, ಭಾಷೆ, ಜಾನಪದ, ಸಾಹಿತ್ಯ, ಯಕ್ಷಗಾನ, ಮಾಧ್ಯಮ ಹೀಗೆ ಮುಖ್ಯವಾದ ಆರು ಒಳ ವಿಭಾಗಗಳಿದ್ದು, ಸಮಗ್ರವಾದ ದಾಖಲೆ, ವಿವರ, ವಿಶ್ಲೇಷಣೆಗಳನ್ನು ಒಳಗೊಂಡು 'ತುಳುವಿನ ವಿಶ್ವಕೋಶ' ವೆನ್ನುವಷ್ಟರಮಟ್ಟಿಗೆ ಪರಿಪೂರ್ಣವಾಗಿದೆ. ''ಪ್ರಾರಂಭದಲ್ಲಿ ತುಳುವಿನ ಮೌಖಿಕ ಹಾಗೂ ಅಕ್ಷರ ರೂಪದ ಸಾಹಿತ್ಯ ಚರಿತ್ರೆಗೆ ಸೀಮಿತಗೊಂಡಿದ್ದ ಈ ಯೋಜನೆ ಕಾಲದಿಂದ ಕಾಲಕ್ಕೆ ಬೆಳೆಯುತ್ತಾ ಬಂದು ತುಳು ಭಾಷೆ, ಸಾಹಿತ್ಯ, ಸಂಸ್ಕೃತಿಗೆ ಸಂಬಂಧಪಟ್ಟಂತೆ ಒಂದು ವಿಶ್ವಕೋಶದ ರೂಪವನ್ನು ಪಡೆಯಿತು. ಇದರಿಂದ ದ್ರಾವಿಡ ಭಾಷಾ ವರ್ಗದ ಮಹತ್ವದ ಭಾಷೆಯೊಂದರ ಸಮಗ್ರ ಮಾಹಿತಿಗಳು, ಅಧ್ಯಯನದ ವಿವರಗಳು ಮೊದಲ ಬಾರಿಗೆ ಅನಾವರಣಗೊಂಡವು. ಈ ಗ್ರಂಥದಲ್ಲಿ ಬಳಕೆಯಾದ ಆಕರ ಪರಿಕರಗಳು ಮುಂದಿನ ದಿನಗಳಲ್ಲಿ ದ್ರಾವಿಡ ಸಂಸ್ಕೃತಿಯ ಅಧ್ಯಯನದಲ್ಲಿ ಮಹತ್ವದ ಪಾತ್ರ ವಹಿಸಲು ಶಕ್ತವಾಗಿವೆ.'' (ಡಾ|| ಬಿ.ಎ. ವಿವೇಕ ರೈ)

ತುಳುನಾಡಿನ ಭೌಗೋಳಿಕ ಎಲ್ಲೆಕಟ್ಟುಗಳು, ತುಳುನಾಡು - ಇತಿಹಾಸವೆನ್ನುವ ಮೊದಲ ಭಾಗದಲ್ಲಿ ತುಳುನಾಡನ್ನು ಆಳಿದ ಬೈರ, ಚೌಟ, ಬಂಗ, ಅಜಿಲ ರಾಜಮನೆತನಗಳು, ಅವರ ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಇತಿಹಾಸವೇ ಅಲ್ಲದೆ ಇತಿಹಾಸದ ಬೆಳಕಿನಲ್ಲಿ ಭೂತಾರಾಧನೆಯಂಥ ಮುಖ್ಯವಾದ ೧೪ ಲೇಖನಗಳಿವೆ. ಇವು ತುಳುನಾಡಿನ ವೈಶಿಷ್ಟ್ಯಪೂರ್ಣವಾದ ರಾಜಕೀಯ ವ್ಯವಸ್ಥೆ, ಅದರ ಸಮನ್ವಯತೆಯನ್ನು ಬಿಂಬಿಸುವುದರ ಜೊತೆಗೆ ತುಳುನಾಡಿನ ಧಾರ್ಮಿಕ ಇತಿಹಾಸ, ಶಿವ, ಶಕ್ತಿ, ನಾಗದೇವತೆಗಳ ಆರಾಧನೆಯ ವಿವಿಧ ಮುಖಗಳನ್ನು ಪರಿಚಯಿಸುತ್ತವೆ. ಹಾಗೆಯೇ ಜೈನ, ಬ್ಯಾರಿ, ನಂತರದ ಕೊಂಕಣಿಗಳ ರಾಜಕೀಯ ಸಂದರ್ಭವನ್ನು ಪರಿಶೀಲಿಸುತ್ತವೆ. ಈ ಅಧ್ಯಯನವು ಸ್ಥಳೀಯ ಸಾಂಸ್ಕೃತಿಕ ಜೀವನಕ್ಕೆ ಒಂದು ಅರ್ಥವನ್ನು ಕೊಟ್ಟು ಅದರ ಅನನ್ಯತೆಯನ್ನು ಬಿಂಬಿಸುತ್ತದೆ. ''ಒಂದಾನೊಂದು ಕಾಲದಲ್ಲಿ ಏಳು ದೇಶಗಳ ಕೂಟವಾಗಿ ಭಾವಿಸಲ್ಪಟ್ಟಿದ್ದ ಪರಶುರಾಮ ಕ್ಷೇತ್ರವು ಒಮ್ಮೆ 'ಸಪ್ತಕೊಂಕಣ'ವೆಂದೂ ಇನ್ನೊಮ್ಮೆ 'ಸಪ್ತ ಕೇರಳ'ವೆಂದೂ ಮಗದೊಮ್ಮೆ 'ಏಳು ತುಳುದೇಶ'ಗಳೆಂದೂ ಗ್ರಂಥಗಳಲ್ಲಿ ಮತ್ತು ಶಾಸನಗಳಲ್ಲಿ ಏಕೆ ಹೇಳಲ್ಪಟ್ಟಿದೆಯೆಂಬುದರ ರಹಸ್ಯವನ್ನು ತಿಳಿದುಕೊಳ್ಳಲು ಈಗ ನಮಗೆ ಕಷ್ಟವಾಗಲಾರದು. ಪರಶುರಾಮ ಕ್ಷೇತ್ರವೆಲ್ಲ ಘಟ್ಟದ ಮೇಗಳ ಪೀಠಭೂಮಿಯಂತೆ ಸಪಾಟವಾಗಿರದೆ, ಏರು ತಗ್ಗಾದ ಪ್ರದೇಶವಾಗಿರುವುದರಿಂದ ಆ ಏಳು ದೇಶಗಳಿಗೆ 'ಕೊಂಕಣ' ಶಬ್ದದ ಮೂಲಾರ್ಥ ವಿವಕ್ಷೆಯಿಂದ (ಏರುತಗ್ಗು ಅಥವಾ ಪರ್ವತ ಪ್ರಾಯ) 'ಸಪ್ತಕೊಂಕಣ'ವೆಂಬ ಹೆಸರು ಅನ್ವರ್ಥವೇ ಆಗಿದೆ. ಹಾಗೆಯೇ ಪಶ್ಚಿಮ ಘಟ್ಟಗಳು ಪರಶುರಾಮ ಕ್ಷೇತ್ರದ ಒಂದು ತುದಿಯಿಂದ ಇನ್ನೊಂದು ತುದಿಯವರೆಗೂ ವ್ಯಾಪಿಸಿದ್ದು, ಅದರ ಮೂಡಲ ಮೇರೆಯೂ ಆಗಿರುವುದರಿಂದ, ಆ ಏಳು ದೇಶಗಳನ್ನು 'ಕೇರಳ' ಶಬ್ದದ ಮೂಲಾರ್ಥ ವಿವಕ್ಷೆಯಿಂದ (ಬೆಟ್ಟಗಳಿಂದ ತುಂಬಿದುದು) 'ಸಪ್ತ ಕೇರಳ'ವೆಂದು ಹೇಳುವುದು ಯುಕ್ತವೇ ಸರಿ. ತುಳು ಎಂದರೆ ಅನೂಪ - ಎಂದರೆ ಜಲಭರಿತ ಎಂದೇ ಅರ್ಥವೆಂಬುದು ನಮಗೆ ನಿಸ್ಸಂದಿಗ್ಧವಾಗಿ ತಿಳಿದುಬಂದಿದೆ.'' ತುಳು ಲಿಪಿಯ ಮೂಲ ಮತ್ತು ವಿಕಾಸ, ತುಳುವಿನ ವರ್ಣಮಾಲೆ, ದ್ರಾವಿಡ ಭಾಷಾವರ್ಗದಲ್ಲಿ ತುಳುವಿನ ಸ್ಥಾನ, ತುಳು ನಿಘಂಟು ರಚನಾ ವಿನ್ಯಾಸ, ತುಳು ಭಾಷೆಯ ಪ್ರಭೇದಗಳು, ತುಳು ಪಾಡ್ದನದ ಭಾಷೆ, ಆಧುನಿಕ ತುಳು ಭಾಷೆ, ವ್ಯಾಕರಣ ಗ್ರಂಥಗಳು, ಛಂದಸ್ಸು ಇತ್ಯಾದಿಗಳಿಗೆ ಸಂಬಂಧಿಸಿದಂತೆ ತುಳು ಭಾಷೆ ಎಂಬ ವಿಭಾಗದಲ್ಲಿ [illegible] ಲೇಖನಗಳಿವೆ

ಮೌಖಿಕ ಪರಂಪರೆ ಜಾನಪದಕ್ಕೆ ಸಂಬಂಧಿಸಿದಂತೆ ೨೮ ಲೇಖನಗಳಲ್ಲಿ ಭೂತಾರಾಧನೆ ಮತ್ತು ಅದರ

**ತುಳುನಾಡಿನ ಭೌಗೋಳಿಕ ಎಲ್ಲೆಕಟ್ಟುಗಳು, ತುಳುನಾಡು - ಇತಿಹಾಸವೆನ್ನುವ ಮೊದಲ ಭಾಗದಲ್ಲಿ ತುಳುನಾಡನ್ನು ಆಳಿದ ಭೈರ, ಚೌಟ, ಬಂಗ, ಅಜಿಲ ರಾಜಮನೆತನಗಳು, ಅವರ ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಇತಿಹಾಸವೇ ಅಲ್ಲದೆ ಇತಿಹಾಸದ ಬೆಳಕಿನಲ್ಲಿ ಭೂತಾರಾಧನೆಯಂಥ ಮುಖ್ಯವಾದ ೧೪ ಲೇಖನಗಳಿವೆ. ಇವು ತುಳುನಾಡಿನ ವೈಶಿಷ್ಟ್ಯಪೂರ್ಣವಾದ ರಾಜಕೀಯ ವ್ಯವಸ್ಥೆ, ಅದರ ಸಮನ್ವಯತೆಯನ್ನು ಬಿಂಬಿಸುವುದರ ಜೊತೆಗೆ ತುಳುನಾಡಿನ ಧಾರ್ಮಿಕ ಇತಿಹಾಸ, ಶಿವ, ಶಕ್ತಿ, ನಾಗದೇವತೆಗಳ ಆರಾಧನೆಯ ವಿವಿಧ ಮುಖಗಳನ್ನು ಪರಿಚಯಿಸುತ್ತವೆ.**

ಸ್ವರೂಪ, ಆಯಾ ದೈವಗಳ ನೇಮ, ಕೋಲ, ಆಯನ, ಬಂಡಿ, ಮೆಚ್ಚಿ, ಮೈಮೆ, ಧರ್ಮ ನೇಮ – ಇತ್ಯಾದಿ ಉತ್ಸವಾಚರಣೆಗಳ ನಿರ್ದಿಷ್ಟ ಸಂದರ್ಭಗಳಲ್ಲಿ ಹಾಡುವ ಕ್ರಮಗಳ ಕುರಿತ ಜಿಜ್ಞಾಸೆ, ಮೌಖಿಕ ಸಾಹಿತ್ಯದಲ್ಲಿ ತುಳುನಾಡಿನ ನಂಬಿಕೆ, ನಡವಳಿಕೆ, ಆಚಾರ, ವಿಚಾರ, ಕಟ್ಟುಕಟ್ಟಳೆ, ಅಭಿವ್ಯಕ್ತಗೊಂಡ ವಿಧಿ ನಿಷೇಧ, ಆರಾಧನೆ, ಆಚರಣೆ, ಯುದ್ಧ, ಕ್ರೀಡೆ, ಬೇಟೆ, ಆರ್ಥಿಕ, ರಾಜಕೀಯ, ನ್ಯಾಯವ್ಯವಸ್ಥೆ, ಬಂಧುತ್ವ ವ್ಯವಸ್ಥೆ, ಹೆಣ್ಣು - ಗಂಡಿನ ಸಂಬಂಧ ಸಂಘರ್ಷಗಳನ್ನು, ತುಳುವ ಸಂಸ್ಕೃತಿಯ ಅಧ್ಯಯನ ಹಾಗೂ ಮರುರಚನೆಯಲ್ಲಿ ದೊರೆತ ಎಲ್ಲ ಮೌಖಿಕ ಆಕರಗಳ ವಿಶ್ಲೇಷಣೆಯು ಗಮನಾರ್ಹವಾದುದಾಗಿದೆ.

ತುಳು ಸಾಹಿತ್ಯಕ್ಕೆ ಸಂಬಂಧಪಟ್ಟ ಹದಿನೈದು ಲೇಖನಗಳು ಲಿಖಿತವಾಗಿ ದಾಖಲಾದ ಕವಿತೆ, ಸಣ್ಣ ಕತೆಗಳು, ಕಾದಂಬರಿಗಳು, ಮುದ್ರಿತ ತುಳು ನಾಟಕಗಳು, ಜೀವನ · ಚರಿತ್ರೆ, ಪ್ರವಾಸ ಸಾಹಿತ್ಯ ಮುಂತಾದವುಗಳ ಸಮಗ್ರ ಒಳನೋಟಗಳನ್ನು ವಿಶ್ಲೇಷಿಸಿವೆ. ತುಳು ಭಾಷೆಯಲ್ಲಿ ರಚನೆಗೊಂಡ ವೈವಿಧ್ಯಮಯ ಸಾಹಿತ್ಯದ ಸಮಗ್ರಜಿಜ್ಞಾಸೆ ಇದಾಗಿದೆ. ತುಳು ಭಾಷೆಯಲ್ಲಿ ವಿಸ್ತೃತವಾದ ಗದ್ಯಕಥನ ಆರಂಭವಾಗುವುದು ೧೯೩೫ರಲ್ಲಿ ಎನ್. ಎ. ಶೀನಪ್ಪ ಹೆಗ್ಗಡೆಯವರ 'ಮಿತ್ಯ ನಾರಾಯಣ ಕತೆ'ಯ ಮೂಲಕ. ಇದಕ್ಕಿಂತ ಪೂರ್ವದಲ್ಲಿ ೧೯೨೯ರಿಂದ ೧೯೩೬ರ ಅವಧಿಯಲ್ಲಿ ಎಸ್. ಯು. ಪಣಿಯಾಡಿಯವರ ನೇತೃತ್ವದಲ್ಲಿ ತುಳು ಬರವಣಿಗೆಯ ಸಾಂಸ್ಥಿಕ ಅವತಾರವನ್ನು ಗುರುತಿಸಲಾಗುತ್ತದೆ. 'ತುಳುವ' ಸಾಹಿತ್ಯ ಮಾಲೆಯು ಇದಕ್ಕೆ ಪುರಾವೆಗಳನ್ನು ಒದಗಿಸುತ್ತದೆ. ಆಕಸ್ಮಿಕವಾಗಿ ಕನ್ನಡ ಲಿಪಿಯನ್ನು ಸ್ವೀಕರಿಸಿಕೊಳ್ಳುವ ಅನಿವಾರ್ಯಕ್ಕೆ ಒಳಗಾದ ಭಾಷೆ ತುಳು. ೧೯೩೫ರಲ್ಲಿ 'ಮಿತ್ಯನಾರಾಯಣ ಕತೆ'ಯ ಮೂಲಕ ಅಭಿವ್ಯಕ್ತಿಯ ವ್ಯಾಪ್ತಿಯಲ್ಲಿ ವಿಸ್ತಾರವಾದ ಕಥನ ದಾಖಲಾಗುತ್ತದೆ. ಪದ್ಯಾತ್ಮಕ ಅಭಿವ್ಯಕ್ತಿ ಈ ಪೂರ್ವದಲ್ಲಿಯೇ ಶಕ್ತವಾಗಿ ಸಾಧಿತವಾಗಿರುವುದು ಉಲ್ಲೇಖಾರ್ಹ.

ಯಕ್ಷಗಾನ ಕಲೆಯಲ್ಲಿ ಈವರೆಗೆ ಲಭ್ಯವಾದ ತುಳು ಪ್ರಸಂಗ ಪಠ್ಯಗಳು, ತುಳುವಿನ ಯಕ್ಷಗಾನ ಕವಿಗಳು, ಯಕ್ಷಗಾನದ ಆಧುನಿಕ ಪ್ರಸಂಗಗಳು ಮತ್ತು ರಂಗ ಪ್ರಯೋಗಗಳ ಕುರಿತ ನಾಲ್ಕು ಲೇಖನಗಳು, ಮಾಧ್ಯಮಗಳಲ್ಲಿ ತುಳುವಿನ ಐದು ಲೇಖನಗಳು ಅಧ್ಯಯನಶೀಲವೂ, ಕುತೂಹಲಪೂರ್ಣವೂ ಆಗಿವೆ. ತುಳು ಸಾಂಸ್ಥಿಕ ನೆಲೆಗಳು ಮತ್ತು ವಿವರಣಾತ್ಮಕ ಆಕರಸೂಚಿ ಈ ಗ್ರಂಥದ ಕೊನೆಯ ಮುಖ್ಯ ಭಾಗವಾಗಿದೆ.

ಭೂತಾರಾಧನೆ, ನಾಗಾರಾಧನೆ, ಮಾತೃಮೂಲೀಯ ಕುಟುಂಬ ವ್ಯವಸ್ಥೆಯನ್ನು ಹುಟ್ಟುಹಾಕಿದ ಸಂಸ್ಕೃತಿ – ಇವು ಕರ್ನಾಟಕ ಸಂಸ್ಕೃತಿಯ ಅಧ್ಯಯನಕ್ಕೆ ಪೂರಕವಾಗಿರುವ ಸಮೃದ್ಧವಾದ ಆಕರಗಳಾಗಿವೆ. ಸಿಕ್ಕ ಎಲ್ಲಾ ಆಕರಗಳನ್ನು ಕೇಂದ್ರೀಯ ನೆಲೆಯಲ್ಲಿ ಕಲೆಹಾಕಿ ತುಳು ಸಾಹಿತ್ಯ ಚರಿತ್ರೆಯನ್ನು ರೂಪಿಸಿದ ಪರಿಶ್ರಮದ ಹಿಂದೆ ನಿರ್ದಿಷ್ಟವಾದ ಉದ್ದೇಶವಿದೆ. ತುಳು ಭಾಷೆ-ಇತಿಹಾಸ ಸಂಸ್ಕೃತಿಯ ಸತ್ವ ಹಾಗೂ ಅನನ್ಯತೆಯನ್ನು ತುಳುವೇತರರಿಗೆ ಪರಿಚಯಿಸುವಲ್ಲಿ ಈ ಗ್ರಂಥ ಸಫಲವಾಗಿದೆ. ಆಡಳಿತದ ಹಾಗೂ ಶ್ರೇಣೀಕೃತ ಭಾಷಿಕ ವಲಯಗಳಲ್ಲಿ ನೆಲೆಯಿಲ್ಲದ ತುಳು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾದರೆ 'ತುಳು ಸಾಹಿತ್ಯ ಚರಿತ್ರೆ'ಯಂಥ ಗ್ರಂಥಗಳು ಅನಿವಾರ್ಯವಾಗಿ ಬರಬೇಕಾಗುತ್ತದೆ. ಪರಿಶ್ರಮಪೂರ್ವಕವಾಗಿ ಹೊರತಂದ ತುಳು ಸಾಹಿತ್ಯ ಚರಿತ್ರೆಯನ್ನು ಒಟ್ಟು ೯೫ ಜನ ಲೇಖಕರು ೧೦೧ ಲೇಖನಗಳನ್ನು ಬರೆದು ಒಟ್ಟಂದದಲ್ಲಿ ಒಪ್ಪಿಸಿದ್ದಾರೆ. ಪ್ರಧಾನ ಸಂಪಾದಕರಾದ ಡಾ|| ಬಿ. ಎ. ವಿವೇಕ ರೈ, ಸಂಪಾದಕರಾದ ಪ್ರೊ|| ಎ. ವಿ.ನಾವಡ ಮತ್ತು ಡಾ|| ವಾಮನ ನಂದಾವರ ಅವರ ಶ್ರಮ ಇಲ್ಲಿ ಎದ್ದು ಕಾಣುತ್ತದೆ. ದ್ರಾವಿಡ ಭಾಷಾ ವರ್ಗದ ಮಹತ್ವದ ಭಾಷೆಯೊಂದರ ಸಮಗ್ರ ಮಾಹಿತಿಗಳು, ಅಧ್ಯಯನದ ವಿವರಗಳು ಮೊದಲ ಬಾರಿಗೆ ಬೃಹತ್ ಪ್ರಮಾಣದಲ್ಲಿ ಅನಾವರಣಗೊಳಿಸಿದ ಕನ್ನಡ ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಕಾರ್ಯ ಅಭಿನಂದನಾರ್ಹವಾಗಿದೆ.

**ಡಾ|| ಕವಿತಾ ರೈ**
'ಅರ್ಕಾ', ಶಾರದನಗರ, ಮಡೂರು, ಕೋಟೆಕಾರು ಅಂಚೆ
ಮಂಗಳೂರು - ೫೭೫೦೨೨

---

**ಮರೆಯಲಾರದ ಕಾರ್ಮಿಕ ಮುಷ್ಕರದ ನೆನಪಿನಲ್ಲಿ** *(೫೬ನೇ ಪುಟದಿಂದ)*

ಜನಸಮೂಹ ತಮ್ಮ ಪರವಾಗಿರುವ ಬರಹಗಾರರು ಮತ್ತು ರಾಜಕೀಯ ಮುಖಂಡರ ಪರವಾಗಿ ಎದ್ದು ನಿಲ್ಲಲು ಆರಂಭಿಸಿದ್ದಾರೆ. ಮುಂಬೈನ ಕಾರ್ಮಿಕರ ಸಾಮೂಹಿಕ ಪ್ರತಿಭಟನೆ ಅವರ ರಾಜಕೀಯ ಶಿಕ್ಷಣದ ಮಹತ್ವಪೂರ್ಣ ಘಟನೆ. ನಗರದ ಬಡವರು ಮತ್ತು ಪುಟ್ಟ ಬಂಡವಾಳ ಗಾರರು ಈ ಕಾರ್ಮಿಕರ ಹೋರಾಟವನ್ನು ಬೆಂಬಲಿಸಿ ಅದನ್ನು ಕ್ರಾಂತಿಕಾರಿ ಹೋರಾಟವನ್ನಾಗಿಸಿದ್ದಾರೆ'' ಎಂದು ವಿವರಿಸಿದ್ದಾರೆ. ಬ್ರಿಟಿಷರ ಆಳ್ವಿಕೆ ಹೇರಿದ ಅಲ್ಪ ಒತ್ತಡಕ್ಕೆ ಹೆದರಿ ಇಂತಹ ಕ್ರಾಂತಿಕಾರಿ ಹೋರಾಟವನ್ನು ಬಂಡವಾಳ ಶಾಹಿಗಳಾಗಿದ್ದ ಮಿಲ್ ಮಾಲೀಕರು ವಿರೋಧಿಸಿ ಸಾಮ್ರಾಜ್ಯ ಶಾಹಿಗಳ ಬೆಂಬಲವಾಗಿ ನಿಂತು ತಮ್ಮ ನಿಷ್ಠೆಯನ್ನು ಪ್ರದರ್ಶಿಸಿದ್ದು ಅವರ ವರ್ಗ ಗುಣದ ಗುಲಾಮತನದ ಸಂಕೇತವಾಗಿದ್ದು ಇದರ ಮತ್ತೊಂದು ಮುಖ್ಯ ಅಂಶ. ಕಾರ್ಮಿಕರು ವಸಾಹತುಶಾಹಿ ಆಳ್ವಿಕೆ ಹಾಗೂ ತಮ್ಮ ಮಾಲೀಕರು ನಡೆಸುತ್ತಿದ್ದ ಶೋಷಣೆಯ ಫಲವಾಗಿ ಅತ್ಯಂತ ಹೀನಾಯವಾಗಿ ಬದುಕುತ್ತಿದ್ದರು. ಹಾಗಾಗಿ ಅವರು ಇಂತಹ ಆಳ್ವಿಕೆಯ ವಿರುದ್ಧ ಅತ್ಯಂತ ಸಹಜವಾಗಿ ಸಿಡಿದೆದ್ದರು. ಶೇಕಡ ೨೦ ರಷ್ಟಿದ್ದ ಮುಸ್ಲಿಂ ಕಾರ್ಮಿಕರು ಈ ಮುಷ್ಕರದಲ್ಲಿ ಪಾಲ್ಗೊಂಡರು. ಹಿಂದೂ ಮತ್ತು ಮುಸ್ಲಿಂ ಅಂಗಡಿಗಳ ಮಾಲೀಕರು ಮುಷ್ಕರಕ್ಕೆ ಸಹಾನುಭೂತಿ ತೋರಿಸಿ ಬಾಗಿಲು ಮುಚ್ಚಿ ತಮ್ಮ ಬೆಂಬಲ ವ್ಯಕ್ತಪಡಿಸಿದರು. ಸಾಮ್ರಾಜ್ಯಶಾಹಿಗಳೊಂದಿಗೆ ವ್ಯವಹರಿಸುವಾಗ ಕಾಂಗ್ರೆಸ್ ಪ್ರದರ್ಶಿಸುತ್ತಿದ್ದ ಅಧೈರ್ಯ ಹಾಗೂ ರಾಜೀಕಬೂಲಿ ನೀತಿಗೆ ಅತ್ಯಂತ ವಿರುದ್ಧವಾದ ಕ್ರಾಂತಿಕಾರಿ ಮನೋಭಾವವನ್ನು ಕಾರ್ಮಿಕ ವರ್ಗ ಪ್ರದರ್ಶಿಸಿದ್ದು ಅದರ ಸಹಜವಾದ ಕ್ರಾಂತಿಕಾರಿ ಮನೋಭಾವದ ದ್ಯೋತಕವಾಗಿದೆ. ಇಷ್ಟೆಲ್ಲಾ ಇದ್ದರೂ ಈ ಹೋರಾಟದ ನೇತೃತ್ವದಲ್ಲಿದ್ದ ಉಗ್ರಗಾಮಿ ರಾಷ್ಟ್ರನಾಯಕರು ಈ ಸಂದರ್ಭದಲ್ಲಿ ನಡೆಸುತ್ತಿದ್ದ ರಾಜಕೀಯ ಪ್ರಚಾರ ಕಾರ್ಮಿಕರ ವರ್ಗಪ್ರಜ್ಞೆಯನ್ನು ಹೆಚ್ಚಿಸುವುದಕ್ಕಿಂತಲೂ ಅಧಿಕವಾಗಿ ಅವರ ಧಾರ್ಮಿಕ ಮತ್ತು ಜಾತಿಯ ಪ್ರಜ್ಞೆಗಳನ್ನು ಉದ್ದೀಪನಗೊಳಿಸುವ ಸ್ವರೂಪದಲ್ಲಿದ್ದವು. ಕಾರ್ಮಿಕ ವಸತಿಗಳಲ್ಲಿ ಅಂಟಿಸಲಾಗಿದ್ದ ಪೋಸ್ಟರ್‌ಗಳಲ್ಲಿ ಮುಷ್ಕರದಲ್ಲಿ ಭಾಗವಹಿಸದೆ ಕೆಲಸಕ್ಕೆ ಹೋಗುತ್ತಿದ್ದ ಕಾರ್ಮಿಕರನ್ನು ಕಸಗುಡಿಸುವವನಿಗೆ ಇಲ್ಲವೆ ಕೆಂಗೋತಿಗಳಿಗೆ ಹುಟ್ಟಿದವರೆಂದು, ಕೆಲಸ ಮುಂದುವರಿಸಿರುವವರಿಗೆ ಗೋಹತ್ಯೆ ಪಾಪ ತಟ್ಟುತ್ತದೆಂದು ಹೀಗಳೆದು ಹೆದರಿಸಲಾಗಿತ್ತೆಂದು ಟೈಮ್ಸ್ ಆಫ್ ಇಂಡಿಯಾ ಪತ್ರಿಕೆ ವರದಿ ಮಾಡಿತ್ತು. ಅದರಲ್ಲೂ ವಿಶೇಷವಾಗಿ ರಾಜಕೀಯ ಸಿದ್ಧಾಂತದ ಗೈರುಹಾಜರಿ ಹಾಗೂ ತಮ್ಮದೇ ಆದ ರಾಜಕೀಯ ಪಕ್ಷವಿಲ್ಲದಿದ್ದರೂ ಸಾಮ್ರಾಜ್ಯಶಾಹಿ ವಿರೋಧಿ ಸಾಮೂಹಿಕ ಹೋರಾಟದ ಮುಂಚೂಣಿಯಲ್ಲಿ ನಿಂತು ಹೋರಾಡುವ ಮೂಲಕ ಮುಂಬರುವ ರಾಷ್ಟ್ರೀಯ ಹೋರಾಟಕ್ಕೆ ನಾಂದಿ ರೂಪದ ಹೋರಾಟ ಇದಾಗಿತ್ತು. ಇಂತಹ ಹೋರಾಟ ಇಂದಿಗೂ ನಮ್ಮ ಕಾರ್ಮಿಕ ವರ್ಗಕ್ಕೆ ಚಿರಂತನ ಸ್ಫೂರ್ತಿ ನೀಡಬಲ್ಲದು.

**ಸಿ. ಯತಿರಾಜು**
ಪ್ರಾಚಾರ್ಯರು, ಕಾಳಿದಾಸ ಪದವಿ ಪೂರ್ವ ಕಾಲೇಜು, ಶಿರಾ ಗೇಟ್.
ತುಮಕೂರು - ೫೭೨ ೧೦೬

# ಲಿಪಿಗೆ ಭಾಷೆಯನ್ನು ಹೊಂದಿಸುವುದಕ್ಕಿಂತ ಭಾಷೆಗೆ ಲಿಪಿಯನ್ನು ಹೊಂದಿಸುವುದೇ ಸರಿ

ಜಿ. ವೀರಭದ್ರಗೌಡ

ಜನವರಿ ತಿಂಗಳ 'ಹೊಸತು' ಪತ್ರಿಕೆಯ ವಿಶೇಷ ಸಂಚಿಕೆಯಲ್ಲಿ ಪ್ರಕಟಗೊಂಡ ರಾಮಲಿಂಗಪ್ಪ ಟಿ. ಬೇಗೂರು ಅವರ ''ವೀಚಿ ಕಾವ್ಯ: ಕೆಲವು ನೋಟಗಳು'' ಎಂಬ ಲೇಖನದ ಅಂತ್ಯದಲ್ಲಿ ಸೂಚನೆಯೊಂದನ್ನು ಪ್ರಕಟಿಸಿ, ಚರ್ಚೆಗೆ ವಿನಂತಿಸಲಾಗಿದೆ: ''ಡಾ|| ಡಿ. ಎನ್. ಶಂಕರ ಭಟ್ಟರ ಹೊಸ ಬರಹದಂತೆ ಈ ಲೇಖನವನ್ನು ಬರೆಯಲಾಗಿದೆ; ಕನ್ನಡವನ್ನು ಮಾತಾಡುವಂತೆಯೇ ಬರೆಯಬೇಕು ಮತ್ತು ಬರೆಯುವ ರೀತಿ - ಉಚ್ಚಾರ ರೀತಿ ಒಂದೇ ಆಗಿರಬೇಕು ಎಂಬುದು ಈ ಬರವಣಿಗೆಯ ಹಿಂದಿನ ಮುಖ್ಯ ಉದ್ದೇಶ''ವು ಲೇಖಕರದಾಗಿದೆ. ''ಈ ರೀತಿಯ ಕನ್ನಡ ಲಿಪಿ ನಮಗೆ ಆಗತ್ಯವೇ ಎಂಬುದನ್ನು ಹೊಸತು ಓದುಗರು ಚರ್ಚಿಸಬೇಕು'' ಎಂಬ ವಿನಂತಿ ಸಂಪಾದಕರದಾಗಿತ್ತು. ಸಂಪಾದಕರು ನೀಡಿರುವ ಅವಕಾಶದಂತೆ ಪ್ರಸ್ತುತ ಬರಹವು ''ಅಗತ್ಯ''ವೆಂಬಂತೆ ಅಥವಾ ವಿಷಯದ ಪರವಾಗಿ ಕೆಲವು ಸಂಗತಿಗಳನ್ನು ಮಂಡಿಸುತ್ತದೆ.

ಭಾಷೆಗೆ ಲಿಪಿ ಯಾಕೆ ಬೇಕು ? ಎಂಥ ಲಿಪಿ ಬೇಕು ? ಈ ಪ್ರಶ್ನೆಯನ್ನು ಗಂಭೀರವಾಗಿ ಎತ್ತಿಕೊಂಡಾಗ, ದೊರೆಯುವ ಸಮಾಧಾನ: ಭಾಷೆಯೆಂಬುದು ''ಭಾಷಿಕನೊಬ್ಬನು ತನ್ನ ಅನಿಸಿಕೆಗಳನ್ನು ಅದೇ ಭಾಷೆಯ ಇತರರಿಗೆ ತಿಳಿಸಲು ಅನುಕೂಲಕರವಾದ ಆಯ್ದ ಮೌಖಿಕ ಧ್ವನಿ (ಉಚ್ಚಾರ) ಸಂಕೇತಗಳ ಒಂದು ವ್ಯವಸ್ಥೆ''. ಇಂಥ ವ್ಯವಸ್ಥೆ, ಭಾಷಿಕರು ಮುಖಾಮುಖಿಯಾಗಿರುವಾಗ, ಅನಿಸಿಕೆಗಳ ವಿನಿಮಯಕ್ಕೆ ಸಮರ್ಥವಾದ ಸಾಧನವಾಗಿರುತ್ತದೆ. ಇಂಥ ಸಾಧನದ ಅಥವಾ ಭಾಷೆಯ ಮೌಖಿಕ ವ್ಯವಸ್ಥೆಯ ಪ್ರತಿಬಿಂಬವಾಗಿ, ಭಾಷಿಕರು ಮುಖಾಮುಖಿ ಯಾಗಿರದ ಅಥವಾ ಅನೇಕ ಸಂದರ್ಭದಲ್ಲಿ ವಿನಿಮಯಕ್ಕೆ ಬಳಸಿಕೊಳ್ಳುವ ವ್ಯವಸ್ಥಿತ ಸಾಧನಗಳಲ್ಲಿ ಭಾಷಾ ಲಿಪಿ (ಭಾಷಾ ಚಾಕ್ಷುಷ ವ್ಯವಸ್ಥೆ) ಒಂದಾಗಿರುತ್ತದೆ.

ಭಾಷೆ ಒಂದು ವ್ಯವಸ್ಥೆಯೆಂಬ ಲಕ್ಷಣವು ಕೆಲ ರೀತಿಯಲ್ಲಿ ತೋರುವುದರಿಂದಲೇ ಭಾಷಾ ಅವಸ್ಥೆಗಳು ನಿರ್ಮಾಣವಾಗುತ್ತವೆ.

ಭಾಷಾ ಅವಸ್ಥೆಯೆಂಬುದು ಯಾವುದೆ ಭಾಷೆಯು ಕೆಲ ಹೊಸ ರಚನೆಗಳನ್ನು ರೂಢಿಸಿಕೊಳ್ಳುವ ಹಾಗೂ ಇದ್ದ ಕೆಲ ರಚನೆಗಳನ್ನು ಕಳೆದುಕೊಳ್ಳುವುದರಿಂದ ನಿರ್ಮಾಣವಾಗುತ್ತದೆ. ಭಾಷೆ ಬದಲಾದಂತೆ ಅಥವಾ ಅವಸ್ಥೆಗೆ ತಕ್ಕಂತೆ ಅದರ ಲಿಪಿಯಲ್ಲಿ ಬದಲಾವಣೆ ಮಾಡಿಕೊಳ್ಳುವುದು ಅಗತ್ಯ. ಹಾಗಿರದಿದ್ದಲ್ಲಿ ಬಳಸಿದ ಲಿಪಿ ಆಯಾ ಭಾಷೆಯ ಆಯಾ ಅವಸ್ಥೆಯದೆನಿಸದೆ ಬೇರೆ ಅವಸ್ಥೆಯದೆನಿಸುವುದು ಸಹಜ.

ಪ್ರಸ್ತುತ ಮಾತನಾಡುವ ಕನ್ನಡ ಹಾಗೂ ಬರಹ ಕನ್ನಡದ ಓದುವ ಸಂದರ್ಭವನ್ನು ಅವಲೋಕಿಸಿದಾಗ, ಕನ್ನಡ ಭಾಷಾ ಬರಹದಲ್ಲಿಯ ಮಹಾಪ್ರಾಣಗಳು, ಅವರ್ಗದ ಷ, ಃ (ವಿಸರ್ಗ) ಲಿಪಿ ಸಂಕೇತಗಳ ನಿರ್ದಿಷ್ಟ ಉಚ್ಚಾರಣೆಯನ್ನು, ಬಹುಸಂಖ್ಯಾ ಕನ್ನಡಿಗರು ಉಚ್ಚರಿಸುತ್ತಿಲ್ಲ. ಈ ಲಿಪಿಯುಕ್ತ ಎಲ್ಲಾ ರೂಪಗಳ ಉಚ್ಚಾರಣೆಯನ್ನು ಗಮನಿಸಿದಾಗ ಮಹಾಪ್ರಾಣಯುಕ್ತ ರೂಪಗಳು ಅಲ್ಪಪ್ರಾಣವಾಗಿ, ಷಕಾರಯುಕ್ತ ರೂಪಗಳು ಶಕಾರವಾಗಿ, ಃ (ವಿಸರ್ಗ) ಯುಕ್ತ ರೂಪಗಳು ಪದಮಧ್ಯದಲ್ಲಿ ನಂತರದ ವ್ಯಂಜನದೊಂದಿಗೆ ಸಜಾತಿದ್ವಿತ್ವವಾಗಿ, ಪದಾಂತ್ಯದಲ್ಲಿ ವಿರಳವಾಗಿ ಹಕಾರದೊಂದಿಗೆ, ಇನ್ನು ಕೆಲ ಸಂದರ್ಭಗಳಲ್ಲಿ ಲೋಪವಾಗಿಸಿಕೊಂಡಿದೆ. ಈ ಸಂಕೇತಗಳು ಮೂಲ ಉಚ್ಚಾರಣೆಯಂತಿರದೆ ಭಿನ್ನವಾಗಿ ಉಚ್ಚಾರಣೆಗೊಳ್ಳುವವು. ಇನ್ನು ೯(ಅರ್ಕಾವತ್ತು) ಇದು ಅನೇಕ ಸಂಕೇತ ಅಥವಾ ಎರಡನೆಯ ದರ್ಜೆಯ ಲಿಪಿಯಾಗಿದ್ದು ಉಚ್ಚಾರಣೆಯು ಯಥಾವತ್ತಾಗಿದ್ದು ಬರೆಯುವ ರೀತಿ ಮಾತ್ರ ಅವ್ಯವಸ್ಥಿತವಾಗಿದೆ, ಅವೈಜ್ಞಾನಿಕವಾಗಿದೆ.

ಕನ್ನಡ ಲಿಪಿಯಲ್ಲಿರುವ ಮಹಾಪ್ರಾಣ ಸಂಕೇತಗಳು ಮೂಲತಃ ಕನ್ನಡ ರೂಪಗಳನ್ನು ಬರೆಯಲು ಅಗತ್ಯವಾದ ಲಿಪಿ ಸಂಕೇತಗಳಲ್ಲ. ಕನ್ನಡದಲ್ಲಿ ಸಂಸ್ಕೃತದಿಂದ ನೇರ ಸ್ವೀಕರಣ ಅಥವಾ ತತ್ಸಮ ರೂಪಗಳನ್ನು ಬರೆಯಲು ಬಳಿಸಿದ ಸಂಕೇತಗಳು. ಇಂದಿನ ಬಹುಮಟ್ಟಿನ ಭಾಷಿಕರ ಕನ್ನಡ ಉಚ್ಚಾರಣೆಯಲ್ಲಿ, ಮಹಾಪ್ರಾಣ ಹಾಗೂ ಅಲ್ಪಪ್ರಾಣ ವ್ಯತ್ಯಾಸ ಕಂಡುಬರುವುದಿಲ್ಲ. ಕಾರಣ ಉಚ್ಚರಿಸದ ಸಂಕೇತಗಳನ್ನು ಕೈಬಿಡುವುದು ಸೂಕ್ತವಾದದ್ದು. ಇಲ್ಲವಾದರೆ ವರ್ಗೀಕೃತ ಪ್ರತಿ ಉಚ್ಚಾರಣೆಗೆ ಎರಡು ಸಂಕೇತಗಳನ್ನು ಇಟ್ಟುಕೊಂಡಂತಾಗುತ್ತದೆ. ಒಂದೇ ಧ್ವನಿಗೆ ಎರಡು ಲಿಪಿ ಸಂಕೇತಗಳು ಗೊಂದಲಕ್ಕೆ ಎಡೆಮಾಡಿ ಕೊಡುತ್ತವೆ. ಈ ಪ್ರಮಾಣದಿಂದ ಇಂದಿನ ಕನ್ನಡದಲ್ಲಿ ಸಂಸ್ಕೃತದ ಸಂಬಂಧ ಎಂಬ ರೂಪವನ್ನು ಕೆಲವರು ಸಂಭಂದವೆಂದು ಇನ್ನು ಕೆಲವರು ಸಂಬಂಧವೆಂದು, ಮತ್ತೆ ಕೆಲವರು ಸಂಭಂಧವೆಂದೂ ಬರೆಯುವಂತಾಗಿದೆ. ಮಹಾಪ್ರಾಣ ಬಿಡುವುದರಿಂದ ಇಂಥ ಸಮಸ್ಯೆಯನ್ನು ನಿವಾರಿಸಿಕೊಳ್ಳಬಹುದು. ಭಾಷೆ ಒಂದೇ ಧ್ವನಿರೂಪಕ್ಕೆ ಒಂದಕ್ಕಿಂತ ಹೆಚ್ಚು ಅರ್ಥವಿರುವ ವ್ಯವಸ್ಥೆಯನ್ನು ಅದರ ರೂಪಾರ್ಥ ಲಕ್ಷಣವಾಗಿಸಿಕೊಂಡಿದೆ. ಉದಾಹರಣೆಗೆ. ರಾಮ ಮರವನ್ನು ಕಡಿದನು, ಅಜ್ಜಿ ಮರದಲ್ಲಿ ಕಾಳು ತುಂಬಿದಳು. ಈ ಎರಡು ವಾಕ್ಯಗಳಲ್ಲಿ ಮರ ಎಂಬ ರೂಪ ಎರಡು ಅರ್ಥಗಳನ್ನು ಹೊಂದಿದೆ. ಹಾಗೆಯೇ ಮಹಾಪ್ರಾಣ ಸಂಕೇತಗಳ ರೂಪಗಳನ್ನು ಅಲ್ಪಪ್ರಾಣದೊಂದಿಗೆ ಬಳಸುವುದರಿಂದ ಸಾಂದರ್ಭಿಕ ಅರ್ಥಗಳನ್ನು ಗ್ರಹಿಸುವ ರೂಢಿ ಬೆಳೆಯುತ್ತದೆ. ಆಗ ಗೊಂದಲವಾಗಲಿಕ್ಕಿಲ್ಲ. ಇದನ್ನು ಒಂದು ರೀತಿಯಲ್ಲಿ ಉಚ್ಚಾರಣಾ ಪಲ್ಲಟ/ಧ್ವನಿ ಪಲ್ಲಟ ಎನ್ನಬಹುದೋನೋ. ಇಂಥ ಪ್ರಕ್ರಿಯೆ ಯಾರು ತಡೆದರೂ ನಿಲುವಂಥದಲ್ಲ. ಕಾರಣ ಉಚ್ಚರಿಸದ ಸಂಕೇತಗಳನ್ನು ಕೈಬಿಡುವುದು ಒಳಿತು.

ಭಾಷೆಗಳಿಗಿದ್ದರೆ, ಇನ್ನು ಕೆಲ ಭಾಷೆಗಳು ಒಂದು ಮೌಖಿಕ, ಮತ್ತೊಂದು ಲಿಪಿಯೆಂಬ ಉಭಯ ವ್ಯವಸ್ಥೆಯನ್ನು ಹೊಂದಿರುತ್ತವೆ. ಲಿಪಿ ವ್ಯವಸ್ಥೆ ಆಯಾ ಭಾಷೆಗಳು ಅಗತ್ಯ ಹಿನ್ನಲೆಯಲ್ಲಿ ರೂಢಿಸಿಕೊಂಡಿರುತ್ತವೆ. ಸಾಮಾನ್ಯವಾಗಿ ಲಿಪಿ ಆ ಭಾಷೆ ಹೊಂದಿರುವ ಭಾಷಿಕ ಮಹತ್ವ ರಚನೆಗಳನ್ನು ಅಭಿವ್ಯಕ್ತಿಸಲು ಅನುಕೂಲವಾಗಿರಬೇಕು. ಯಾವುದೇ ರೀತಿಯಲ್ಲಿ ಗೊಂದಲವಿರಬಾರದು. ಹಿತವಾಗಿ ಮಿತವಾಗಿ ಎನ್ನುತ್ತಾರಲ್ಲ ಹಾಗಿರಬೇಕು. ಒಟ್ಟಿನಲ್ಲಿ ಅವೈಜ್ಞಾನಿಕತೆಯಿಂದ ಕೂಡಿರಬಾರದು.

ಭಾಷೆಯ ಮೌಖಿಕ ವ್ಯವಸ್ಥೆಯು, ಕಾಲ-ದೇಶ-ಸಮಾಜ-ಸಂದರ್ಭಗಳ ಹಿನ್ನಲೆಯಲ್ಲಿ ಅವಸ್ಥಾಭೇದಗಳನ್ನು ಸೂಚಿಸುವುದಲ್ಲದೆ, ನಿರಂತರ ಪರಿವರ್ತನೆಯನ್ನು ತೋರುತ್ತದೆ. ಪರಿವರ್ತನಾ ಲಕ್ಷಣಗಳು ನಿರ್ದಿಷ್ಟವಾದ

ಭಾಷೆಗೆ ಲಿಪಿ ಯಾಕೆ ಬೇಕು ? ಎಂಥ ಲಿಪಿ ಬೇಕು ? ಈ ಪ್ರಶ್ನೆಯನ್ನು ಗಂಭೀರವಾಗಿ ಎತ್ತಿಕೊಂಡಾಗ, ದೊರೆಯುವ ಸಮಾಧಾನ: ಭಾಷೆಯೆಂಬುದು ''ಭಾಷಿಕನೊಬ್ಬನು ತನ್ನ ಅನಿಸಿಕೆಗಳನ್ನು ಅದೇ ಭಾಷೆಯ ಇತರರಿಗೆ ತಿಳಿಸಲು ಅನುಕೂಲಕರವಾದ ಆಯ್ದ ಮೌಖಿಕ ಧ್ವನಿ (ಉಚ್ಚಾರ) ಸಂಕೇತಗಳ ಒಂದು ವ್ಯವಸ್ಥೆ''. ಇಂಥ ವ್ಯವಸ್ಥೆ, ಭಾಷಿಕರು ಮುಖಾ ಮುಖಿಯಾಗಿರುವಾಗ, ಅನಿಸಿಕೆಗಳ ವಿನಿಮಯಕ್ಕೆ ಸಮರ್ಥವಾದ ಸಾಧನವಾಗಿರುತ್ತದೆ. ಇಂಥ ಸಾಧನದ ಅಥವಾ ಭಾಷೆಯ ಮೌಖಿಕ ವ್ಯವಸ್ಥೆಯ ಪ್ರತಿಬಿಂಬವಾಗಿ, ಭಾಷಿಕರು ಮುಖಾಮುಖಿಯಾಗಿರದ ಅಥವಾ ಅನೇಕ ಸಂದರ್ಭದಲ್ಲ ವಿನಿಮಯಕ್ಕೆ ಬಳಸಿಕೊಳ್ಳುವ ವ್ಯವಸ್ಥಿತ ಸಾಧನಗಳಲ್ಲ ಭಾಷಾ ಲಿಪಿ (ಭಾಷಾ ಚಾಕ್ಷುಷ ವ್ಯವಸ್ಥೆ) ಒಂದಾಗಿರುತ್ತದೆ.

'ಷ' ಕಾರವು ಸಹ ಸಂಸ್ಕೃತದ ರೂಪಗಳಲ್ಲಿ ಕಾಣುವ ಕನ್ನಡೇತರ ಧ್ವನಿಯ ಲಿಪಿ ಸಂಕೇತ. ಇಂದಿನ ಕನ್ನಡದಲ್ಲಿ ಸ್ವೀಕೃತಗೊಂಡ ಸಂಸ್ಕೃತ ರೂಪಗಳಲ್ಲಿ ಷಕಾರ > ಶಕಾರವಾಗಿ ಉಚ್ಚಾರಗೊಳ್ಳುತ್ತದೆ. ಕೇವಲ ಪರಿವೇಷ್ಠಿತ ವ್ಯಂಜನಗಳ ದ್ವಿತ್ವಸ್ಥಾನದಲ್ಲಿ ಮಾತ್ರ ಉಚ್ಚಾರಣೆಯನ್ನು ಉಳಿಸಿಕೊಂಡಿದೆ. ಹೀಗೆ ನಿರ್ದಿಷ್ಟ ಪರಿಸರದಲ್ಲಿ ಉಚ್ಚರಿಸುವ ಧ್ವನಿಯ ಪ್ರಸಾರವು ಪೂರಕವಾದದ್ದು. ಇಂಥ ಪ್ರಸಾರ ಧ್ವನಿಯನ್ನು ಉಪಧ್ವನಿ ಎನ್ನಲಾಗುತ್ತದೆ. ಉಪಧ್ವನಿಗೆ ಲಿಪಿಸ್ಥಾನ ಅನಗತ್ಯವೆಂಬುದು ಭಾಷಾ ವಿಜ್ಞಾನಿಗಳ ಸಲಹೆ. 'ಷ'ಕಾರ ರೂಪಗಳು ಸೂಚಿಸುವ ಉಚ್ಚಾರಣ ಬದಲಾವಣೆಯಂತೆ ಶಕಾರದೊಂದಿಗೆ ಬರೆಯುತ್ತಾ, 'ಷ'ಕಾರವನ್ನು ವರ್ಣ ಪಟ್ಟಿಯಿಂದ ಕೈಬಿಡಬಹುದು. ಹೀಗೆ ಮಾಡುವುದರಿಂದ ಒಂದೇ ಉಚ್ಚಾರಣೆಗೆ ಯಾವ ಸಂದರ್ಭದಲ್ಲಿ 'ಶ' ಬರೆಯಬೇಕು, ಯಾವ ಸಂದರ್ಭದಲ್ಲಿ 'ಷ' ಸಂಕೇತ ಬರೆಯಬೇಕು ಎಂಬ ಗೊಂದಲ ನೀಗಿಸಿಕೊಂಡಂತಾಗುತ್ತದೆ. ಪಾಠಶಾಲೆಗಳಲ್ಲಿ ಇಂದಿನ ಕನ್ನಡ ಮೇಷ್ಟ್ರುಗಳು ಇವುಗಳ ವ್ಯತ್ಯಾಸ ತಿಳಿಸುವಾಗ ಶಂಕರ ಶ, ಶಣ್ಮುಕ ಶ ಎಂದು ಹೇಳುವ ಮೂರ್ಖ ಪ್ರಯತ್ನಕ್ಕೆ ದಾರಿ ಕಾಣಿಸಿದಂತಾಗುತ್ತದೆ.

ವಿಸರ್ಗವೂ ಕನ್ನಡದಲ್ಲಿ ಪ್ರತ್ಯೇಕ ಸಂಕೇತದೊಂದಿಗೆ ಬರಹದಂತೆ ಉಚ್ಚರಿಸುತ್ತಿಲ್ಲ, ಆದರ ಉಚ್ಚಾರಣೆಯು ಪದಮಧ್ಯದಲ್ಲಿ ಪಕ್ಕದ ವ್ಯಂಜನದೊಂದಿಗೆ ಸಜಾತೀಕರಣ ಮಾಡಿ ಆದರ ದ್ವಿತ್ವವಾಗಿ ಬಳಸುತ್ತಿದ್ದೇವೆ. ಪದಾಂತ್ಯದಲ್ಲಿ ಆದರ ಉಚ್ಚರಣೆಯು 'ಹ'ಕಾರವಾಗಿದೆ. ಉದಾಹರಣೆಗೆ, ದುಃಖ>ದುಕ್ಖ, ಬಹುಶಃ>ಬಹುಶಹ ಅಥವಾ ಬಹುಶ ವಿಸರ್ಗ ಬಿಡದಿದ್ದರೆ 'ಹ'ಕಾರದ ಉಚ್ಚಾರಣೆಗೆ ಒಂದು ಹ ಸಂಕೇತ ಹಾಗೂ ಮತ್ತೊಂದು 'ಃ' ಸಂಕೇತ ಮಾಡಿಕೊಂಡಂತಾಗುತ್ತದೆ. ಇನ್ನು ಪದಮಧ್ಯದಲ್ಲಿ ವಿಸರ್ಗದ ಮುಂದಿನ ವ್ಯಂಜನಗಳಿಗೂ ಮತ್ತೊಂದು ಹೆಚ್ಚುವರಿ ಸಂಕೇತವನ್ನು ಹೊಂದಿಸಿಕೊಂಡಂತಾಗುತ್ತದೆ. ಉದಾಹರಣೆಗೆ 'ದುಃಖ' ರೂಪವನ್ನು 'ದುಕ್ಖ' ಎಂದು ಉಚ್ಚರಿಸಿದಾಗ 'ಕ'ಕಾರಕ್ಕೆ 'ಕ' ಸಂಕೇತದೊಂದಿಗೆ ವಿಸರ್ಗ ಸಂಕೇತವನ್ನು ಹೆಚ್ಚಿಸಿಕೊಂಡತಾಗುತ್ತದೆ. ಹೀಗೆ 'ಕ'ಕಾರದಂತೆ 'ಪ'ಕಾರ ಪೂರ್ವದಲ್ಲಿಯೂ ವಿಸರ್ಗವು ಬಳಕೆಯಾಗುತ್ತದೆ. 'ಪ'ಕಾರಕ್ಕೂ 'ಕ'ಕಾರದಂತೆ ಹೆಚ್ಚುವರಿ ಸಂಕೇತವನ್ನು ಮಾಡಿಕೊಂಡಂತಾಗುತ್ತದೆ. ಭಾಷೆಯ ಉಚ್ಚಾರಣೆಯ ಬದಲಾವಣೆಗೆ ತಕ್ಕಂತೆ ಲಿಪಿ ಬದಲಾವಣೆ ತರದಿದ್ದರೆ, ಅನವಶ್ಯಕ ಸಂಕೇತಗಳು ಹೆಚ್ಚಾಗಿ ಲಿಪಿ ಅವ್ಯವಸ್ಥೆ ಹೆಚ್ಚಾಗಿ ಅನೇಕ ಸಮಸ್ಯೆಗಳಿಗೆ ದಾರಿಮಾಡಿಕೊಟ್ಟಂತಾಗುತ್ತದೆ. ಸ್ವಭಾಷೆಯಾಗಿ ಹಾಗೂ ಅನ್ಯಭಾಷೆಯಾಗಿ ಕನ್ನಡವನ್ನು ಬೋಧಿಸುವಾಗ, ಕಲಿಯುವಾಗ ಸಮಸ್ಯೆಗಳು ಅಧಿಕವಾಗುವವಲ್ಲದೆ, ಕಲಿಕಾ ಹಾಗೂ ಬೋಧನಾ ಸಮಯದಲ್ಲಿ ಮೌಲಿಕ ಸಮಯವನ್ನು ಉಳಿಸಿದಂತಾಗುತ್ತದೆ.

ಮಹಾಪ್ರಾಣ, 'ಷ'ಕಾರ ಹಾಗೂ ವಿಸರ್ಗಗಳು ಕನ್ನಡದಲ್ಲಿಯ ಸಂಸ್ಕೃತ ರೂಪಗಳನ್ನು ಬರೆಯಲು ಅಗತ್ಯವಾದವು. ಆದರೆ ಇಂದಿನ ಹೆಚ್ಚಿನ ಜನ ಕನ್ನಡ ಉಚ್ಚರಿಸುವಾಗ, ಓದುವಾಗ ಲಿಪಿಗೆ ತಕ್ಕ ಉಚ್ಚಾರಣೆಯನ್ನು ಗಮನಿಸುವುದಿಲ್ಲ. ಕಾರಣ ಅವು ಅನಗತ್ಯವೆನಿಸುತವೆ.

ಇನ್ನು ಅರ್ಕಾವತ್ತು. ಕನ್ನಡ ಲಿಪಿಯಲ್ಲಿ ಅರ್ಕಾವತ್ತು ಅನೇಕ ಸಮಸ್ಯೆಗಳಿಂದ ಕೂಡಿದ್ದರೂ ವ್ಯವಸ್ಥಿತವಾಗಿ ಬಳಸುತ್ತಿರುವ ಕನ್ನಡಿಗರ ತಾಳ್ಮೆ ಎಲ್ಲೆಯಿಲ್ಲದ್ದೆಂದು ಹಾಸ್ಯ ಮಾಡುವಂತಾಗಿದೆ. ಕನ್ನಡದಲ್ಲಿ ಅನುನಾಸಿಕಗಳನ್ನು ಹೊರತುಪಡಿಸಿ ಪ್ರತಿಯೊಂದು ವ್ಯಂಜನಕ್ಕೆ ಒಂದು ಅದ್ವಿತ್ವ ಸಂಕೇತ ಮತ್ತೊಂದು ದ್ವಿತ್ವ ಸಂಕೇತವೆಂದು ಎರಡು ಸಂಕೇತಗಳನ್ನು ಹೊಂದಿಸಿರುವುದು ಸಹಜ ಲಕ್ಷಣ. ಆದರೆ, 'ರ'ಕಾರಕ್ಕೆ, ಅದ್ವಿತ್ವಕ್ಕೆ ಎಲ್ಲಾ ವ್ಯಂಜನಗಳಂತೆ ಇದೆ. ಆದರೆ ದ್ವಿತ್ವಕ್ಕೆ ಮಾತ್ರ ಉಳಿದ ಅವರ್ಗದಂತೆ ಒಂದೇ ಅದ್ವಿತ್ವ ಸಂಕೇತವಿರದೆ 'ೱ' ಅರ್ಕಾವತ್ತು '್ರ' ಅರ್ಧಚಂದ್ರ ಎಂದು ಹೇಳುವ ಎರಡು ಸಂಕೇತಗಳನ್ನು ಹೊಂದಿದೆ. ಇವುಗಳಲ್ಲಿ ಸೂಕ್ತವಾದದ್ದು ಒಂದೇ ಸಾಕೆನಿಸುತ್ತದೆ. ಅಡಿಯಲ್ಲಿ ಬರೆಯುವ ಸಂಕೇತವಾದ ಅರ್ಧಚಂದ್ರಾಕಾರದೊತ್ತು ವ್ಯವಸ್ಥಿತ ಕ್ರಮದ್ದಾಗಿದೆ. ಅರ್ಕಾವತ್ತು ಬರಹದಲ್ಲಿ ಅಗತ್ಯವಿರದಿದ್ದರೂ ಅಗತ್ಯ ಲಿಪಿಯೆಂಬಂತೆ ಬಳಸುತ್ತಿರುವುದು ಕಂಡುಬರುತ್ತದೆ.

ಅರ್ಕಾವತ್ತನ್ನು ಬಳಸಿ, 'ರ'ಕಾರದ ಅದ್ವಿತ್ವ ಸಂಕೇತವನ್ನು ದ್ವಿತ್ವದಲ್ಲಿ ಬಳಕೆಮಾಡದೆ, ಇತರ ವ್ಯಂಜನಗಳ ಸಾಮಾನ್ಯ ನಿಯಮವನ್ನು 'ರ'ಕಾರಕ್ಕೆ ಹೊರತುಪಡಿಸಿದಂತಾಗುತ್ತದೆ. ಉದಾಹರಣೆಗೆ, ತಾಳ್ಮೆ ಈ ರೂಪದಲ್ಲಿ ದ್ವಿತ್ವ ಧ್ವನಿಗಳು 'ಳ್' ಹಾಗೂ 'ಮ್' ದ್ವಿತ್ವದ ಮೊದಲನೆ ಧ್ವನಿ 'ಳ್' ಆಗಿದ್ದು, ಅದೇ ಅದ್ವಿತ್ವ ಸಂಕೇತವನ್ನು ಬಳಸಲಾಗುತ್ತದೆ. ಎಲ್ಲಾ ವ್ಯಂಜನಗಳು ಇದೇ ನಿಯಮ ಅನುಸರಿಸಿದರೆ, 'ರ'ಕಾರವು ಮಾತ್ರ ದ್ವಿತ್ವದಲ್ಲಿ ಮೊದಲ ವ್ಯಂಜನವಾಗಿದ್ದರೆ ಅರ್ಕಾವತ್ತನ್ನು ಬಳಸಲಾಗುತ್ತದೆ. ಉದಾಹರಣೆಗೆ, ವರ್ಣ ರೂಪದಲ್ಲಿ 'ರ್' ಹಾಗೂ 'ಣ್' ದ್ವಿತ್ವಧ್ವನಿಗಳು. ಉಳಿದ ವ್ಯಂಜನಗಳ ಕ್ರಮದಂತೆ 'ರ್'ವನ್ನು ಬಳಸಿ ಅರ್ಕಾವತ್ತನ್ನು ಬಿಟ್ಟರೆ, ಅನೇಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಂಡಂತಾಗುತ್ತದೆ.

೧. ನಿರ್ಮಲ=ನಿಮರ್‌ಲ ಎಂದು ಮಲೀನವಾಗಿ ಬರೆದು, ನಿರ್ಮಲ ಎಂದು ಅಮಲೀನವಾಗಿ ಉಚ್ಚರಿಸದೆ, ಅಮಲೀನವಾಗಿ ಬರೆದು ಅಮಲೀನವಾಗಿ ಉಚ್ಚರಿಸಿದಂತಾಗುತ್ತದೆ. ೨. ಉಳಿದ ಅವರ್ಗ ಸಂಕೇತಗಳ ಕ್ರಮವನ್ನು 'ರ'ಕಾರಕ್ಕೂ ಅನುಸರಿಸಿ ಕ್ರಮತೆ ಗಮನಿಸಿಕೊಂಡಂತಾಗುತ್ತದೆ. ೩. ಅವ್ಯವಸ್ಥಿತ ಹಾಗೂ ಅನವಶ್ಯಕ ಸಂಕೇತವನ್ನು ಬಿಟ್ಟು ಲಿಪಿ ಸುಧಾರಿಸಿದಂತಾಗುತ್ತದೆ.

ಕನ್ನಡ ಭಾಷಾ ಪರಂಪರೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಪರಂಪರೆಯಲ್ಲಿ ಉಚ್ಚಾರಣೆಯ ನಿರ್ದಿಷ್ಟತೆಯನ್ನು ಕಳೆದುಕೊಂಡ ಸಂಕೇತಗಳನ್ನು ಬಿಟ್ಟು ಪರಿವರ್ತಿತವಾದ ಉಚ್ಚಾರಣೆಯ ಸಂಕೇತದೊಂದಿಗೆ ಬರೆಯುವುದು ಒಂದು ಕ್ರಮವಾಗಿಯೇ ಬಂದಿದೆ; ಉದಾಹರಣೆಗೆ, ಹಳೆಗನ್ನಡ, ನಡುಗನ್ನಡ ಪ್ರಭೇದಗಳಲ್ಲಿಯ ರಳ ಹಾಗೂ ಶಕಟರೇಫಗಳನ್ನು 'ಳ', ಹಾಗೂ 'ರ'ಗಳೊಂದಿಗೆ ಸಮೀಕರಿಸಿಕೊಂಡಿದೆ. ಹೊಸಗನ್ನಡದಲ್ಲಿ ಪ್ರಸ್ತುತ ಸಂದರ್ಭದಲ್ಲಿ 'ಋ' ಸಂಕೇತಯುಕ್ತ ರೂಪಗಳನ್ನು 'ರು' ಸಂಕೇತದೊಂದಿಗೆ ಬಳಸುತ್ತೇವೆ. ಅಲ್ಲದೆ, ಫೀಜು, ಗಜಲ ಮುಂತಾದ ಅನ್ಯದೇಶೀಯ ರೂಪಗಳನ್ನು ಬರೆಯುವಾಗ 'ಫ' ಸಂಕೇತವನ್ನು ಮಹಾಪ್ರಾಣವಲ್ಲದ ದಂತೋಷ್ಠ್ಯ ಘರ್ಷ ಉಚ್ಚಾರಣೆಗೆ ಬಳಸುತ್ತೇವೆ. ಹಾಗೆ ಉರ್ದುವಿನ ಗಜಲ ರೂಪದಲ್ಲಿಯ 'ಜ' ಸಂಕೇತವನ್ನು ನಿರ್ದಿಷ್ಟಗೊಳಿಸಲು, ಹೀಗೆ ಉಚ್ಚಾರಣೆಯ ಅಗತ್ಯಕ್ಕೆ ತಕ್ಕಹಾಗೆ ಹೆಚ್ಚಿಸಿಕೊಂಡು, ಅಗತ್ಯಕ್ಕೆ ತಕ್ಕಹಾಗೆ ಕಡಿಮೆ ಮಾಡಿಕೊಳ್ಳುವುದು ಭಾಷೆಯ ಸಹಜ ಲಕ್ಷಣವಾಗಿರಬೇಕು. ಅಲ್ಲದೆ, ಭಾಷೆ ರೂಢಿಸಿಕೊಳ್ಳಬೇಕಾದ ಪ್ರಗತಿಶೀಲತೆಯೂ ಹೌದು. ಭಾಷಿಕ ರೂಪಗಳಲ್ಲಿ ಉಚ್ಚಾರಣೆ ಬದಲಾವಣೆ ತಂದುಕೊಂಡ ಮೇಲೂ ಉಚ್ಚರಿಸಿದಂತೆ ಬರೆಯದೆ, ''ಲಿಪಿಗೆ ಭಾಷೆಯನ್ನು ಹೊಂದಿಸುವುದು ಹುರುಳಿಲ್ಲದ ಯತ್ನವಾಗುತ್ತದೆ. ಭಾಷಾ ಉಚ್ಚರಣೆಗೆ ಲಿಪಿಯನ್ನು ಹೊಂದಿಸುವುದೇ ಸರಿಯಾದದ್ದು''.

ಕೊನೆಯಲ್ಲಿ ಎರಡು ಸಂಗತಿಗಳು: ಒಂದು, 'ಹೊಸತು' ಪತ್ರಿಕೆ ಈ ನಿಟ್ಟಿನಲ್ಲಿ ಒಂದು ಭಾಷಾಸಂಸ್ಥೆ ಮಾಡುವಂಥ ಕಾರ್ಯ ಈ ಚರ್ಚೆಯ ಮೂಲಕ ಅನೇಕ ಓದುಗರೊಂದಿಗೆ ನಡೆಸುತ್ತಿರುವುದು, ಪತ್ರಿಕೆಯು ಅನೇಕ ರೀತಿಯಲ್ಲಿ ಕ್ರಿಯಾಶೀಲ ಗುಣವನ್ನು ತೋರುತ್ತಿರುವುದು ಅಭಿನಂದನಾರ್ಹ. ಮತ್ತೊಂದು ಸಂಗತಿ, ಪ್ರಸ್ತುತ ಬರಹ ಲೇಖನದ ಆಶಯ ಪ್ರತಿವಾದಿಗಳು ಓದಲೆಂದು ಆಶಯದಂತೆ ಬರೆದಿಲ್ಲ.

ಜಿ. ವೀರಭದ್ರಗೌಡ
ಕನ್ನಡ ಸ್ನಾತಕೋತ್ತರ ವಿಭಾಗ ಬಸವೇಶ್ವರ ಕಲಾ ಮಹಾವಿದ್ಯಾಲಯ.
ಬಾಗಲಕೋಟ

## ವಾಸ್ತು – ವಾಸ್ತವ

ಅಡ್ಡಿ ಆತಂಕ

ಬರದಿರಲಿ ಅಂತ

ಕುರ್ಚಿ ಮುಖ

ಉತ್ತರಕ್ಕೆ ತಿರುಗಿಸಿದ್ದು

ಇದು ವಾಸ್ತು

ಹಾಗಾದ್ರೆ ದಕ್ಷಿಣಕ್ಕೆ

ಮುಖ ಮಾಡ್ಡಿ

ಬೇಡಿಕೆ ಸಲ್ಲಿಸಿದ್ರೆ

ಕೆಲಸ ಆಗದೆ ಇರೋದು

ವಾಸ್ತವನಾ ?

ರವಿ ಸೋ. ದೇವರೆಡ್ಡಿ
ಕರಿಗೌಡ್ರ ಬಿಲ್ಡಿಂಗ್, ಹೇಮರೆಡ್ಡಿ ಮಲ್ಲಮ್ಮ ನಗರ
ಮುಂಡರಗಿ, ಗದಗ ಜಿಲ್ಲೆ

# ಚಿಂತೆಯು ಜಾಡ್ಯವ ಕೊಡವಿ ಎದ್ದು ನಿಲ್ಲಬೇಕು

ಚಿಂತೆಗೂ ಚಿತೆಗೂ ಸೊನ್ನೆಯೊಂದೇ ವ್ಯತ್ಯಾಸ. ಆದರೆ, ಚಿಂತೆ ಮತ್ತು ಚಿತೆ ಎರಡರ ಸ್ವಭಾವ ಮಾತ್ರ ಒಂದೇ. ಚಿತೆ ಸುಡುವಂತೆ ಚಿಂತೆಯೂ ಸುಡುತ್ತದೆ. ಚಿತೆ ಸುಡುವುದು ಹೊರಗೆ ಕಾಣಿಸುತ್ತದೆ, ಚಿಂತೆ ಸುಡುವುದು, ಕರಗಿಸುವುದು ಹೊರಗೆ ಕಾಣದಿದ್ದರೂ ಒಳಗೆ ನಿರಂತರವಾಗಿ ನಡೆಯುತ್ತಲೇ ಇರುತ್ತದೆ. ಚಿಂತೆ ಸತ್ತಾಗಲೇ ಅದರ ಸುಡುವ ಗುಣ ನಾಶವಾಗುವುದು. ಆದರೆ ನಾವೆಲ್ಲಾ ಒಂದಲ್ಲಾ ಒಂದು ಚಿಂತೆಯಲ್ಲಿ ಅಥವಾ ಒಂದು ಚಿಂತೆ ಮುಗಿದ ತಕ್ಷಣ ಮತ್ತೊಂದು ಚಿಂತೆಗೆ ಬಿದ್ದು, ಅದರಲ್ಲೇ ಉರುಳಾಡಿ ಸಂಕಟಪಡುತ್ತಿರುತ್ತೇವೆ.

ಚಿಂತೆ ಮಾಡುವುದಕ್ಕೆ ನಾನಾ ಕಾರಣಗಳಿರುತ್ತವೆ. ಸಣ್ಣ-ಪುಟ್ಟ ಸಂಗತಿಗಳಿಗೂ ನೊಂದುಕೊಳ್ಳುವುದು, ದುಃಖಪಡುವುದು, 'ಅಯ್ಯೋ ಹೀಗಾಯ್ತಲ್ಲಾ!' ಅಂತ ಸಂಕಟದಿಂದ ಚಿಂತೆ ಮಾಡುವುದು – ಇವೆಲ್ಲಾ ಮನುಷ್ಯನ ಮನಸ್ಸಿಗಂಟಿದ ಜಾಡ್ಯ. ವ್ಯಕ್ತಿಯ ಮನಸ್ಸು ದುರ್ಬಲವಾಗಿದ್ದರೆ ಚಿಂತೆ ಹೆಚ್ಚಾಗುತ್ತಲೇ ಇರುತ್ತದೆ. ಒಂದರ ಮೇಲೊಂದರಂತೆ ಕಷ್ಟಗಳು ಬರುತ್ತಿದ್ದರೆ, ವ್ಯಕ್ತಿ ಕಷ್ಟಗಳ ಬೇಗೆಯಲ್ಲಿ ಬೇಯುತ್ತಾನೆ, ಚಿಂತಾಕ್ರಾಂತನಾಗುತ್ತಾನೆ.

ಚಿಂತೆಗೆ, ದುಃಖಕ್ಕೆ ನಮ್ಮ ಅಸಹಾಯಕತೆಯೇ ಮುಖ್ಯ ಕಾರಣವಾದರೂ ಬಡತನ, ನಿರುದ್ಯೋಗ, ಒಂಟಿತನ, ಅತೃಪ್ತಿ, ಅತಿ ಆಸೆ, ವಿನಾಕಾರಣ ಪರರಿಂದ ನಿಂದನೆಗೆ ಒಳಗಾದರೆ, ತಪ್ಪುಮಾಡದೆ ಶಿಕ್ಷೆ ಅನುಭವಿಸಬೇಕಾದಾಗ, ಅಂದುಕೊಂಡದ್ದು ಆಗದೇ ಹೋದಾಗ ಚಿಂತೆ ಸಹಜವಾಗಿ ಕಾಣಿಸಿಕೊಳ್ಳುತ್ತದೆ. ಕೆಲವೊಮ್ಮೆ ನಮ್ಮಿಂದ ತಪ್ಪಾದರೆ, ಮತ್ತೆ ಕೆಲವೊಮ್ಮೆ ಬೇರೆಯವರಿಂದ ನಿರೀಕ್ಷಿಸಿದ್ದು ಸಿಗದಿದ್ದರೆ – ಹೀಗೆ ಎಷ್ಟೋ ಕಾರಣಗಳಿಂದ ಚಿಂತೆ ಕಾಣಿಸಿಕೊಳ್ಳುತ್ತದೆ.

ದುಃಖ ಆದಾಗ ಕೆಲವರು ಅತ್ತು ಗೋಳಾಡಿ ದುಃಖ ಕಡಿಮೆ ಮಾಡಿಕೊಳ್ಳುತ್ತಾರೆ. ಅದು ತುಂಬಾ ಸಹಜವಾದ ಮತ್ತು ಬಹಳ ಸಲ ಪರಿಣಾಮಕಾರಿಯಾದ ದಾರಿಯೂ ಹೌದು. ಆದರೆ, ಅನೇಕರು ದುಃಖ ಬಂದಾಗಲೂ ಮೌನವಾಗಿದ್ದು, ಚಿಂತೆ ಮಾಡುತ್ತಾ ದಿನದಿಂದ ದಿನಕ್ಕೆ ಕಡ್ಡಿಯಂತಾಗಿಬಿಡುತ್ತಾರೆ. 'ಚಿಂತೆ'ಯ ವಿಷಯವನ್ನು ಇತರರೊಡನೆ ಹಂಚಿಕೊಂಡರೆ ಅದಕ್ಕೆ ಪರಿಹಾರ ಸಿಗಬಹುದು. ಇಲ್ಲಾ, ಅದರ ಒತ್ತಡ ಕಡಿಮೆಯಾಗಿ ಪರ್ಯಾಯ ದಾರಿಗಳು ಕಾಣಬಹುದು. ಸ್ನೇಹಿತರ, ಮನೆಯವರ ಹಿತನುಡಿಗಳಿಂದ, ನೆರವಿನಿಂದ ನಾವು ಚಿಂತೆಯಿಂದ ಹೊರಬಂದು ಚೇತರಿಸಿಕೊಳ್ಳಬಹುದು.

ಮೊದಲಿಗೆ ನಾವು ಅರ್ಥ ಮಾಡಿಕೊಳ್ಳಬೇಕಾದ ಸಂಗತಿ ಎಂದರೆ ಚಿಂತೆ ಸರ್ವವ್ಯಾಪಿ ಎಂಬುದು. ಎಲ್ಲಾ ಕಡೆಯಲ್ಲೂ, ಎಲ್ಲಾ ಕಾಲದಲ್ಲೂ ಮನುಷ್ಯರು ಚಿಂತೆ ಮಾಡುತ್ತಲೇ ಇರುತ್ತಾರೆ. ಇದು ಮನುಷ್ಯನ ಸ್ವಭಾವ. ಆದರೆ, ಚಿಂತೆ ನಿಷ್ಪ್ರಯೋಜಕ. ಕೆಲಸಕ್ಕೆ ಬಾರದ ಯೋಚನೆಗಳಿಂದ ಏನೂ ಪ್ರಯೋಜನವಿಲ್ಲ, ಆದ್ದರಿಂದ ಅವುಗಳನ್ನು ನಿಯಂತ್ರಿಸಬೇಕು. ತನ್ನ ಸ್ಥಿತಿ-ಗತಿಗಾಗಿ ಅನ್ಯರನ್ನು ದೂಷಿಸುತ್ತಾ, ಟೀಕೆ ಮಾಡುತ್ತಾ ದುಃಖಿಸುತ್ತಾ ಓಡುವವರು ನಮ್ಮ ಸುತ್ತಮುತ್ತ ಕಾಣುತ್ತಲೇ ಇರುತ್ತಾರೆ. ಆದರೆ, ನಿಜಕ್ಕೂ ಬಹುಪಾಲು ನಮ್ಮ ದುಃಖಕ್ಕೆ ನಾವೇ ಕಾರಣ ಎಂಬುದನ್ನು ನಾವು ಅರಿಯಬೇಕಾಗಿದೆ.

ಇನ್ನು ಕೆಲವೊಮ್ಮೆ ಕೆಲವರು ತಾವೇ ಚಿಂತೆಯನ್ನು ಅತಿಥಿಯಂತೆ ಬರಮಾಡಿಕೊಳ್ಳುತ್ತಾರೆ. ಉದಾಹರಣೆಗೆ: ಬಸ್‌ಸ್ಟಾಪ್‌ನಲ್ಲಿ ನಿಂತು 'ಬಸ್ ಬರುತ್ತೋ ಇಲ್ಲವೋ ಎನ್ನುವ ಚಿಂತೆ ಮಾಡುತ್ತಿರುತ್ತಾರೆ. ಇವರು ಚಿಂತೆ ಮಾಡುತ್ತಾರೆಂದೇನೂ ಬಸ್ ಬೇಗ ಬರುವುದಿಲ್ಲ, ಅದು ತಡವಾಗಿ ಬರುವುದಾದರೆ ಅದಕ್ಕೆ ಬೇರೆ ಕಾರಣಗಳಿರಬಹುದು. ಆದ್ದರಿಂದ ಬಸ್‌ಸ್ಟ್ಯಾಂಡ್‌ನಲ್ಲಿ ನಿಂತು 'ಬಸ್ ಇನ್ನೂ ಬರಲಿಲ್ಲ, ಬಸ್ ಇನ್ನೂ ಬರಲಿಲ್ಲ' ಅಂತ ಆತುರಪಡುವುದರಿಂದ ಏನೂ ಪ್ರಯೋಜನವಿಲ್ಲ. ಹೀಗೆ ಜಪ ಮಾಡುವ ಬದಲಿಗೆ, ವಿದ್ಯಾರ್ಥಿಗಳಾಗಿದ್ದರೆ ತಾವು ಕೇಳಿದ ಪಾಠವನ್ನೋ, ಪದ್ಯವನ್ನೋ ಮೆಲುಕುಹಾಕಿಕೊಂಡು ಆ ಸಮಯವನ್ನು ಅರ್ಥಪೂರ್ಣವಾಗಿ ಕಳೆಯಬಹುದು. ಇಲ್ಲಾ, ಸಾಮಾನ್ಯ ಗೃಹಿಣಿಯೊಬ್ಬಳಾಗಿದ್ದರೆ ದೇವರ ನಾಮವನ್ನೋ, ಇಷ್ಟವಾದ ಸಿನಿಮಾ ಹಾಡನ್ನೋ ಗುನುಗುತ್ತಾ ಮನಸ್ಸನ್ನು ಫ್ರೆಶ್ ಮಾಡಿಕೊಳ್ಳಬಹುದು. ಅಂದರೆ, ಅವರವರಿಗೆ ಇಷ್ಟವಾದ ವಿಷಯದಲ್ಲಿ ಮನಸ್ಸನ್ನು ನಿಲ್ಲಿಸಿ, ಕಾಲದ ಬಳಕೆ ಪಡೆಯಬಹುದು, ಬದಲಿಗೆ, 'ಬಸ್ ಇನ್ನೂ ಬರಲಿಲ್ಲಾ!' ಎಂಬ ಚಿಂತೆ, ಬಸ್ ಬರುವವರೆಗೂ ನಮ್ಮನ್ನು ಒಂದೇ ಕಾಲ ಮೇಲೆ ನಿಲ್ಲಿಸಿ, ಟೆನ್ಷನ್ ಮಾಡಿಕೊಂಡು ಒದ್ದಾಡುವಂತೆ ಮಾಡಿಬಿಡುತ್ತದೆ.

ಆದ್ದರಿಂದ 'ಚಿಂತೆ' ಮಾಡುವುದನ್ನು ಬಿಟ್ಟು 'ಚಿಂತನೆ' ಮಾಡೋಣ. ಚಿಂತನೆ ಆರೋಗ್ಯಕರವಾದದ್ದು. 'ಚಿಂತೆ' ಅಯ್ಯೋ ಹೀಗಾಯಿತೇ, ಅಥವಾ ಮುಂದೆ ಗತಿ ಏನು, ಎಂಬುದಾಗಿದ್ದರೆ, 'ಚಿಂತನೆ' ಏಕೆ ಹೀಗಾಯಿತು, ಹೇಗಾಯಿತು, ಯಾರಿಂದ, ಯಾವ ಸಂದರ್ಭ – ಎಂದೆಲ್ಲಾ ಆಲೋಚನೆ ಮಾಡಿ, ಸಮಸ್ಯೆಯೊಂದಕ್ಕೆ ಉತ್ತರ ಹುಡುಕುವ, ಸಮಸ್ಯೆಯ ಸಂಪೂರ್ಣ ಸ್ವರೂಪ ತಿಳಿಯುವ ಕೆಲಸ ಮಾಡುತ್ತದೆ. ಇದರಿಂದ ನಮಗೆ ನಮ್ಮ ತಪ್ಪು, ಮಿತಿ, ಸಮಯ-ಸಂದರ್ಭದ ಪರಿಜ್ಞಾನ ಉಂಟಾಗಿ ಚಿಂತೆ ಮಾಯವಾಗಿ, ಆರೋಗ್ಯಕರವಾಗಿ ಆಲೋಚಿಸಲು 'ಚಿಂತನೆ' ದಾರಿ ಮಾಡಿಕೊಡುತ್ತದೆ. ಚಿಂತೆಯಿಂದ ಮನಸ್ಸು ಖಿನ್ನವಾದರೆ, ಚಿಂತನೆಯಿಂದ ಹಗುರಾಗುತ್ತದೆ. ಜೀವನದಲ್ಲಿ ಸಮಸ್ಯೆಗಳು ಇದ್ದೇ ಇರುತ್ತವೆ. ನಾವು ಕೊರಗುವುದರಿಂದ, ಚಿಂತೆ ಮಾಡುವುದರಿಂದ ಸಮಸ್ಯೆಗಳಿಗೆ ಪರಿಹಾರ ಸಾಧ್ಯವಿಲ್ಲ. ಅಲ್ಲದೆ, ಎಷ್ಟೋ ಸಮಸ್ಯೆಗಳು ನಮ್ಮಿಂದ ಪರಿಹಾರ ಕಾಣದೆ, ಸಮಯ ಕಳೆದಂತೆ ಮಾಯವಾಗಿಯೋ, ಬೇರೊಂದು ರೂಪ, ಗುಣ, ಗಾತ್ರದಲ್ಲೋ ಕಾಣಿಸಿಕೊಳ್ಳುತ್ತಲೇ ಇರುತ್ತವೆ. ಆದ್ದರಿಂದಲೇ ಪ್ರಸಿದ್ಧ ಕವಿಯೊಬ್ಬ: ''ಮನುಷ್ಯನಿಗೆ ದುಃಖ ಸ್ಥಿರ, ಸ್ಥಾಯಿಯಾದದ್ದು. ಸಂತೋಷ ಬಂದು ಹೋಗೋ ಗೆಳೆಯ'' ಎಂದಿರುವುದು.

ನಾವು ನಮ್ಮ ಬಗ್ಗೆ ಚಿಂತನೆ ಮಾಡೋಣ, ಚಿಂತೆಯನ್ನಲ್ಲ. ಅನ್ಯರ ಬಗ್ಗೆಯೂ ಹಾಗೆಯೇ. ಬೇರೆಯವರ ದುಃಖವನ್ನು ಕಂಡು ನಾವು ದುಃಖಿಸುವುದರಿಂದ, ಅವರ ದುಃಖ ಕಡಿಮೆಯಾಗುವುದಿಲ್ಲ. ಅದಕ್ಕಾಗಿಯೇ ಬಸವಣ್ಣ ಹೀಗೆ ಹೇಳಿರುವುದು:

*ಲೋಕದ ಡೊಂಕ ನೀವೇಕೆ ತಿದ್ದುವಿರಿ?*
*ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ*
*ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ*
*ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ*
*ನಮ್ಮ ಕೂಡಲ ಸಂಗಮದೇವ!*

ಮೊದಲು ನಮ್ಮನ್ನ ನಾವು ಸುಧಾರಿಸಿಕೊಳ್ಳಬೇಕು. ಇತರರನ್ನು ಸಂತೈಸಲು, ನೆರವಾಗಲು, ಪ್ರಯತ್ನಿಸಬೇಕೇ ಹೊರತು ಅವರೊಂದಿಗೆ ಕೂತು ದುಃಖಿಸುವುದರಿಂದ, ಚಿಂತೆ ಮಾಡುವುದರಿಂದ ಪ್ರಯೋಜನವಿಲ್ಲ.

'ಚಿಂತೆ' ಯಾವಾಗ ತಾನೆ ಇಲ್ಲ? ಬೇಕಾದ್ದು ಇದ್ದರೂ

ಸುಜಾತ ಲಕ್ಷ್ಮೀಪುರ

**ಮೊದಲಿಗೆ ನಾವು ಅರ್ಥ ಮಾಡಿಕೊಳ್ಳಬೇಕಾದ ಸಂಗತಿ ಎಂದರೆ ಚಿಂತೆ ಸರ್ವವ್ಯಾಪಿ ಎಂಬುದು. ಎಲ್ಲಾ ಕಡೆಯಲ್ಲೂ, ಎಲ್ಲಾ ಕಾಲದಲ್ಲೂ ಮನುಷ್ಯರು ಚಿಂತೆ ಮಾಡುತ್ತಲೇ ಇರುತ್ತಾರೆ. ಇದು ಮನುಷ್ಯನ ಸ್ವಭಾವ. ಆದರೆ, ಚಿಂತೆ ನಿಷ್ಪ್ರಯೋಜಕ. ಕೆಲಸಕ್ಕೆ ಬಾರದ ಯೋಚನೆಗಳಿಂದ ಏನೂ ಪ್ರಯೋಜನವಿಲ್ಲ, ಆದ್ದರಿಂದ ಅವುಗಳನ್ನು ನಿಯಂತ್ರಿಸಬೇಕು. ತನ್ನ ಸ್ಥಿತಿ-ಗತಿಗಾಗಿ ಅನ್ಯರನ್ನು ದೂಷಿಸುತ್ತಾ, ಟೀಕೆ ಮಾಡುತ್ತಾ ದುಃಖಿಸುತ್ತಾ ಓಡುವವರು ನಮ್ಮ ಸುತ್ತಮುತ್ತ ಕಾಣುತ್ತಲೇ ಇರುತ್ತಾರೆ. ಆದರೆ, ನಿಜಕ್ಕೂ ಬಹುಪಾಲು ನಮ್ಮ ದುಃಖಕ್ಕೆ ನಾವೇ ಕಾರಣ ಎಂಬುದನ್ನು ನಾವು ಅರಿಯಬೇಕಾಗಿದೆ.**

ಚಿಂತೆ, ಇಲ್ಲದಿದ್ದರೂ ಚಿಂತೆ. ಒಟ್ಟಿನಲ್ಲಿ ಅನುಗಾಲವೂ ಚಿಂತೆಯೇ. ಅದಕ್ಕಾಗಿಯೇ ಪುರಂದರದಾಸರು –

*ಸತಿಯು ಇದ್ದರೆ ಚಿಂತೆ । ಸತಿಯು ಇಲ್ಲದ ಚಿಂತೆ*
*ಮತಿಹೀನೆ ಸತಿಯಾದರೂ ಚಿಂತೆಯು*
*ಪೃಥಿವಿಯೊಳಗೆ ಸತಿ ಕಡುಚೆಲ್ವೆಯಾದರೆ*
*ಮಿತಿ ಮೀರೆ ಇಲ್ಲದ ಮೋಹದ ಚಿಂತೆ ॥*

ಹೆಂಡತಿ ಇದ್ದರೂ ಚಿಂತೆ, ಇರದಿದ್ದರೂ ಚಿಂತೆ, ಅವಳು ಕಡುಚೆಲುವೆಯಾದರಂತೂ ಅವಳ ಸೆರಗು ಬಿಡದೆ ಹಿಂದೆಯೇ ಅಡ್ಡಾಡುವ ಮೋಹದ ಚಿಂತೆ ಎಂದು ಮನುಷ್ಯನ ವರ್ತನೆ ಕುರಿತು ಹಾಡಿದ್ದಾರೆ.

'ಚಿಂತೆ' ನಮ್ಮನ್ನೇ ಸುಡುತ್ತದೆ, ಎಂಬುದನ್ನು ಅಕ್ಕನ ಒಂದು ವಚನ ಹೀಗೆ ವಿವರಿಸುತ್ತದೆ :

*ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ*
*ತನ್ನ ನೂಲ ತನ್ನನೇ ಸುತ್ತಿ ಸುತ್ತಿ ಸಾವತೆರನಂತೆ !*
*ಮನ ಬಂದುದ ಬಯಸಿ ಬಯಸಿ ಬೇವುತ್ತಿರುವೆನಯ್ಯಾ !*
*ಅಯ್ಯಾ ಎನ್ನ ಮನದ ದುರಾಶೆಯ ಮಾಣಿಸಿ*
*ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನ.*

ರೇಶಿಮೆ ಹುಳು ತನ್ನ ಸುತ್ತ ತಾನೇ ಕೋಟೆಯನ್ನು ಕಟ್ಟಿಕೊಂಡು ಅದರಲ್ಲಿ ಸಿಕ್ಕಿಹಾಕಿಕೊಂಡು ಒದ್ದಾಡುವಂತೆ, ಜೇಡ ತಾನೇ ನೆಯ್ದ ಬಲೆಯೊಳಗೆ ಬಂಧಿಯಾಗುವಂತೆ, ಮನುಷ್ಯ ತನ್ನ ಮನಸ್ಸಿನಲ್ಲಿ ಚಿಂತೆಯ ಬಲೆ ನೆಯ್ಯುತ್ತಾ, ನೆಯ್ಯುತ್ತಾ, ಅದರಲ್ಲಿ ಸಿಲುಕಿಕೊಂಡು, ಅದರಿಂದ ಹೊರಗೆ ಬರಲಾರದೆ – ವಿಲವಿಲನೆ ಒದ್ದಾಡಿ ದಿನ ದಿನ ಸಾಯುತ್ತಿರುತ್ತಾನೆ. ಅದಕ್ಕಾಗಿಯೇ ಅಲ್ಲಮನು ಹೇಳಿದ್ದು :

*ಆಸೆಗೆ ಸತ್ತುದು ಕೋಟಿ !*
*ಆಮಿಷಕ್ಕೆ ಸತ್ತುದು ಕೋಟಿ,*
*ಹೊನ್ನು - ಹೆಣ್ಣು - ಮಣ್ಣಿಂಗೆ ಸತ್ತುದು ಕೋಟಿ !*
*ಗುಹೇಶ್ವರ*
*ನಿಮಗಾಗಿ ಸತ್ತವರನಾರನೂ ಕಾಣೆ ॥*

ನಿಜವಾಗಿ, ಅವಶ್ಯಕವಾಗಿ ಯಾವುದಕ್ಕಾಗಿ ನಾವು ಚಿಂತನೆ ಮಾಡಬೇಕೋ ಅದನ್ನು ಮಾಡಿದಾಗ ಪ್ರಯೋಜನ, ಮನಸ್ಸಿಗೆ ನೆಮ್ಮದಿ, ಸುಖಶಾಂತಿ ಸಾಧ್ಯ. ಶಿಶುನಾಳ ಶರೀಫರು ''ಚಿಂತೆಯೆಂಬುದು ನಿಜವಾಗಿರಲಿ'' ಎನ್ನುವುದು ಈ ಅರ್ಥದಲ್ಲೆ:

*ಎಂಥೆಂಥಾದ್ದು ಎಲ್ಲಾನುಬರಲಿ*
*ಚಿಂತೆಯೆಂಬುದು ನಿಜವಾಗಿರಲಿ*
*ಅಂತರಂಗದಿ ಗುರುವಿನ ಧ್ಯಾನವು*
*ಸಂತತ ಕಾಲದಿ ತಾ ನಿಜವಾಗಿರಲಿ.*

ತುಂಬಾ ಅರ್ಥಪೂರ್ಣವಾದ ಮಾತುಗಳಿವು. ಉದಾಹರಣೆಗೆ, ವಿದ್ಯಾರ್ಥಿಗಳಿಗೆ ವಿದ್ಯೆ ಕಲಿಕೆಯೇ ನಿರಂತರ ಚಿಂತೆಯಾಗಿದ್ದರೆ, ಅದಕ್ಕಾಗಿ ಅವರು ಓದು-ಬರಹ, ಕಲಿಕೆ, ಆಲೋಚನೆಯಲ್ಲಿ ಸತತವಾಗಿ ತಮ್ಮನ್ನು ತೊಡಗಿಸಿಕೊಂಡು ಉನ್ನತಿಗೆ ಬರಲು ಸಾಧ್ಯವಾಗುತ್ತದೆ.

''ಆಸೆಯೇ ದುಃಖಕ್ಕೆ ಮೂಲ'' – ಬಹಳ ಹಿಂದೆಯೇ ಗೌತಮ ಬುದ್ಧ ಹೇಳಿದ್ದಾನೆ. ಸರಳ ಜೀವನದಿಂದ, ನಮ್ಮ ಇತಿ-ಮಿತಿಗಳನ್ನು ಅರಿಯುವುದರಿಂದ, ಕೈಗೆಟುಕುವ, ಸಾಧಿಸಲು ಸಾಧ್ಯವಿರುವ ಕನಸುಗಳನ್ನು, ಗುರಿಗಳನ್ನು ಇಟ್ಟುಕೊಂಡು ಕ್ರಿಯಾಶೀಲರಾಗುವುದರಿಂದ, ಅನವಶ್ಯಕ ಸಂಗತಿಗಳ ಕಡೆ ಗಮನ ಕೊಡದೆ, ತನ್ನ ಕರ್ತವ್ಯವನ್ನು ಗಮನವಿಟ್ಟು ಮಾಡುತ್ತಾ, ಸೌಹಾರ್ದಯುತವಾಗಿ ಪರಸ್ಪರರೊಡನೆ ಬೆರೆಯುತ್ತಾ – ಹೀಗೆ ಆರೋಗ್ಯಕರವಾದ ವರ್ತನೆಗಳಿಂದ, ಆಲೋಚನೆಗಳಿಂದ, ದುಃಖವನ್ನು, ಚಿಂತೆಯನ್ನು ದೂರವಿಡಲು ಸಾಧ್ಯ.

''ಕಾಯಕವೇ ಕೈಲಾಸ'' ಎಂದರು ಶರಣರು. ಕಾಯಕವೇ 'ಚಿಂತೆ'ಗೆ ರಾಮಬಾಣ ಎನ್ನುತ್ತೇನೆ. 'ಚಿಂತೆ'ಯನ್ನು ಅಟ್ಟಿಬಿಡಲು ದುಡಿಯಬೇಕು, ದುಡಿಮೆಯಲ್ಲಿ ತೊಡಗಿಕೊಂಡವನಿಗೆ ಚಿಂತೆ ಮಾಡಲು ವೇಳೆಯೇ ಸಿಗುವುದಿಲ್ಲ. ಆದರೆ, ಸುಮ್ಮನೆ ಕುಳಿತು ಕಾಲ ಕಳೆವ ಮಂದಿಗೆ 'ಚಿಂತೆ' ಮಾಡುವುದೇ ಮಹಾನ್ ಕಾರ್ಯ ! ಆದ್ದರಿಂದ, ಯಾರಾದರೂ ''ನಾನು ಈಗಿನಿಂದಲೇ ಚಿಂತೆ ಮಾಡುವುದನ್ನು ನಿಲ್ಲಿಸುತ್ತೇನೆ'' ಎಂದು ನಿರ್ಧಾರ ಮಾಡುವುದಾದರೆ, ಅವರು ತಕ್ಷಣವೇ ''ನಾನು ಈಗಿನಿಂದಲೇ ಈ ಕೆಲಸ ಮಾಡಿ ಮುಗಿಸುತ್ತೇನೆ'', ''ಈ ಪುಸ್ತಕವನ್ನು ಈಗಲೇ ಓದಿ ಮುಗಿಸುತ್ತೇನೆ'' ಎಂದು ಗಟ್ಟಿಯಾಗಿ ನಿರ್ಧರಿಸಿ, ಅದರಲ್ಲಿ ತೊಡಗಿಕೊಂಡುಬಿಡಬೇಕು. ಕೂತು ಕೆಟ್ಟವರುಂಟು. ದುಡಿದು ಕೆಟ್ಟವರಿಲ್ಲ. ಈಗಿನಿಂದಲೇ 'ಚಿಂತೆ'ಗೆ ಬದಲಾಗಿ ಚಿಂತನೆ, ದುಡಿಮೆ ನಮ್ಮ ದಾರಿಯಾಗಲಿ.

ಸುಜಾತ ಲಕ್ಷ್ಮೀಪುರ
ಹೊಸ ನಂ. ೩.೨೧, ೭ನೇ ಕ್ರಾಸ್, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೯೯

## ಮೂಗಿನ ತುದಿ ಮತ್ತು ಬುದ್ಧ



ಮೊನ್ನೆ
ಅಂಗಡಿಯಲ್ಲಿ ಕಂಡ
ಧ್ಯಾನಸ್ಥ ಬುದ್ಧ
ಅಸಂಖ್ಯಾತ ದೇವರುಗಳ ಮಧ್ಯೆ
ಕೊಂಡು ತಂದೆ ಮಣ್ಣ ಮೂರ್ತಿಯನ್ನು
ಹುಲ್ಲು ಹಾಸಿನ
ಕಾಗದದ ಪೆಟ್ಟಿಗೆಯಲ್ಲಿಟ್ಟು
ಮನೆಗೆ ತಂದು ನೋಡುತ್ತೇನೆ
ಬುದ್ಧನ ಮೂಗಿನ ತುದಿಯೇ ಇಲ್ಲ!
ಎಲ್ಲರೆಂದರು ಅಪಶಕುನ
ಬೇಗ ಬದಲಾಯಿಸಿ ಭಗ್ನ ಮೂರ್ತಿಯನ್ನು
ಕುಳಿತೆ ಬುದ್ಧನ ಮುಂದೆ ಧ್ಯಾನಿಸುತ್ತ
ಪರಿಪೂರ್ಣತೆಯ ಆಶಿಸುತ್ತ

ಹರಳುಗಟ್ಟದ ಬುದ್ಧ ಪೂರ್ಣಗೊಳ್ಳದ ಬಿಂಬ
ಅಮೂರ್ತದಲ್ಲೂ ಊನ
ಬಾಹ್ಯ ಭಗ್ನತೆಗಿಲ್ಲ
ಅಂತರಂಗದ ಲೇಪ
ಕಾಯುತ್ತಿದ್ದೇನೆ ಅಂದಿನಿಂದ
ಹುಟ್ಟೀತೆ
ಮೂಗಿನ ತುದಿಯಷ್ಟಾದರೂ ಬುದ್ಧತ್ವ ?
ಮೂಡೀತೆ
ಪೂರ್ಣತ್ವ ?

ಡಾ॥ ಸಿ. ರವೀಂದ್ರನಾಥ್
ನಂ.೬, ಎಂ.ಐ.ಜಿ.II, ಕೆ.ಎಚ್.ಬಿ.ಕಾಲೋನಿ
ಗಾಂಧಿನಗರ, ಯಲಹಂಕ
ಬೆಂಗಳೂರು -೬೪.

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna

**HOSATHU** Kannada Monthly / October 2008 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.